




ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆ - ಪುಷ್ಪ : ೩೬

# ಕರುನಾಡಿನ ಜನಜೀವನ

ಲೇಖಕರು

ಡಾ. (ಶ್ರೀಮತಿ) ಜ್ಯೋತ್ಸ್ನಾ ಕಾಮತ




ಕರ್ನಾಟಕ ಇತಿಹಾಸ ಸಂಶೋಧನ ಮಂಡಲ
ಧಾರವಾಡ - ೫೮೦ ೦೦೧

೨೦೦೭-೨೦೦೮

ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆ - ಪುಷ್ಪ : ೩೬

# ಕರುನಾಡಿನ ಜನಜೀವನ

ಲೇಖಕರು

**ಡಾ. (ಶ್ರೀಮತಿ) ಜ್ಯೋತ್ಸ್ನಾ ಕಾಮತ**



ಕರ್ನಾಟಕ ಇತಿಹಾಸ ಸಂಶೋಧನ ಮಂಡಲ
ಧಾರವಾಡ - ೫೮೦ ೦೦೧

೨೦೦೭-೨೦೦೮

**Karunāḍina Janajeevana,** by Dr. Smt. Jotshana, Kamat, Bangalore.

| | | |
|---|---|---|
| Published by | : | Honouraury Secretary<br>Karnataka Historical Research Society,<br>Dharwad-580001 |
| Size | : | 1/8 Demy |
| Paper used | : | 60 CGSM Maplitho |
| Pages | : | 178 |
| Price | : | Rs.75/- |
| Year | : | 2008 |
| Copies | : | 1000 |



**ಕರುನಾಡಿನ ಜನಜೀವನ**

| | | |
|---|---|---|
| ಲೇಖಕರು | : | **ಡಾ.(ಶ್ರೀಮತಿ) ಜ್ಯೋತ್ಸ್ನಾ ಕಾಮತ**<br>ಬೆಂಗಳೂರು ಆಕಾಶವಾಣಿಯ ನಿರ್ದೇಶಕಿ (ನಿ.)<br>ರಾಜ್ಯಸಾಹಿತ್ಯ ಅಕಾಡೆಮಿ ಮತ್ತು ರಾಜ್ಯಪ್ರಶಸ್ತಿ<br>ವಿಜೇತರು, ಬೆಂಗಳೂರು |
| ಪ್ರಕಾಶಕರು | : | **ಗೌರವ ಕಾರ್ಯದರ್ಶಿ**<br>ಕರ್ನಾಟಕ ಇತಿಹಾಸ ಸಂಶೋಧನ ಮಂಡಲ<br>ಧಾರವಾಡ - ೫೮೦ ೦೦೧<br>೦೮೩೬-೨೪೪೧೧೩೧ |
| ಹಕ್ಕುಗಳು | : | ಲೇಖಕರು ಮತ್ತು ಪ್ರಕಾಶಕರು |
| ವರ್ಷ | : | ೨೦೦೮ |
| ಪುಟಗಳು | : | ೧೭೮ |
| ಪ್ರತಿಗಳು | : | ೧೦೦೦ |
| ಬೆಲೆ | : | ರೂ. ೭೫/- |
| ಅಕ್ಷರ ಸಂಯೋಜಕರು | : | ವಚನ ಗ್ರಾಫಿಕ್ಸ, ಧಾರವಾಡ-೧ |
| ಮುದ್ರಕರು | : | ಸರಸ್ವತೀ ಆಫ್‌ಸೆಟ್ ಮುದ್ರಣಾಲಯ<br>ಶಿವಾಜಿ ಬೀದಿ, ಧಾರವಾಡ-೧ |

ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ-೧

ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆ

## ಸಂಪಾದಕ ಮಂಡಲಿ





**ಡಾ.ಎ.ಕೆ. ಶಾಸ್ತ್ರಿ**
ನಿವೃತ್ತ ಅಧ್ಯಕ್ಷರು, ಇತಿಹಾಸ ವಿಭಾಗ,
ಶಿರಸಿಯ ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ

**ಡಾ. ದೇವರಕೊಂಡಾರೆಡ್ಡಿ**
ಪ್ರಾಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿ.ವಿ.
ಹಂಪಿ, ವಿದ್ಯಾರಣ್ಯ

**ಡಾ. ಶಾಲಿನಿ ರಘುನಾಥ**
ಅಧ್ಯಕ್ಷರು, ಜಾನಪದ ಅಧ್ಯಯನ ವಿಭಾಗ,
ಕರ್ನಾಟಕ.ವಿ.ವಿ.,ಧಾರವಾಡ

**ಡಾ.ವೀರಣ್ಣ ರಾಜೂರ**
ಅಧ್ಯಕ್ಷರು(ನಿ.), ಕನ್ನಡ ಅಧ್ಯಯನ ಪೀಠ ಮತ್ತು
ಸಂಯೋಜಕರು ಶ್ರೀ ಬಸವೇಶ್ವರ ಪೀಠ
ಕರ್ನಾಟಕ ವಿ.ವಿ., ಧಾರವಾಡ

**ಡಾ. ಜೀವಿ.ಕುಲಕರ್ಣಿ**
ಸಾಹಿತಿ
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಎಂ.ವಿ.ಕಾಲೇಜು, ಅಂಧೇರಿ, ಮುಂಬಯಿ

**ಡಾ. ಪಿ.ಆರ್. ಪಂಚಮುಖಿ**
ಸಿ.ಎಂ.ಡಿ.ಆರ್.ದ ನಿವೃತ್ತ ನಿರ್ದೇಶಕರು,
ಧಾರವಾಡ

**ಡಾ. ಅರಳುಮಲ್ಲಿಗೆ ಪಾರ್ಥಸಾರಥಿ**
ನಿರ್ದೇಶಕರು, ಹರಿದಾಸ ಅಕಾದೆಮಿ, ಬೆಂಗಳೂರು ಮತ್ತು
ಅಧ್ಯಕ್ಷರು, ವಿಷ್ಣುಸಹಸ್ರನಾಮ ಟ್ರಸ್ಟ್, ಬೆಂಗಳೂರು

**ಶ್ರೀ ಲಕ್ಷ್ಮೀನಾರಾಯಣ ಎಚ್.ಬಿ.**
ನಿರ್ದೇಶಕರು,ರಾಷ್ಟ್ರೀಯ ವೇದವಿಜ್ಞಾನ ಸಂಸ್ಥೆ,
ಬೆಂಗಳೂರು

## ಸಂಸ್ಮರಣೆ

ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ
**ಮಾಜೀ ಅಧ್ಯಕ್ಷರು**



ನ್ಯಾಯಮೂರ್ತಿ
ಶ್ರೀ ನಿಟ್ಟೂರು ಶ್ರೀನಿವಾಸರಾಯರು
(೧೯೦೩-೨೦೦೪)

– ಪ್ರಕಾಶಕರು

# ಕರ್ನಾಟಕ ಇತಿಹಾಸ ಸಂಶೋಧನ ಮಂಡಳ

## ಧಾರವಾಡ

## ಮಂಡಲದ ಮುನ್ನುಡಿ

ಧಾರವಾಡದಲ್ಲಿರುವ ಕರ್ನಾಟಕ ಇತಿಹಾಸ ಸಂಶೋಧನ ಮಂಡಲವು ದಕ್ಷಿಣ ಭಾರತದ ಪ್ರಾಚೀನ ಸಂಶೋಧನ ಕೇಂದ್ರಗಳಲ್ಲಿ ಪ್ರಸಿದ್ಧಿ ಪಡೆದ ಒಂದು ಸಂಸ್ಥೆಯಾಗಿದೆ. ಈ ಸಂಸ್ಥೆಯ ಕಿರುಪರಿಚಯವನ್ನು ಮಾಡಿಕೊಳ್ಳಲು ಬಯಸುವವರಿಗೆ ಇದರ ಸ್ಥಾಪನೆಯ ಪೂರ್ವದಲ್ಲಿ ಅಂದರೆ ೧೯೧೪ ರ ಮೊದಲು ಮತ್ತು ಅನಂತರದ ಕೆಲವು ಘಟನೆಗಳನ್ನು ಅರಿತುಕೊಳ್ಳಬೇಕಾಗುತ್ತದೆ. ಈ ಉದ್ದೇಶದಿಂದ ಮತ್ತು ಈ ಘಟನೆಗಳು ಸ್ವಾರಸ್ಯ ಪೂರ್ಣವಾಗಿರುವುದರಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸಲು ಬಯಸುತ್ತೇನೆ. ಮಂಡಲ ದಿಂದ ಪ್ರಕಟವಾದ ಪಂಚವಾರ್ಷಿಕ ವರದಿ (೧೯೨೦), ವಾರ್ಷಿಕ ವರದಿಗಳು, ಸ್ಮರಣ ಸಂಪುಟಗಳು ಮುಂತಾದವುಗಳು ಇಲ್ಲಿಯ ವಿಷಯಸಂಗ್ರಹಕ್ಕೆ ಆಧಾರವಾಗಿವೆ.

೧೯೧೪ ರ ಮೊದಲು ಬ್ರಿಟೀಷರ ಆಳ್ವಿಕೆಯಲ್ಲಿದ್ದ ಹಿಂದುಸ್ತಾನದ ವಿವಿಧ ಪ್ರಾಂತಗಳ ಜನರು ತಮ್ಮ ತಮ್ಮ ರಾಜರ, ರಾಜಪುರುಷರ, ತಮ್ಮ ಕವಿಗಳ, ಭಾಷೆಯ ಹೆಸರಿನಲ್ಲಿ ಜಯಘೋಷವನ್ನು ಮಾಡುತ್ತ ತಮ್ಮ ತಮ್ಮ ಪ್ರಾಂತದ ಗತವೈಭವವನ್ನು ವ್ಯವಸ್ಥಿತವಾಗಿ ಪ್ರಚಾರ ಮಾಡತೊಡಗಿದ್ದರು. ಇಷ್ಟೇ ಅಲ್ಲ, ಪುಣೆಯ ಶ್ರೀಯುತ ಡಾಕ್ಟರ್ ರಾಮಕೃಷ್ಣ ಗೋಪಾಳ ಭಾಂಡಾರಕರ ಎಂಬ ಪ್ರಸಿದ್ಧ ಇತಿಹಾಸತಜ್ಞರು 'ದಕ್ಷಿಣಾಪಥದ ಪ್ರಾಚೀನ ಇತಿಹಾಸ' ಎಂಬ ಗ್ರಂಥವೊಂದನ್ನು ಬರೆದು ಅದರಲ್ಲಿ ಚಾಲುಕ್ಯರು, ರಾಷ್ಟ್ರಕೂಟರು ಇವರೇ ಮೊದಲಾದ ಅರಸುಮನೆತನದವರು ಮರಾಠಿಗರೆಂದು ವಾದಿಸುವುದಕ್ಕೆ ಪ್ರಯತ್ನಿಸಿದರು. ಕರ್ನಾಟಕಸ್ಥರಿಗೆ ಇತಿಹಾಸವೇ ಇಲ್ಲ ಎಂಬ ಅಪಪ್ರಚಾರವೂ ನಡೆಯಿತು. ಕನ್ನಡಿಗರ ಔದಾರ್ಯ, ಸಹನಶೀಲತೆ, ಕ್ಷಮೆ-ಶಾಂತಿ ಮೊದಲಾದ ಗುಣಗಳನ್ನು ಅವರ ದುರ್ಬಲತೆಯೆಂದು ಭಾವಿಸಿ ಅವರನ್ನು ಹತ್ತಿಕ್ಕುವ, ಅವರ ತೇಜೋಭಂಗ ಮಾಡುವ ಇಂಥ ಅನೇಕ ರೀತಿಯ ಸಂಚುಗಳು ನಡೆಯತೊಡಗಿದವು. ಕನ್ನಡ ಭಾಷೆಯ ಸಾಮಾನ್ಯ ಜನಸಮುದಾಯವು ತಮ್ಮ ಭವ್ಯ ಇತಿಹಾಸ ಹಾಗೂ ಗತವೈಭವದ ಬಗ್ಗೆ ಇನ್ನೂ ಅಜ್ಞಾನಾವಸ್ಥೆಯಲ್ಲಿಯೇ ಇದ್ದುದರಿಂದ ಇದಾವುದನ್ನೂ ಪ್ರತಿಭಟಿಸುವ ಸಂಘಟಿತವಾದ ಕಾರ್ಯವು ನಡೆಯಲಿಲ್ಲ. ಅನ್ಯಜನರಲ್ಲಿ ಭಾಷಾಭಿಮಾನವು ದಿನದಿನಕ್ಕೆ ವೃದ್ಧಿ ಹೊಂದುತ್ತಿರುವಾಗ ಕನ್ನಡಿಗರಲ್ಲಿ ಇತಿಹಾಸ ಜಾಗೃತಿಯಾಗಿರಲಿಲ್ಲ. ಇಂಥ ಸಮಯದಲ್ಲಿ ತಮ್ಮ ಇತಿಹಾಸವನ್ನೂ ಸಂಶೋಧಿಸಿ ತೆಗೆಯಬೇಕೆಂದು ಸ್ವಾಭಿಮಾನಿಗಳಾದ ಕೆಲವು ತರುಣ ಕನ್ನಡಿಗರಲ್ಲಿ ಲವಲವಿಕೆ ಹುಟ್ಟತೊಡಗಿತು. ಆದರೆ ಕನ್ನಡಿಗರ ಇತಿಹಾಸವನ್ನು ತಿಳಿಸುವ ಯಾವ ಪುಸ್ತಕಗಳೂ ಆಗ ಪ್ರಕಾಶಿತವಾಗಿರದಿದ್ದರಿಂದ ತಮಗೆ ಉಜ್ವಲವಾದ ಇತಿಹಾಸವೇ ಇಲ್ಲವೇ? ಎಂದು ಮನಸ್ಸಿನಲ್ಲಿ ಕೊರಗುತ್ತ ಕುಳಿತುಕೊಳ್ಳಬೇಕಾಯಿತು.

ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಕ್ರಿ.ಶ. ೧೯೦೭ ರಲ್ಲಿ ಶ್ರೀಮಾನ್ ರಾವಬಹಾದ್ದೂರ ಆರ್. ನರಸಿಂಹಾಚಾರ್ಯ ಮತ್ತು ಶ್ರೀ ಎಸ್. ಜಿ. ನರಸಿಂಹಾಚಾರ್ಯರು

ಸೇರಿ "೧೪ ನೆಯ ಶತಮಾನದ ಕೊನೆಯ ವರೆಗೆ ಆಗಿಹೋದ ಕರ್ನಾಟಕ ಕವಿಗಳ ಚರಿತೆ" ಎಂಬ ಗ್ರಂಥವನ್ನು ಬರೆದು ಪ್ರಸಿದ್ಧಿಸಿದ್ದರು. ಅದೇ ವರ್ಷ ಶ್ರೀಯುತ ವ್ಹಿ.ಬಿ. ಹಾಲಭಾವಿಯವರು ಕನ್ನಡ ಭಾಷೆಯಲ್ಲಿ "ವಿಜಯನಗರ ಸಾಮ್ರಾಜ್ಯದ ಇತಿಹಾಸ" ಎಂಬ ಗ್ರಂಥವನ್ನು ಬರೆದು ಪ್ರಕಾಶಪಡಿಸಿದರು. ಮುಂದೆ ೧೯೧೮ ರಲ್ಲಿ ಶ್ರೀಮಾನ್ ಆಲೂರು ವೆಂಕಟರಾಯರು ಶ್ರೀ ವಿದ್ಯಾರಣ್ಯರ ಚರಿತ್ರೆಯನ್ನು ಬರೆದು ಪ್ರಸಿದ್ಧ ಮಾಡಿದರು. ಕ್ರಿ.ಶ. ೧೯೧೨-೧೩ ರಲ್ಲಿ ಶ್ರೀ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಪುಣೆಯ ಪಟ್ಟಣದಲ್ಲಿ ಪ್ರಸಿದ್ಧವಾಗುವ "ಕೇಸರಿ" ಎಂಬ ಸುಪ್ರಸಿದ್ಧವಾದ ಮಹಾರಾಷ್ಟ್ರ ವಾರಪತ್ರಿಕೆಯಲ್ಲಿ ಮಹಾರಾಷ್ಟ್ರ ಮತ್ತು ಕರ್ನಾಟಕ (महाराष्ट्र व कर्नाटक) ಎಂಬ ಶೀರ್ಷಿಕೆಯ ಅಡಿಯಲ್ಲಿ ೭ ಲೇಖನಗಳನ್ನು ಬರೆದು, ಡಾಕ್ಟರ್ ಭಾಂಡಾರಕರರ ಮತಗಳನ್ನು ಸಪ್ರಮಾಣವಾಗಿ ಖಂಡಿಸಿ, ಚಾಲುಕ್ಯರು, ರಾಷ್ಟ್ರಕೂಟರು, ದೇವಗಿರಿಯ ಯಾದವರು ಇವರೇ ಮೊದಲಾದ ಅರಸು ಮನೆತನದವರೆಲ್ಲ ಕನ್ನಡಿಗರು ಎಂಬುದನ್ನು ಸ್ಪಷ್ಟವಾಗಿ ಸಿದ್ಧಪಡಿಸಿದರು ಹಾಗೂ ಕನ್ನಡ, ಮರಾಠಿ ವಾಙ್ಮಯಗಳ ಆಧಾರದಿಂದ ಪ್ರಾಚೀನ ಕಾಲದಲ್ಲಿ ಪುಣೆ, ನಾಸಿಕ, ಪೈಠಣ ಪಟ್ಟಣಗಳ ವರೆಗೆ ಎಂದರೆ ಗೋದಾವರಿ ನದಿಯ ವರೆಗೆ ಕನ್ನಡ ಭಾಷೆಯು ಪ್ರಚಾರ ದಲ್ಲಿತ್ತೆಂಬುದನ್ನು ಈ ಲೇಖನಮಾಲೆಯಿಂದ ಸ್ಪಷ್ಟಪಡಿಸಿದರು. ಶ್ರೀ ರಾಜಪುರೋಹಿತರ ಈ ಲೇಖನಮಾಲೆಯಿಂದ ಮಹಾರಾಷ್ಟ್ರ ಜನರಲ್ಲಿ ಕನ್ನಡಿಗರ ಇತಿಹಾಸದ ಬಗ್ಗೆ ನೆಲೆಗೊಂಡ ತಪ್ಪು ಕಲ್ಪನೆಗಳು ದೂರಾದವು ಮತ್ತು ಉತ್ತರ ಕರ್ನಾಟಕದ ಕನ್ನಡಿಗರಲ್ಲಿ ಕರ್ನಾಟಕದ ಇತಿಹಾಸದ ಬಗ್ಗೆ ಚೆನ್ನಾಗಿ ಅಭಿಮಾನವುಂಟಾಯಿತು. ತಮ್ಮದು ಅಪಾರ ಕೀರ್ತಿಗಳಿಸಿ ಮೆರೆದ ಭವ್ಯ ನಾಡು ಎಂಬ ಅರಿವು ಉಂಟಾಗಿ ಕರ್ನಾಟಕದ ಎಲ್ಲ ಕನ್ನಡಿಗರಲ್ಲಿ ಚೈತನ್ಯವುಂಟಾಯಿತು. ಈ ರೀತಿ ಗ್ರಂಥಪ್ರಕಾಶನ ಹಾಗೂ ಲೇಖನಗಳ ಮೂಲಕ ನಡೆಸಿದಂತೆ ಕೆಲವು ಹಿರಿಯರು ಕರ್ನಾಟಕ ಪ್ರಾಂತದ ವಿವಿಧ ಕಡೆಗಳಲ್ಲಿ ಹಾಗೂ ಹೊರಗೆ ಪ್ರವಚನ ಮಾಡುವ ಮೂಲಕವೂ ಕನ್ನಡಿಗರಲ್ಲಿಯ ಸ್ವಾಭಿಮಾನವನ್ನು ಬಡಿದೆಬ್ಬಿಸುವ ಕಾರ್ಯವನ್ನು ಮುಂದುವರೆಸಿದರು.

ಕ್ರಿ.ಶ. ೧೯೧೪ ನೆಯ ಅಗಸ್ಟ್ ೩ ನೆಯ ತಾರೀಖಿನ ದಿನ ಶ್ರೀಯುತ ಆಲೂರು ವೆಂಕಟರಾಯರು ಪುಣೆಯ ಡೆಕ್ಕನ್ ಕಾಲೇಜಿನಲ್ಲಿ "ಕರ್ನಾಟಕದ ಗತ ವೈಭವ" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಇವರ ಭಾಷಣದಿಂದ ಪ್ರಭಾವಿತರಾದ ಮತ್ತು ಸ್ವಾಭಿಮಾನದಿಂದ ಪ್ರೇರಿತರಾದ ಅಲ್ಲಿಯ ಕನ್ನಡ ವಿದ್ಯಾರ್ಥಿಗಳು ತಮ್ಮ ಒಬ್ಬ ಮಿತ್ರನ ಸ್ಮಾರಕಕ್ಕಾಗಿ ಕೂಡಿಸಿಟ್ಟ ಒಂದು ನೂರು ರೂಪಾಯಿಗಳನ್ನು ಶ್ರೀ ಆಲೂರು ವೆಂಕಟರಾಯರ ಕೈಯಲ್ಲಿ ಕೊಟ್ಟು, ಕರ್ನಾಟಕದ ಇತಿಹಾಸ, ಸಂಸ್ಕೃತಿ, ಶಿಲ್ಪ, ಕಲೆ ಮೊದಲಾದವುಗಳನ್ನು ಅಭ್ಯಾಸ ಮಾಡುವುದಕ್ಕಾಗಿ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ ಎಂಬ ಹೆಸರಿನಲ್ಲಿ ಒಂದು ಸಂಸ್ಥೆಯನ್ನು ಧಾರವಾಡದಲ್ಲಿಸ್ಥಾಪಿಸುವಂತೆ ಪ್ರಾರ್ಥಿಸಿದರು. ಶ್ರೀರುಕ್ಮಾಂಗದರಾವ ಗೋ. ದೇಶಪಾಂಡೆ, ಶ್ರೀ ವೆಂಕಟೇಶ ಬೆಳವಿ, ಶ್ರೀ ವೆಂಕಟೇಶ ಆಲಬಾಲ, ಶ್ರೀ ಹಣಮಂತ ಸೂರ್ಯವಂಶಿ, ಶ್ರೀ ಪ್ರಾಣೇಶ ಸಿದ್ಧಾಂತಿ, ಶ್ರೀ ಕೃಷ್ಣ ದೇಶಪಾಂಡೆ, ಶ್ರೀ ತಮಣಾಚಾರ್ಯ ಪುರೋಹಿತ, ಶ್ರೀ ಬಳವಂತರಾವ ದಾತಾರ, ಶ್ರೀ ರಂಗೋಕೃಷ್ಣ ಅಸುಂಡಿ, ಶ್ರೀ ರಾಮರಾವ ಸಾಲಿ, ಶ್ರೀ ವೆಂಕಟೇಶ ಡಂಬಳ ಇವರೇ ಮೊದಲಾದ ಡೆಕ್ಕನ್ ಕಾಲೇಜಿನ ಸ್ವಾಭಿಮಾನಿಗಳಾದ ಆ ಕನ್ನಡ ವಿದ್ಯಾರ್ಥಿಗಳನ್ನು

ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ. ವಿಶೇಷವಾಗಿ ಈ ಸಂದರ್ಭದಲ್ಲಿ ಅವರೆಲ್ಲರನ್ನು ಅತ್ಯಂತ ಗೌರವಪೂರ್ವಕವಾಗಿ ಸ್ಮರಿಸುತ್ತೇವೆ. ಈ ಎಲ್ಲ ತರುಣ ವಿದ್ಯಾರ್ಥಿಗಳ ಆಗ್ರಹದಿಂದ ಮತ್ತು ಶುಭೇಚ್ಛೆಯ ಪ್ರಕಾರ ಅದೇ ವರ್ಷ ಧಾರವಾಡದಲ್ಲಿ ವಿಜಯದಶಮಿಯ ಶುಭ ಮಹೂರ್ತದಲ್ಲಿ (ದಿ. ೨೮-೯-೧೯೧೪) **"ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ"** ಎಂಬ ಸಂಸ್ಥೆಯನ್ನು "ಶ್ರೀ ವೆಂಕಟರಾವ ಆಲೂರು, ಶ್ರೀರಾಮರಾವ ನರಗುಂದಕರ, ಶ್ರೀ ನಾರಾಯಣ ಶ್ರೀನಿವಾಸ ರಾಜಪುರೋಹಿತ, ಶ್ರೀ ನಾರಾಯಣರಾವ ದೇಶಪಾಂಡೆ, ಶ್ರೀ ನರಸಿಂಹಾಚಾರ್ಯ ಪುಣೇಕರ ಉರ್ಫ ಕಾವ್ಯಾನಂದ, ಶ್ರೀ ಕಡಪಾ ರಾಘವೇಂದ್ರ ರಾವ, ಶ್ರೀ ವಿಠ್ಠಲರಾವ ಜೋಶಿ, ಶ್ರೀ ಮುದವೀಡು ಕೃಷ್ಣರಾವ, ಶ್ರೀ ರಾಮರಾವ ಜವಳಿ, ಶ್ರೀ ಚಿದಂಬರರಾವ ಆಹೆಟ್ಟಿ, ಶ್ರೀ ಸುಬ್ಬರಾವ ಕುಲಕರ್ಣಿ, ಶ್ರೀ ಭೀಮರಾವ ಬೆಟಗೇರಿ, ಶ್ರೀ ವೆಂಕಟೇಶ ಹನುಮಂತ ಡಂಬಳ, ಶ್ರೀ ವೆಂಕಟೇಶ ಭೀಮಸೇನಾಚಾರ್ಯ ಡಂಬಳ ಈ ಹದಿನಾಲ್ಕು ಜನ ಖ್ಯಾತಿವೆತ್ತ ಸಂಶೋಧಕರೂ ಕನ್ನಡಾಭಿಮಾನಿಗಳೂ ಸೇರಿ ಸ್ಥಾಪಿಸಿದರು. ಈ ರೀತಿ ದೇಶದ ಮತ್ತು ಕರ್ನಾಟಕದ ಧೀಮಂತ ಸಂಸ್ಕೃತಿಯ ಮಹೋನ್ನತಿಯ ಸಾಕ್ಷಾತ್ಕಾರವನ್ನು ಜನಸಾಮಾನ್ಯರೂ ಪಡೆಯಬೇಕೆಂಬ ಹಂಬಲವುಳ್ಳ ಕರ್ನಾಟಕ ಇತಿಹಾಸ ಸಂಶೋಧನ ಮಂಡಲವು ೧೯೧೪ ರಲ್ಲಿ ಜನ್ಮ ತಾಳಿತು. ನಂತರ ಕರ್ನಾಟಕದ ಗತವೈಭವವನ್ನು ಜನಸಾಮಾನ್ಯರಿಗೂ ತಿಳಿಸಿಕೊಟ್ಟು ಕನ್ನಡಿಗರಲ್ಲಿ ಸ್ವಾಭಿಮಾನವನ್ನು, ಜಾಗೃತಿಯನ್ನು, ದೇಶಾಭಿಮಾನವನ್ನು ಹೆಚ್ಚಿಸುವುದು, ಇದಕ್ಕಾಗಿ ಮೂಲಭೂತ ಆಧಾರಗಳಿಂದ ನಮ್ಮ ಕನ್ನಡ ನಾಡಿನ ಇತಿಹಾಸ, ಸಾಹಿತ್ಯ, ಸಂಸ್ಕೃತಿ, ಕಲೆಗಳ ಅಭ್ಯಾಸ ಮಾಡಿ ಈಗಿನ ಸಮಾಜಕ್ಕೆ ಉಪಯುಕ್ತವಾಗುವಂತೆ ಪುಸ್ತಕಗಳನ್ನು ಪ್ರಕಟಿಸುವುದು, ಪ್ರಾಚೀನ ಹಸ್ತಪ್ರತಿಗಳನ್ನು ಹಾಗೂ ದಾಖಲೆಗಳನ್ನು ಸಂಗ್ರಹಿಸಿ-ಸಂಶೋಧಿಸಿ ಅವುಗಳನ್ನು ಪ್ರಕಾಶಿಸುವುದು, ಉಪನ್ಯಾಸ-ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು, ಮುಂತಾದ ಧ್ಯೇಯಗಳನ್ನಿಟ್ಟುಕೊಂಡು ಮಂಡಲವು ಒಂದು ವ್ಯವಸ್ಥಿತವಾದ ರೀತಿಯಲ್ಲಿ ಕಾರ್ಯಪ್ರವೃತ್ತವಾಯಿತು. ಈ ಮಂಡಲವನ್ನು ೧೯೩೦ ರಲ್ಲಿ ನೋಂದಾಯಿಸಲಾಯಿತು.

ಮಂಡಲದ ಸ್ಥಾಪನೆಯಾದಾಗಿನಿಂದ ಇಲ್ಲಿಯ ವರೆಗೆ ನಡೆದ ಕೆಲವು ಪ್ರಮುಖ ಘಟನೆಗಳನ್ನು ಮತ್ತು ಕಾರ್ಯಸಾಧನೆಗಳನ್ನು ಸಂಕ್ಷೇಪದಲ್ಲಿ ಈಗ ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ.

**೧. ಐತಿಹಾಸಿಕ ಸಮ್ಮೇಲನಗಳ ಪ್ರಾರಂಭ**

ಉತ್ತರ ಕರ್ನಾಟಕದಲ್ಲಿ ಅಖಿಲ ಕರ್ನಾಟಕ ಐತಿಹಾಸಿಕ ಸಮ್ಮೇಲನಗಳನ್ನು ಮೊಟ್ಟಮೊದಲು ಪ್ರಾರಂಭಿಸಿದ ಖ್ಯಾತಿ ಕರ್ನಾಟಕ ಇತಿಹಾಸ ಸಂಶೋಧನ ಮಂಡಲಕ್ಕೆ ಸಲ್ಲುತ್ತದೆ. ೧೯೧೬ ರಲ್ಲಿ ನಡೆದ ಮೊದಲನೆಯ ಸಮ್ಮೇಲನಕ್ಕೆ ಶ್ರೀಯುತ ವೆಂಕಟರಾವ ಆಲೂರು ಇವರು, ೧೯೧೭ ರಲ್ಲಿ ನಡೆದ ಎರಡನೆಯ ಸಮ್ಮೇಲನಕ್ಕೆ ಶ್ರೀಯುತ ರಾಮಚಂದ್ರರಾವ ದೇಶಪಾಂಡೆ ಇವರು ಮತ್ತು ೧೯೧೮ ರಲ್ಲಿ ಜರುಗಿದ ಮೂರನೆಯ ಸಮ್ಮೇಲನಕ್ಕೆ ಮೈಸೂರ ಆರ್ಕಿಯಾಲಾಜಿಕಲ್ ಖಾತೆಯ ನಿರ್ದೇಶಕರಾಗಿದ್ದ ಶ್ರೀಮಾನ್ ರಾವ ಬಹಾದ್ದೂರ್ ಆರ್. ನರಸಿಂಹಾಚಾರ್ಯರು ಅಧ್ಯಕ್ಷರಾಗಿದ್ದರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ ನೇ ವರ್ಷದ ಮಹೋತ್ಸವ, ಮಂಡಲದ ರಜತಮಹೋತ್ಸವ, ಸುವರ್ಣಮಹೋತ್ಸವ, ನಂತರ ಕೆಲವು ವಿಶಿಷ್ಟ ಸಂದರ್ಭಗಳಲ್ಲಿಯೂ ಐತಿಹಾಸಿಕ ಸಮ್ಮೇಲನಗಳು ನಡೆದಿವೆ.

## ೨. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ ನೆಯ ವರ್ಷದ ಸ್ಮಾರಕೋತ್ಸವ

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ ನೆಯ ವರ್ಷದ ಮಹೋತ್ಸವವನ್ನು ೧೯೩೬ ರಲ್ಲಿ ಹಂಪೆಯಲ್ಲಿ ಅತಿ ವೈಭವದಿಂದ ಆಚರಿಸಲಾಯಿತು. ಆಗ ಲಕ್ಷಾವಧಿ ಜನರು ಸ್ವಯಂಪ್ರೇರಣೆಯಿಂದ ಈ ಉತ್ಸವದಲ್ಲಿಯ ಐತಿಹಾಸಿಕ ಸಮ್ಮೇಲನ- ಪ್ರದರ್ಶನ, ವಿಚಾರಗೋಷ್ಠಿಗಳು ಹಾಗೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಆನಂದಿಸಿದರು. ಇದೊಂದು ನ ಭೂತೋ ನ ಭವಿಷ್ಯತಿ ಯಾದ ಉತ್ಸವವಾಗಿತ್ತೆಂದು ಆ ಉತ್ಸವದಲ್ಲಿ ಭಾಗವಹಿಸಿದ್ದ ಹಿರಿಯರು ಹೇಳುತ್ತಿದ್ದುದನ್ನು ಅನೇಕರು ಕೇಳಿರಬಹುದು. ಸಾಂಸ್ಕೃತಿಕ ಸಮಾರಂಭದ ನೆನಪಿಗಾಗಿ "ವಿಜಯನಗರ ಸಿಕ್ಸ ಸೆಂಟೆನರಿ ಕೊಮ್ಮೆಮೋರೇಶನ ಹೊಲ್ಯುಮ್" ಎಂಬ ಹೆಸರಿನಲ್ಲಿ ಪ್ರಕಟವಾದ ಸಂಸ್ಮರಣ ಸಂಚಿಕೆಯುಲ್ಲಿಯು ವಿದ್ವತ್ಪೂರ್ಣವಾದ ಇಂಗ್ಲೀಷ ಲೇಖನಗಳನ್ನು ಓದಿ, ಇತಿಹಾಸ ಸಂಶೋಧನೆಯ ಸಾಧನೆಗಳಲ್ಲಿಯೇ ಮುಂದುವರೆದ ಸಂಸ್ಥೆ ಎಂದು ಆಗಿನ ಬ್ರಿಟಿಷ ಸರಕಾರದಿಂದ ಮಂಡಲವು ಮನ್ನಣೆ ಪಡೆದು ದೇಶ-ವಿದೇಶದ ವಿದ್ವಾಂಸರ ಗಮನ ಸೆಳೆಯಿತು. ಪ್ರಧಾನ ಸಂಪಾದಕರಾಗಿ ಬಹು ಶ್ರಮ ವಹಿಸಿ ಈ ಸ್ಮರಣ ಸಂಚಿಕೆಯು ಪ್ರಕಾಶಕ್ಕೆ ಬರಲು ಕಾರಣರಾದವರು ಮಾನ್ಯ ಶ್ರೀ ಡಿ.ಪಿ. ಕರಮರಕರರು. ಇದೇ ಸಂದರ್ಭದಲ್ಲಿ ಇನ್ನೂ ಅನೇಕ ಗ್ರಂಥಗಳು ಪ್ರಕಟವಾದರೂ ಶ್ರೀಯುತ ಪಿ.ಬಿ.ದೇಸಾಯಿಯವರು ಕನ್ನಡದಲ್ಲಿ ಬರೆದ 'ವಿಜಯನಗರ ಸಾಮ್ರಾಜ್ಯ' ಮತ್ತು ಶ್ರೀ ಪೋತದಾರ ಶ್ರೀನಿವಾಸರಾಯರ 'ಸಚಿತ್ರವಿಜಯನಗರ' ಎಂಬ ಕೃತಿಗಳು ಉಲ್ಲೇಖನೀಯವಾಗಿವೆ.

## ೩. ಮಂಡಲದ ರಜತಮಹೋತ್ಸವ

೧೯೪೦ ರಲ್ಲಿ ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ರಜತಮಹೋತ್ಸವವನ್ನು ದಿಲ್ಲಿಯಲ್ಲಿರುವ ಭಾರತ ಸರಕಾರದ ಆರ್ಕಿಯಾಲಜಿ ಡಿಪಾರ್ಟಮೆಂಟಿನ ಡೈರೆಕ್ಟರ್ ಜನರಲ್ ಆಗಿದ್ದ ರಾವ ಬಹಾದ್ದೂರ ಕೆ.ಎನ್. ದೀಕ್ಷಿತ ಇವರ ಘನ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಆಚರಿಸಲಾಯಿತು. ಮಾನ್ಯ ದೀಕ್ಷಿತರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಂಡಲದ ಬಗ್ಗೆ ಹೇಳಿದ ಕೆಳಗಿನ ಮಾತುಗಳು ಉಲ್ಲೇಖನೀಯವಾಗಿವೆ.......................

"It is indeed a great pleasure to me to associate myself with the Silver Jubilee celebrations of the Karnataka Historical Research Society and I am grateful to you for the honour you have rendered me in asking me to preside over this happy function which enables me to express my appreciation of the great importance of the cause for which the Society stands................

Nearly five years ago the Society successfully launched an ambitious project of celebrating the sexcentenary of the function of the Vijayanagara Empire which has immensly raised its prestige in the eyes of the Scientific world.................

The Society has been able to achieve great success in inducing the Provincial and Central Governments in devoting their attention to the unexplored rich field in the Karnataka.......................

Gentlemen, I have great pleasure in wishing the Society a long and useful career in the noble task of unravelling Karnataka's rich cultural past"

ಈ ರಜತಮಹೋತ್ಸವದಲ್ಲಿ ಮಂಡಲದ ಪರವಾಗಿ ನಡೆದ ಐತಿಹಾಸಿಕ ಸಮ್ಮೇಲನ, ಉಪನ್ಯಾಸಗಳು ಹಾಗೂ ಪ್ರದರ್ಶನ ಇವುಗಳು ವ್ಯವಸ್ಥಿತವಾಗಿ ನಡೆಯುವಂತೆ ಏರ್ಪಾಡು ಮಾಡಿದ ಮಂಡಲದ ಅಂದಿನ ಕಾರ್ಯದರ್ಶಿಗಳಾದ **ಶ್ರೀ ಡಿ.ಪಿ. ಕರಮರಕರರು** ಎಲ್ಲರ ಪ್ರಶಂಸೆಗೆ ಪಾತ್ರರಾದರು. ಇದೇ ಸಂದರ್ಭದಲ್ಲಿ ಅವರು ಮುಂಬೈ ಸರಕಾರಕ್ಕೆ ಸಂಸ್ಥೆಯ ಕಟ್ಟಡಕ್ಕಾಗಿ ಬೇಕಾದ ಸ್ಥಳದ ಬಗ್ಗೆ ಮನವಿ ಸಲ್ಲಿಸಿ ಈಗಿರುವ ಸ್ವಂತ ಸ್ಥಳವನ್ನು ಪಡೆದರು. ಅನೇಕ ವರ್ಷಗಳವರೆಗೆ ಬಾಡಿಗೆ ಮನೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಮಂಡಲಕ್ಕೆ ಕೇಂದ್ರ ರೇಲ್ವೆಮಂತ್ರಿಗಳಾದ ಶ್ರೀ ಲಾಲಬಹಾದ್ದೂರ ಶಾಸ್ತ್ರಿಗಳು ಧಾರವಾಡಕ್ಕೆ ಬಂದು ೧೯೫೬ ರಲ್ಲಿ ಇದೇ ಸ್ವಂತ ಸ್ಥಳದಲ್ಲಿ ಕಟ್ಟಡಕ್ಕಾಗಿ ಶಿಲಾನ್ಯಾಸವನ್ನು ನೆರವೇರಿಸಿದರು. ನಂತರ ಅಲ್ಲಿ ಒಂದು ಚಿಕ್ಕ ಕಾರ್ಯಾಲಯವನ್ನು ಕಟ್ಟಿಸಲಾಯಿತು. ಮಂಡಲದ ಸುವರ್ಣಮಹೋತ್ಸವದ ನಂತರ ೧೯೭೨ ರಲ್ಲಿ ಈಗಿನ ಎರಡು ಮಹಡಿ ಕಟ್ಟಡವು ಸಿದ್ಧವಾಗುವವರೆಗೆ ಮಂಡಲವು ಆ ಚಿಕ್ಕ ಕೊಠಡಿಯಲ್ಲಿಯೇ ಕಾರ್ಯನಿರ್ವಹಿಸುತ್ತಿತ್ತು.

**೪. ನಿಃಸ್ವಾರ್ಥಸೇವೆ :-**

ಕರ್ನಾಟಕದೊಳಗಿನ ಭವ್ಯವಾದ ಪಟ್ಟಣಗಳನ್ನೂ, ಗುಡಿ-ಗುಂಡಾರಗಳನ್ನೂ, ಹಾಗೂ ಐತಿಹಾಸಿಕ ಸ್ಥಳಗಳನ್ನೂ ಪ್ರತ್ಯಕ್ಷವಾಗಿ ನೋಡುವುದರಿಂದ ಹುಟ್ಟುವ ಸ್ಫೂರ್ತಿಯೂ ಅಭಿಮಾನವೂ ಕೇವಲ ಕಲ್ಪನೆಯಿಂದ ಬರಲಾರವು. ಇದಲ್ಲದೆ ಅವುಗಳನ್ನು ಪ್ರತ್ಯಕ್ಷವಾಗಿ ನೋಡಿದರೆ ಸುತ್ತಮುತ್ತಲಿನ ಪರಿಸ್ಥಿತಿಯು ಗೊತ್ತಾಗಿ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲಲು ಸಾಧ್ಯವಾಗುವದು. ಆದ್ದರಿಂದಲೇ ಹಿಂದಕ್ಕೆ ಮಂಡಲದ ಕೆಲವು ಸದಸ್ಯರು ತಮ್ಮ ಸ್ವಂತ ಖರ್ಚಿನಿಂದ ಸಂಚರಿಸಿ ಐತಿಹಾಸಿಕ ಮಾಹಿತಿಗಳನ್ನು ಸಂಗ್ರಹಿಸತೊಡಗಿದರು. ಮಂಡಲವು ಸ್ಥಾಪನೆಯಾದಾಗಿನಿಂದ ಅನೇಕ ವರ್ಷಗಳ ವರೆಗೆ ಅದರೊಂದಿಗಿದ್ದ ಶ್ರೀಯುತ ನಾ.ಶ್ರೀ. ರಾಜಪುರೋಹಿತರು ಕರ್ನಾಟಕದ ನೂರಾರು ಹಳ್ಳಿಗಳನ್ನು ಹಾಗೂ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿ ಅನೇಕ ಮಹತ್ವದ ದಾಖಲೆಗಳನ್ನು ಸಂಗ್ರಹಿಸಿದರು. ಮಂಡಲದ ಇತಿಹಾಸ ಪ್ರಚಾರಕರೆಂದು ಕಾರ್ಯನಿರ್ವಹಿಸಿದ ಶ್ರೀ ರಾಜಪುರೋಹಿತರು ತಾವು ಹೋದಲ್ಲೆಲ್ಲಾ ಐತಿಹಾಸಿಕ ವಿಷಯಗಳ ಮೇಲೆ ವ್ಯಾಖ್ಯಾನಗಳನ್ನು ಕೊಡುವ ಮೂಲಕ ಉತ್ತರ ಕರ್ನಾಟಕದಲ್ಲಿ ಐತಿಹಾಸಿಕ ಜಾಗೃತಿಯನ್ನುಂಟು ಮಾಡಿದರು, ನೂರಾರು ಲೇಖನಗಳನ್ನು ಬರೆದರು, ಅನೇಕ ಅಪೂರ್ವ ದಾಖಲೆಗಳನ್ನು ಸಂಶೋಧಿಸಿದರು. ತಮ್ಮ ಮನೆ ಮಾರುಗಳನ್ನು ಲೆಕ್ಕಿಸದೇ ಸಂಶೋಧನೆಯೆಂಬ ವ್ರತದಲ್ಲಿ ದೀಕ್ಷಾಬದ್ಧರಾಗಿ ಮಂಡಲದ ಕಾರ್ಯವನ್ನು ನಿರ್ವಹಿಸಿದ ಶ್ರೀ ನಾ. ಶ್ರೀ. ರಾಜಪುರೋಹಿತರಂತಹ ಮಂಡಲದ ಅನೇಕ ಕರ್ಮಯೋಗಿಗಳ ಸಾಧನೆ ಅವರ್ಣನೀಯ.

**೫. ಜನ್ಮಶತಮಾನೋತ್ಸವಗಳು**

ಕರ್ನಾಟಕ ಕುಲಪುರೋಹಿತ ಶ್ರೀ ಆಲೂರು ವೆಂಕಟರಾಯರ ಜನ್ಮ ಶತಮಾನೋತ್ಸವವನ್ನು ೧೯೮೦ ರಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಕ.ವಿ.ವಿ.ದ

ಕುಲಪತಿಗಳಾದ ಶ್ರೀ ಸದಾಶಿವ ಒಡೆಯರ ಇವರು ಈ ಜನ್ಮಶತಮಾನೋತ್ಸವದ ಉದ್ಘಾಟಕರಾಗಿ ಆಗಮಿಸಿದ್ದರು. ಆಗ ಶೀ ಆಲೂರು ವೆಂಕಟರಾಯರ ಭಾವಚಿತ್ರವನ್ನು ಅನಾವರಣಗೊಳಿಸಲಾಯಿತು. ಅದರಂತೆ ದಿ. ಶ್ರೀ ನಾ. ಶ್ರೀ. ರಾಜಪುರೋಹಿತರ ಜನ್ಮಶತಮಾನೋತ್ಸವವನ್ನು ೧೯೮೭ ರ ಸಪ್ಟಂಬರನಲ್ಲಿ ಮಂಡಲದಲ್ಲಿ ವೈಭವದಿಂದ ಆಚರಿಸಲಾಯಿತು. ಶ್ರೀ ದ.ಪ. ಕರಮರಕರರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭಕ್ಕೆ ಶ್ರೀ ಪೇಜಾವರ ಸ್ವಾಮಿಗಳು ಉದ್ಘಾಟಕರಾಗಿ ಆಗಮಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ರಾಜಪುರೋಹಿತರ ಭಾವಚಿತ್ರವನ್ನು ಅನಾವರಣಗೊಳಿಸಲಾಯಿತು ಮತ್ತು ಆಗ ಅನೇಕ ಇತಿಹಾಸ ಸಂಶೋಧಕರನ್ನು ಹಾಗೂ ಗಣ್ಯರನ್ನು ಸನ್ಮಾನಿಸಲಾಯಿತು.

**೬. ಮಂಡಲದ ಸುವರ್ಣ ಮಹೋತ್ಸವ :-**

೧೯೫೫ ರಿಂದ ೧೯೮೨ ರವರೆಗೆ ಅಂದರೆ ಸುಮಾರು ೨೭ ವರ್ಷಗಳ ದೀರ್ಘಾವಧಿಯವರೆಗೆ ವಿದ್ಯಾರತ್ನ ರಾ.ಸ್ವಾ. ಪಂಚಮುಖಿಯವರು ಮಂಡಲದ ಕಾರ್ಯಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಕಾರ್ಯಾಧ್ಯಕ್ಷರಾಗುವ ಮೊದಲು ಅವರು ಮುಂಬೈ ಸರಕಾರದ ಕನ್ನಡ ಸಂಶೋಧನ ಸಂಸ್ಥೆಯ (ಇವರ ನಿವೃತ್ತಿಯ ನಂತರ ಕರ್ನಾಟಕ ವಿಶ್ವವಿದ್ಯಾಲಯವು ಈ ಸಂಸ್ಥೆಯನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡಿದೆ) ಪ್ರಥಮ ನಿರ್ದೇಶಕರಾಗಿ ಹದಿನಾಲ್ಕು ವರ್ಷಗಳ ವರೆಗೆ ಅದನ್ನು ಕಟ್ಟಿ, ಬೆಳೆಸಿ, ಕರ್ನಾಟಕದ ಒಂದು ಪ್ರೇಕ್ಷಣೀಯ ಸ್ಥಳವನ್ನಾಗಿಸಿದ್ದರು. ಆ ಪೂರ್ವದಲ್ಲಿ ನೀಲಗಿರಿ, ಉದಕಮಂಡಲಗಳಲ್ಲಿ ಇತಿಹಾಸ ಸಂಶೋಧಕರಾಗಿ ಕಾರ್ಯ ನಿರ್ವಹಿಸಿದ್ದ ಇಂಥ ಅನುಭವಿಕರು ಮಂಡಲದ ಕಾರ್ಯಾಧ್ಯಕ್ಷರಾದ ನಂತರ ಮಂಡಲದ ಚಟುವಟಿಕೆಗಳು ಚುರುಕುಗೊಂಡು ವಿವಿಧೋನ್ಮುಖವಾಗಿ ಬೆಳೆದವು. ಇವರ ಕಾರ್ಯಾವಧಿಯಲ್ಲಿ ಮಂಡಲದ ಸುವರ್ಣ ಮಹೋತ್ಸವವು ಸಂಪನ್ನವಾಯಿತು.

೧೯೭೦ ರಲ್ಲಿ ಮಂಡಲದ ಸುವರ್ಣ ಮಹೋತ್ಸವವನ್ನು ಅಂದಿನ ಮೈಸೂರು ರಾಜ್ಯದ ರಾಜ್ಯಪಾಲರಾದ ಶ್ರೀಧರ್ಮವೀರರ ಘನ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಅಧ್ಯಕ್ಷೀಯ ಸ್ಥಾನದಿಂದ ಮಾನ್ಯ ಧರ್ಮವೀರರು ಮಂಡಲದ ಕಾರ್ಯಕಲಾಪಗಳನ್ನು ಪ್ರಶಂಸಿಸುತ್ತ " This Society has earned for itself the gratitude of all historians and those interested in history in this country and outside, for its zeal and enthusiasm ever since 1974 in unfolding the ancient glory and greatness of the Karnataka region. ಹಾಗೆಯೇ ಮುಂದುವರೆಯುತ್ತ ........................... The work of the learned societies such as the Karnataka Historical Research Society in unveiling our history is indeed invaluable. This Society has to its credit during the last five decades and more, achievements which have gone a long way not only in helping writers of history in this ancient land but also in providing guidelines for the proper appreciation of the study of history as such" ಎಂದು ಸಂಸ್ಥೆಯ ಸ್ಥಾಪನೆಯಿಂದ ಇಲ್ಲಿನವರೆಗಿನ ಸಾಧನೆಗಳನ್ನು ಸಂಕ್ಷೇಪಿಸಿ ಉದ್ಗರಿಸಿದ್ದಾರೆ.

ಆ ಸಮಯದಲ್ಲಿ ಪ್ರಾಚ್ಯವಸ್ತು ಸಂಶೋಧನೆಯ ಆಗ್ನೇಯ ವಲಯದ (S.W. Circle) ಮೇಲಾಧಿಕಾರಿಗಳಾದ ಶ್ರೀ ಎಸ್. ಆರ್. ರಾವ್ ಅವರ ಸಹಾಯ-ಸಹಕಾರಗಳಿಂದ

ಐತಿಹಾಸಿಕ ಸಮ್ಮೇಲನ ಪ್ರದರ್ಶನಗಳನ್ನು ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಜರುಗಿದ ಸಾಂಸ್ಕೃತಿಕ ಚಟುವಟಿಕೆಗಳನ್ನು ಮಾನ್ಯ ರಾಜ್ಯಪಾಲರು ಶ್ಲಾಘಿಸಿ, ಇಂತಹ ಉತ್ಕೃಷ್ಟ ಯೋಜನೆ-ಸಂಶೋಧನೆಗಳ ಮಹತ್ವಾಕಾಂಕ್ಷೆಯುಳ್ಳ ಮಂಡಲಕ್ಕೆ ಸರಕಾರ ಪುರಸ್ಕಾರ ನೀಡಬೇಕೆಂಬ ಆಶಯವನ್ನು ವ್ಯಕ್ತಪಡಿಸಿದರು. ಮಂಡಲದ ಆಗಿನ ಕಾರ್ಯಾಧ್ಯಕ್ಷರಾಗಿದ್ದ ವಿದ್ಯಾರತ್ನ ರಾ.ಸ್ವಾ. ಪಂಚಮುಖಿಯವರ ಮಾರ್ಗದರ್ಶನದಲ್ಲಿ ಸಾಧಿಸಿದ ಮಂಡಲದ ವಿವಿಧ ಕಾರ್ಯಚಟುವಟಿಕೆಗಳನ್ನು ಕಂಡು ಮೆಚ್ಚಿದ ರಾಜ್ಯಪಾಲ ಶ್ರೀ ಧರ್ಮವೀರರು ಮಂಡಲದ ಕಟ್ಟಡಕ್ಕಾಗಿ ಸರಕಾರದಿಂದ ಧನಸಹಾಯವನ್ನು ಘೋಷಿಸಿದರು. ಮುಂದೆ ಒಂದು ವರ್ಷದಲ್ಲಿಯೇ ಈಗಿರುವ ಸ್ವಂತ ಕಟ್ಟಡವು ಅಸ್ತಿತ್ವಕ್ಕೆ ಬಂದಿತು.

**೭. ಮಂಡಲದ ವಿವಿಧೋನ್ಮುಖ ಚಟುವಟಿಕೆಗಳು :-**

"ಇತಿಹಾಸವೆಂದರೆ ಕೇವಲ ರಾಜಾ-ರಾಣಿ- ರಾಜಕುಮಾರ-ರಾಜಕುಟುಂಬದ ಚರಿತ್ರೆ, ರಾಜ-ಮಹಾರಾಜರ-ಸಾಮಂತರ ಹೋರಾಟ, ವೈಭವ- ಅಂತ್ಯಗಳ ಅಂತೆ-ಕಂತೆಗಳ ಕಥೆಯಲ್ಲ. ಇತಿಹಾಸದ ನಿಜವಾದ ಅಧ್ಯಯನವೆಂದರೆ ರಾಜ-ಮಹಾರಾಜರ ಚರಿತ್ರೆಯೊಂದಿಗೆ ಆ ಕಾಲದ ಆರ್ಥಿಕ- ಸಾಮಾಜಿಕ ಪರಿಸ್ಥಿತಿ, ಜನಜೀವನ, ಸಾಹಿತ್ಯ, ಸಂಸ್ಕೃತಿ, ಲಲಿತ ಕಲೆಗಳು, ಆ ಕಾಲದ ಆವಿಷ್ಕಾರಗಳು ಮುಂತಾದವುಗಳ ಪ್ರಾಮಾಣಿಕವಾದ ಅಧ್ಯಯನವಾಗಿದೆ ಮತ್ತು ಈ ಅಧ್ಯಯನದಿಂದ ಈಗಿನ ಸಮಾಜಕ್ಕೆ ಉಪಯುಕ್ತವಾಗುವ ವಿಷಯಗಳನ್ನು ಎತ್ತಿ ತೋರಿಸುವುದಾಗಿದೆ" ಎಂಬುದು ಕಾರ್ಯಾಧ್ಯಕ್ಷರಾದ ಶ್ರೀ ರಾ.ಸ್ವಾ. ಪಂಚಮುಖಿಯವರ ಸಿದ್ಧಾಂತವಾಗಿತ್ತು. ಮಾನ್ಯ ರಾಜ್ಯಪಾಲರಾದ ಶ್ರೀ ಧರ್ಮವೀರರು ಸುವರ್ಣ ಮಹೋತ್ಸವದ ಸಂದರ್ಭದಲ್ಲಿ "............History is not merely a chronicle of kings and their battles but is essentially a compilation of human experience in all its varied aspects ಎಂದು ನುಡಿಯುತ್ತ ಇತಿಹಾಸದ ಅಧ್ಯಯನದ ವ್ಯಾಪಕತೆಯ ಇದೇ ಸಿದ್ಧಾಂತವನ್ನು ಒತ್ತಿ ಹೇಳಿದ್ದಾರೆ.

ಈ ಹಿನ್ನೆಲೆಯಲ್ಲಿ ದೇಶದ ಹಾಗೂ ಕರ್ನಾಟಕದ ಗತಕಾಲದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ವಿವೇಚಿಸಿ ಈಗಿನ ಸಮಸ್ಯೆಗಳಿಗೆ ಅತ್ಯಾಧುನಿಕ ಪರಿಹಾರ ಮಾರ್ಗಗಳನ್ನು ಕಂಡುಹಿಡಿಯುವ ಉದ್ದೇಶದಿಂದ ಮಂಡಲದಲ್ಲಿ 'ಸಾಮಾಜಿಕ-ಆರ್ಥಿಕ ಸಂಶೋಧನಾ ಕೇಂದ್ರ' (ಸೋಶಿಯೋ ಎಕಾನಾಮಿಕ್ ರೀಸರ್ಚ ಸೆಂಟರ್) ಎಂಬ ವಿಭಾಗವು ಪ್ರಾರಂಭಿಸಲ್ಪಟ್ಟಿತು. ಈ ವಿಭಾಗದ ನಿರ್ವಹಣೆಗಾಗಿ ನಿಯಮಿಸಲ್ಪಟ್ಟ ಸಮಿತಿಗೆ ಭಾರತ ಸರಕಾರದ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಪ್ರೊ. ಡಿ.ಟಿ. ಲಾಕಡಾವಾಲಾ ಇವರು ಪ್ರಮುಖ ನಿಯೋಜಕರಾಗಿಯೂ ಡಾ. ನಂಜುಂಡಪ್ಪ, ಡಾ. ವ್ಹಿ.ಆರ್. ಪಂಚಮುಖಿ, ಡಾ. ಪಿ.ಆರ್. ಪಂಚಮುಖಿ ಮತ್ತು ಮಂಡಲದ ಕಾರ್ಯಾಧ್ಯಕ್ಷರು ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿದ್ದರು.

ಸಂಶೋಧನಾ ಕಾರ್ಯಗಳ ಜೊತೆಗೆ ಭಾರತೀಯ ಲಿಪಿಶಾಸ್ತ್ರವನ್ನು ಬೋಧಿಸುವ, ವಿಶೇಷವಾಗಿ ಕನ್ನಡ ಲಿಪಿಶಾಸ್ತ್ರದ ಬೆಳವಣಿಗೆಯನ್ನು ಕಲಿಸುವ ಉದ್ದೇಶದಿಂದ ಲಿಪಿಗಳ ಬೋಧನೆ ಪಾಠಣದ ರೀತಿಯನ್ನು ಸ್ನಾತಕೋತ್ತರ ಪದವೀಧರರವರೆಗೂ ಕಲಿಸಲು ಮಂಡಲವು ಮುಂದಾಯಿತು. ಕುತೂಹಲಕಾರಿಯಾದ ಈ ವಿಜ್ಞಾನವನ್ನು ಅರಿಯುವ

ಹಂಬಲದಿಂದ ಮದ್ರಾಸ್ (ಚೆನ್ನೈ), ಮುಂಬೈ, ನಾಸಿಕ ಮುಂತಾದ ಕಡೆಗಳಿಂದ ಜಿಜ್ಞಾಸು ಅಭ್ಯರ್ಥಿಗಳು ಬಂದರು. ವಿದ್ಯಾರತ್ನ ಆರ್.ಎಸ್. ಪಂಚಮುಖಿಯವರ ಮಾರ್ಗದರ್ಶನದಲ್ಲಿ ನಡೆದ ಎರಡು ಶಿಬಿರಗಳನ್ನು ಕಂಡು ಆಗಿನ ಕೇಂದ್ರವಿದ್ಯಾಮಂತ್ರಿಗಳಾಗಿದ್ದ ಡಾ.ವ್ಹಿ.ಕೆ.ಆರ್.ವಿ. ರಾವ್ ಮೊದಲಾದ ಗಣ್ಯರು ಶ್ಲಾಘಿಸಿದರು.

**೮. ಮಂಡಲದ ಕೆಲವು ಪ್ರಮುಖ ಯೋಜನೆಗಳು :-**

ದಕ್ಷಿಣ ಭಾರತದ ಮಹಾನ್ ಸಂತರೂ, ದಾರ್ಶನಿಕರೂ, ತತ್ವಜ್ಞಾನಿಗಳೂ ಆದ ಶ್ರೀರಾಘವೇಂದ್ರತೀರ್ಥರು ದೇಶ-ವಿದೇಶಗಳಲ್ಲಿ ತಮ್ಮ ಮಹಿಮೆಗಳಿಂದ ಮನೆಮಾತಾಗಿದ್ದಾರೆ. ಕೇವಲ ಪವಾಡಪುರುಷರಾಗಿರದೇ ೪೮ ಉದ್ಗ್ರಂಥಗಳನ್ನು ಬರೆದಿರುವ ಇವರು ತತ್ವಶಾಸ್ತ್ರಕ್ಕೆ ನೀಡಿದ ಕೊಡುಗೆ ಅಪಾರವಾದುದು. ಇವರು ಮೂರು ವೇದಗಳಿಗೆ ಬರೆದ ಭಾಷ್ಯವು 'ವೇದತ್ರಯವಿವೃತಿ' ಎಂದು ಪ್ರಸಿದ್ಧವಾಗಿದ್ದು, ಅದು ಈಗ ಜರ್ಮನಿ ದೇಶದಲ್ಲಿದೆ ಎಂದು ಪ್ರತೀತಿ. ಇವರು ಅನೇಕ ಹರಿದಾಸರಿಗೆ ಆಶ್ರಯ ಕೊಟ್ಟು ಹರಿದಾಸಪರಂಪರೆಯನ್ನು ಮತ್ತು ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದರು.

ಇಂಥ ಶ್ರೇಷ್ಠ ಸಂತ, ತತ್ವಜ್ಞಾನಿಗಳ ಎಲ್ಲ ಕೃತಿಗಳನ್ನೂ ಸಂಪಾದಿಸಿ ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಲು ವಿದ್ಯಾರತ್ನ ರಾ.ಸ್ವಾ. ಪಂಚಮುಖಿಯವರು ಒಂದು ಬೃಹತ್ ಯೋಜನೆಯನ್ನು ಸಿದ್ಧಪಡಿಸಿದ್ದರು. ಈ ಯೋಜನೆಯ ಅಂಗವಾಗಿ ಅವರು ಶ್ರೀ ರಾಘವೇಂದ್ರ ತೀರ್ಥರಿಂದ ವಿರಚಿತವಾದ ೧. ತಂತ್ರದೀಪಿಕಾ, ೨. ಪ್ರಮಾಣಪದ್ಧತಿ ಟಿಪ್ಪಣಿ, ೩. ಬ್ರಹ್ಮಸೂತ್ರ ಭಾಷ್ಯ ಟೀಕಾ ತತ್ವಪ್ರಕಾಶಿಕಾ ಟಿಪ್ಪಣಿ ಭಾವದೀಪ (ನಾಲ್ಕು ಸಂಪುಟಗಳು) ಎಂಬ ಗ್ರಂಥಗಳನ್ನು ಪರಿಷ್ಕರಿಸಿ, ಸಂಪಾದಿಸಿ ಮಂಡಲದಿಂದ ಪ್ರಕಟಿಸಿದರು. ಈ ಯೋಜನೆಯು ಮುಂದುವರೆದಿದೆ.

ಕರ್ನಾಟಕದ ಹಾಗೂ ಭಾರತದ ಸಾಂಸ್ಕೃತಿಕ ಇತಿಹಾಸಗಳನ್ನು ಬರೆಯುವುದು, ಕರ್ನಾಟಕದ ಸಾಂಸ್ಕೃತಿಕ ವಸ್ತುಸಂಗ್ರಹಾಲಯವನ್ನು ಸಿದ್ಧಪಡಿಸುವುದು, ೨೦೧೪ ರಲ್ಲಿ ಮಂಡಲದ ಶತಮಾನೋತ್ಸವವನ್ನು ಆಚರಿಸುವುದು, ಆ ಸಂದರ್ಭದಲ್ಲಿ ಒಂದು ನೂರು ಗ್ರಂಥಗಳನ್ನು ಪ್ರಕಟಿಸುವುದು ಇವು ಮಂಡಲದ ಇತರ ಕೆಲವು ಕಾರ್ಯಯೋಜನೆಗಳು.

**೯. ವಿದ್ಯಾರತ್ನ ರಾ.ಸ್ವಾ. ಪಂಚಮುಖಿ ಪ್ರಾಚ್ಯ ವಿದ್ಯಾ ಸಂಶೋಧನ ಕೇಂದ್ರ:-**

ಪ್ರಾಚೀನ ಹಸ್ತಪ್ರತಿಗಳನ್ನು ಹಾಗೂ ಅನುಪಲಬ್ಧ ಗ್ರಂಥಗಳನ್ನು ಸಂಶೋಧಿಸಿ, ಸಂಪಾದಿಸಿ, ಪ್ರಕಟಿಸುವುದಕ್ಕಾಗಿ ಮಂಡಲದಲ್ಲಿ 'ವಿದ್ಯಾರತ್ನ ರಾ.ಸ್ವಾ. ಪಂಚಮುಖಿ ಪ್ರಾಚ್ಯವಿದ್ಯಾ ಸಂಶೋಧನಾ ಕೇಂದ್ರ' ಎಂಬ ವಿಭಾಗವನ್ನು ತೆರೆಯಲಾಗಿದೆ. ಈ ವಿಭಾಗದಿಂದ ಇದುವರೆಗೆ ತಾಂಬೂಲ ಮಂಜರಿ, ಕೃಷಿ ಪಾರಾಶರ, ಪಾಕ ದರ್ಪಣ, ಜ್ಞಾನ ಭೈಷಜ್ಯ ಮಂಜರಿ, ಸುನೀತಿ ಭಾಗವತ, ಸನ್ನೀತಿ ರಾಮಾಯಣ ಎಂಬ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಲಾಗಿದೆ. ಕೇಂದ್ರ ಸರಕಾರದ ಧನಸಹಾಯದಿಂದ ಪ್ರಾಚೀನ ಕಾಲದ ಪದಾರ್ಥ ವಿಜ್ಞಾನ (ಫಿಜಿಕ್ಸ್), ರಸಾಯನ ಶಾಸ್ತ್ರ (ಕೆಮೆಸ್ಟ್ರಿ), ಆರೋಗ್ಯ ಶಾಸ್ತ್ರ (ಮೆಡಿಕಲ್ ಸಾಯಿನ್ಸ್), ಕೃಷಿ ವಿಜ್ಞಾನ (ಅಗ್ರಿಕಲ್ಚರಲ್ ಸೈನ್ಸ್) ಮತ್ತು ಸಸ್ಯ ವಿಜ್ಞಾನ (ಬಾಟನಿ) ಗಳ ಮೇಲೆ ಪಾರಿಭಾಷಿಕ ಶಬ್ದಗಳ ಐದು ಕೋಷಗಳನ್ನು ಸಿದ್ಧಪಡಿಸಲಾಗಿದೆ.

## ೧೦. ಮಂಡಲದ ಪ್ರಕಟಣೆಗಳು :-

ಕರ್ನಾಟಕ ಇತಿಹಾಸ ಸಂಶೋಧನ ಮಂಡಲವು ಇದುವರೆಗೆ ಕನ್ನಡ, ಇಂಗ್ಲೀಷ, ಸಂಸ್ಕೃತ, ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಶ್ರೀ ಆಲೂರು ವೆಂಕಟರಾಯರ ೧) ವಿದ್ಯಾರಣ್ಯ ಚರಿತ್ರೆ, ೨) ಕರ್ನಾಟಕದ ಗತವೈಭವ ೩) ಕರ್ನಾಟಕ ವೀರರತ್ನಗಳು; ಶ್ರೀ ನಾ. ಶ್ರೀ. ರಾಜಪುರೋಹಿತರ ೧) ಶ್ರೀ ಸುರೇಶ್ವರಾಚಾರ್ಯರ ಚರಿತ್ರೆ ೨) ಕರ್ನಾಟಕದ ಇತಿಹಾಸ; ಶ್ರೀ ಶ್ರೀನಿವಾಸರಾವ ಪೋತದಾರರ 'ಸಚಿತ್ರ ವಿಜಯನಗರ' ಎಂಬ ಗ್ರಂಥಗಳು ಉಲ್ಲೇಖನೀಯವಾಗಿವೆ. ಶ್ರೀ ದ. ಪ. ಕರಮರಕರರು ಸಂಪಾದಿಸಿದ 'ವಿಜಯನಗರ ಸಾಮ್ರಾಜ್ಯ ಸ್ಮರಣ ಸಂಪುಟ (ಇಂಗ್ಲೀಷ್)' ಮತ್ತು ಶ್ರೀಪಾಂಡುರಂಗರಾವ ದೇಸಾಯಿಯವರ 'ವಿಜಯ ನಗರ ಸಾಮ್ರಾಜ್ಯ', 'ಶಾಸನಪರಿಚಯ' ಎಂಬ ಗ್ರಂಥಗಳು ಪ್ರಮುಖವಾಗಿವೆ. ವಿದ್ಯಾರತ್ನ ರಾ.ಸ್ವಾ. ಪಂಚಮುಖಿಯವರು ಕನ್ನಡದಲ್ಲಿ ೧) ಕರ್ನಾಟಕದ ಇತಿಹಾಸ (ಸಂಪುಟ-೧) ೨) ಕರ್ನಾಟಕದ ಅರಸು ಮನೆತನಗಳು ೩) ಸಂಸ್ಕೃತಿ ವಿಹಾರ; ಇಂಗ್ಲೀಷಿನಲ್ಲಿ ೧) ಡಿಸ್ಕ್ರಿಪ್ಟಿವ್ ಕೆಟಲಾಗ್ ೨) ಕರ್ನಾಟಕ ಸ್ಕಲ್ಪಚರ್ಸ್ ಮತ್ತು ಸಂಸ್ಕೃತದಲ್ಲಿ ೧) ತಂತ್ರದೀಪಿಕಾ, ೨) ಪ್ರಮಾಣ ಪದ್ಧತಿ ಟಿಪ್ಪಣಿ, ೩) ಬ್ರಹ್ಮಸೂತ್ರಭಾಷ್ಯ - ಟೀಕಾ-ಟಿಪ್ಪಣಿ (ಸಂಪಾದಿತ ಗ್ರಂಥಗಳು) ೪) ಸಪ್ತರಾತ್ರೋತ್ಸವ ಚಂಪೂ ಮತ್ತು ೫) ವೇದಾಪೌರುಷೇಯತ್ವವಾದ ಎಂಬ ಗ್ರಂಥಗಳನ್ನು ಬರೆದು ಮಂಡಲದಿಂದ ಪ್ರಕಾಶಪಡಿಸಿದರು. ಇವಲ್ಲದೇ ಡಾ. ವರದರಾಜ ಉಮರ್ಜಿಯವರ ೧) ಕರ್ನಾಟಕ ಪ್ರಾಕೃತ ಕವಿ ಚರಿತೆ ೨) ಕನ್ನಡ ಭಾಷೆಯ ಉಗಮ ಮತ್ತು ಬೆಳವಣಿಗೆ (ಇಂಗ್ಲೀಷಿನಲ್ಲಿ); ಪ್ರೊ. ಎಸ್. ಆರ್. ಶರ್ಮಾ ಇವರ 'ಜೈನಿಸಮ್ ಆ್ಯಂಡ್ ಕರ್ನಾಟಕ ಕಲ್ಚರ್' ಎಂಬ ಗ್ರಂಥ, ಪ್ರೊ. ಸಿ.ಎಸ್. ಕುಲಕರ್ಣಿಯವರ 'ಋಗ್ವೇದ ರಹಸ್ಯ' ಮತ್ತು ನಾರಾಯಣ ಶರ್ಮಾ ಇವರ 'ಕನ್ನಡ ನಾಡಿನ ಕಥೆಗಳು' ಇವೆಲ್ಲ ಮಂಡಲದ ಕೆಲವು ಉಲ್ಲೇಖನೀಯ ಪ್ರಕಟಣೆಗಳಾಗಿವೆ.

ಮಂಡಲವು ವಿದ್ವಾಂಸರ ಸಂಶೋಧನಾತ್ಮಕ ಲೇಖನಗಳಿಂದ ಕೂಡಿದ ಪತ್ರಿಕೆ (ಕರ್ನಾಟಕ ಹಿಸ್ಟೋರಿಕಲ್ ರಿವ್ಹ್ಯೂ) ಯನ್ನೂ ಪ್ರಕಟಿಸುತ್ತಿದೆ.

ಪ್ರಾಚೀನ ಕರ್ನಾಟಕದ ಹಾಗೂ ಭಾರತದ ಗತವೈಭವವನ್ನು ಪ್ರಕಾಶಪಡಿಸಲು ಮಂಡಲದಲ್ಲಿ ಆಗಾಗ ವಿಚಾರ ಸಂಕಿರಣಗಳನ್ನು (ಸೆಮಿನಾರ್) ಮತ್ತು 'ಭಾರತ ವೈಭವದರ್ಶನ ಬೋಧನೆ' ಎಂಬ ಶೀರ್ಷಿಕೆಯ ಅಡಿಯಲ್ಲಿ ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ಈ ವರ್ಷ ಸುವರ್ಣಕರ್ನಾಟಕ ಮಹೋತ್ಸವ ನಿಮಿತ್ತ ವಿಶೇಷೋಪನ್ಯಾಸಗಳನ್ನು ವ್ಯವಸ್ಥೆ ಮಾಡಲಾಗಿದೆ.

ಮಂಡಲದ ಹುಟ್ಟಿನಿಂದ ಈ ವರೆಗಿನ ಬೆಳವಣಿಗೆಯನ್ನು ಆಲಂಕಾರಿಕವಾಗಿ ಹೀಗೆ ಹೇಳಬಹುದು-

ವಿವಿಧಸಂಶೋಧನಾ ಸಂಸ್ಥೆಗಳೆಂಬ ಬೀಜಗಳ ರಾಶಿಗಳೊಳಗಿಂದ, ಪುಣೆಯಲ್ಲಿದ್ದ ಕನ್ನಡಾಭಿಮಾನಿಗಳಾದ ವಿದ್ಯಾರ್ಥಿಗಳ ಪ್ರೇರಣೆ ಸಹಾಯಗಳೆಂಬ ಶ್ರಮದಾನದೊಂದಿಗೆ, ಶ್ರೀಯುತರಾದ ಆಲೂರು ವೆಂಕಟರಾವ, ನಾ. ಶ್ರೀ ರಾಜಪುರೋಹಿತ, ನಾರಾಯಣರಾವ ದೇಶಪಾಂಡೆ ಮೊದಲಾದ ಹದಿನಾಲ್ಕು ಜನರು, ಆರಿಸಿ ಹೊರತೆಗೆದ ಕರ್ನಾಟಕ ಇತಿಹಾಸ ಸಂಶೋಧನ ಮಂಡಲವೆಂಬ ಬೀಜವನ್ನು ಬಿತ್ತಲು ಶ್ರೀ ದ.ಪ. ಕರಮರಕರರು ಫಲವತ್ತಾದ

ಒಂದು ಕ್ಷೇತ್ರವನ್ನು ಒದಗಿಸಿದರು. ಆ ಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಬೀಜವು ಪೂಜ್ಯರಾದ - ಶ್ರೀ ಆಲೂರು ವೆಂಕಟರಾವ, ಶ್ರೀ ನಾ. ಶ್ರೀ ರಾಜಪುರೋಹಿತ, ಶ್ರೀ ವ್ಹಿ.ಬಿ. ಹಾಲಭಾವಿ, ಶ್ರೀ ರಂಗನಾಥ ದಿವಾಕರ, ಶ್ರೀ ನಿಟ್ಟೂರು ಶ್ರೀನಿವಾಸರಾವ, ಶ್ರೀ ವ್ಹಿ.ಕೆ.ಆರ್.ವ್ಹಿ ರಾವ್, ಶ್ರೀ ದ. ಪ. ಕರಮಕರ, ಶ್ರೀ ನಾ.ಶ್ರೀ. ಕಮಲಾಪುರ, ಶ್ರೀ ವ್ಹಿ.ಬಿ. ನಾಯಕ ಮುಂತಾದವರಿಂದ ಅಂಕುರಿತವಾಗಿ ಬೆಳೆಯತೊಡಗಿತು. ಮಂಡಲವೆಂಬ ಈ ಸಸಿಯು ಬೆಳೆದು, ಮರವಾಗಿ ವಿದ್ಯಾರತ್ನ ಶ್ರೀ ರಾ. ಸ್ವಾ. ಪಂಚಮುಖಿಯವರ ಕಾಲದಲ್ಲಿ ಶಾಖೋಪಶಾಖೆಗಳಾಗಿ ಹೂ ಬಿಟ್ಟು ಫಲಗಳನ್ನು ಕೊಡುವ ಮಟ್ಟಕ್ಕೆ ಬಂದಿತು ಎಂದು ನಾವು ಈ ನಮ್ಮ ಮಂಡಲದ ಇದುವರೆಗಿನ ಬೆಳವಣಿಗೆ ಹಾಗೂ ಸಾಧನೆಗಳನ್ನು ಆಲಂಕಾರಿಕವಾಗಿ ಸಂಕ್ಷೇಪದಲ್ಲಿ ಚಿತ್ರಿಸಬಹುದು. ಈ ವೃಕ್ಷವು ನಶಿಸದಂತೆ ಪೋಷಿಸಿ, ಸಂಶೋಧನಾ ಪರಂಪರೆಯು ಅವ್ಯಾಹತವಾಗಿ ಮುಂದುವರೆಯುವಂತೆ ನೋಡಿಕೊಳ್ಳುವುದು ನಮ್ಮ-ನಿಮ್ಮೆಲ್ಲರ ಕರ್ತವ್ಯವಾಗಿದೆ.

**೧೧. ಕೃತಜ್ಞತಾ ಸಮರ್ಪಣೆ :-**

ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗಿನ ವಿವಿಧ ಅವಧಿಯಲ್ಲಿ ಶ್ರೀಯುತರಾದ ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾವ, ಡಾ ರಾಘವೇಂದ್ರರಾವ ಶಿರಹಟ್ಟಿ, ರಂಗನಾಥ ದಿವಾಕರ, ವ್ಹಿ.ಕೆ. ಆರ್.ವ್ಹಿ. ರಾವ, ನಿಟ್ಟೂರು ಶ್ರೀನಿವಾಸರಾವ, ರಾ.ಸ್ವಾ. ಪಂಚಮುಖಿ, ದ.ಪ. ಕರಮರಕರ, ರಾಜಾ ಎಸ್. ಜಿ. ಆಚಾರ್ಯ, ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥರು ಈ ಮಹನೀಯರು ಮಂಡಲದ **ಅಧ್ಯಕ್ಷರಾಗಿಯೂ;** ಶ್ರೀ ಆರ್. ಜಿ. ದೇಶಪಾಂಡೆ, ಶ್ರೀ ಡಿ.ಪಿ.ಪತ್ರಾವಳಿ, ಶ್ರೀ ವ್ಹಿ.ಎನ್. ಜೋಗ, ಶ್ರೀ ವ್ಹಿ.ಬಿ. ಹಾಲಭಾವಿ, ಶ್ರೀ ರಾ.ಸ್ವಾ. ಪಂಚಮುಖಿ, ಶ್ರೀ ಜಿ.ಎಸ್. ಕೇಶವಾಯಿನ್, ಶ್ರೀ ಕೆ. ಅನಂತಾಚಾರ್ಯ, ಶ್ರೀ ಪಿ.ಆರ್. ಪಂಚಮುಖಿ ಈ ಮಹನೀಯರು ಮಂಡಲದ **ಕಾರ್ಯಾಧ್ಯಕ್ಷರಾಗಿಯೂ;** ಶ್ರೀ ರುಕ್ಮಾಂಗದರಾವ ದೇಶಪಾಂಡೆ, ಶ್ರೀ ರಂಗರಾವ ಕೃಷ್ಣ ಅಸುಂಡಿ, ಶ್ರೀ ಸಾಲಿ ರಾಮಚಂದ್ರರಾವ, ಶ್ರೀ ದತ್ತಾತ್ರೇಯ ಕರಮರಕರ, ಶ್ರೀ ಎ.ಟಿ. ಸಾಸನೂರ, ಶ್ರೀ ನಾ.ಶ್ರೀ ಕಮಲಾಪುರ, ಶ್ರೀ ಪಿ.ಬಿ. ದೇಸಾಯಿ ಶ್ರೀ ಸಿ.ಡಿ. ದೇಶಪಾಂಡೆ, ಶ್ರೀ ವ್ಹಿ.ಆರ್. ಮುಧೋಳಕರ, ಶ್ರೀ ವ್ಹಿ.ಬಿ. ನಾಯಕ, ಶ್ರೀ ಯು.ಬಿ. ಬೀಡಿ, ಶ್ರೀ ಪಿ.ಆರ್. ಪಂಚಮುಖಿ, ಶ್ರೀ ಕೆ.ಎಸ್. ಉಪಾಧ್ಯೆ, ಶ್ರೀ ಜೆ.ಎನ್. ಹಾವನೂರ, ಶ್ರೀ ಜಿ.ಜಿ. ನಾಡಗೀರ, ಶ್ರೀ ಎ.ಆರ್. ಪಂಚಮುಖಿ, ಶ್ರೀ ವ್ಹಿ. ಬಿ. ಅಣ್ಣಿಗೇರಿ ಇವರು ಮಂಡಲದ **ಕಾರ್ಯದರ್ಶಿಗಳಾಗಿಯೂ;** ಶ್ರೀ ಡಿ.ಪಿ. ಪತ್ರಾವಳಿ, ಶ್ರೀ ಜಿ.ಎಸ್. ಕುಲಕರ್ಣಿ, ಶ್ರೀ ಆರ್. ಬಿ. ಹಾವನೂರ್, ಶ್ರೀ ಎ.ಎಸ್. ರಾಯಚೂರು ಮೊದಲಾದವರು **ಖಜಾಂಚಿಗಳಾಗಿಯೂ,** ಶ್ರೀ ಆಲೂರು ವೆಂಕಟರಾವ, ಡಾ. ಎಸ್. ಸಿ. ನಂದೀಮಠ, ಡಾ. ಬಿ.ಎ. ಸಾಲೇತೊರೆ, ಶ್ರೀ ನಾ.ಶ್ರೀ. ಕಮಲಾಪೂರ, ಶ್ರೀ ರಾ. ಸ್ವಾ. ಪಂಚಮುಖಿ, ಡಾ. ವ್ಹಿ. ಆರ್. ಉಮರ್ಜಿ, ಡಾ. ಪಿ. ಆರ್. ಪಂಚಮುಖಿ, ಡಾ. ಎ. ಕೆ. ಶಾಸ್ತ್ರಿ ಮೊದಲಾದವರು ಕರ್ನಾಟಕ ಹಿಸ್ಟೋರಿಕಲ್ ರಿವ್ಯೂದ **ಸಂಪಾದಕರಾಗಿಯೂ** ಕರ್ನಾಟಕ ಇತಿಹಾಸ ಸಂಶೋಧನ ಮಂಡಲದಲ್ಲಿ ಸೇವೆ ಸಲ್ಲಿಸಿದ್ದಾರೆ.

ಈ ಎಲ್ಲ ಮಹನೀಯರಿಗೆ, ಮಂಡಲದ ಅಂದಿನ ಇಂದಿನ ಎಲ್ಲ ಅಧ್ಯಕ್ಷ-ಉಪಾಧ್ಯಕ್ಷರಿಗೆ, ಕಾರ್ಯಕಾರಿಣೀ ಸಭೆಯ ಸದಸ್ಯರಿಗೆ ಹಾಗೂ ಎಲ್ಲ ಸದಸ್ಯರಿಗೆ ಸುವರ್ಣ ಕರ್ನಾಟಕದ ಸುವರ್ಣ ಮಹೋತ್ಸವದ ಈ ಶುಭಸಂದರ್ಭದಲ್ಲಿ ಅವರು

ಸಲ್ಲಿಸಿರುವ ಹಾಗೂ ಸಲ್ಲಿಸುತ್ತಿರುವ ಸೇವೆಯನ್ನು ಗಮನಿಸಿ ಕೃತಜ್ಞತಾಭಾವ ಪೂರ್ವಕ ನಮನಗಳನ್ನು ಸಲ್ಲಿಸುತ್ತೇವೆ. ಈ ಮಹನೀಯರು ಈ ಸಂಸ್ಥೆಯನ್ನು ಎಂಥ ಅಡೆತಡೆ, ತೊಂದರೆಗಳು ಬಂದರೂ ಸಂರಕ್ಷಿಸಿ ಬೆಳೆಸಿದ್ದಾರೆ. ಸಂಶೋಧನಾ ಪ್ರಪಂಚದಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸುವ ಮೂಲಕ ಅನೇಕರಿಗೆ ಆಶ್ರಯಸ್ಥಾನರಾಗಿದ್ದಾರೆ. ಇದೇ ಸುಅವಸರದಲ್ಲಿ ಮಂಡಲದ ಉತ್ಕರ್ಷವನ್ನು ಬಯಸಿ ಕಾಲಕಾಲಕ್ಕೆ ಪ್ರೋತ್ಸಾಹಿಸಿದ ಹಾಗೂ ಪ್ರೋತ್ಸಾಹಿಸುತ್ತಿರುವ ಎಲ್ಲ ಕನ್ನಡಾಭಿಮಾನಿಗಳಿಗೆ ಮಂಡಲದ ಈಗಿನ ಎಲ್ಲ ಪದಾಧಿಕಾರಿಗಳೂ ಸದಸ್ಯರೂ ಆದ ನಾವೆಲ್ಲ ಮನಃಪೂರ್ವಕ ವಂದನೆಗಳನ್ನು ಸಮರ್ಪಿಸಲು ಬಯಸುತ್ತೇವೆ.

### ೧೨. ಸುವರ್ಣ ಕರ್ನಾಟಕದ ಸುವರ್ಣ ಮಹೋತ್ಸವ

ಕನ್ನಡಾಭಿಮಾನಿಗಳೇ! ಮಂಡಲದ ಹಿತೈಷಿಗಳೇ! ಕರ್ನಾಟಕ ರಾಜ್ಯವು ಉದಯವಾಗಿ ೫೦ ವರ್ಷಗಳಾದ ಪ್ರಯುಕ್ತ ಕನ್ನಡಿಗರೆಲ್ಲರೂ ಈ ವರ್ಷವನ್ನು ವಿಶೇಷೋತ್ಸಾಹದಿಂದ ಆಚರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧನ ಮಂಡಲವು ಕರ್ನಾಟಕದ ಸುವರ್ಣ ಮಹೋತ್ಸವವನ್ನು ಒಂದು ವಿಶಿಷ್ಟ ರೀತಿಯಿಂದ ಆಚರಿಸಲು ಮುಂದಾಗಿದೆ. ಮಂಡಲವು ಈ ವರ್ಷದಲ್ಲಿ ನಡೆಸಲು ವಿಶೇಷೋಪನ್ಯಾಸಗಳು, ವಿಸ್ತರಣೋಪನ್ಯಾಸಗಳು, ಗ್ರಂಥಪ್ರಕಾಶನ, ವಿಚಾರಸಂಕಿರಣ, ಡಿಪ್ಲೋಮಾ ಕೋರ್ಸ್‌ಗಳು ಮುಂತಾದ ಹಲವು ಯೋಜನೆಗಳನ್ನು ಹಾಕಿಕೊಂಡು ಕಾರ್ಯಪ್ರವೃತ್ತವಾಗಿದೆ. ಕರ್ನಾಟಕದ ಗತವೈಭವವನ್ನು ಈಗಿನ ಸಮಾಜಕ್ಕೆ ತಿಳಿಸಿ ಜನಜಾಗೃತಿ ಮಾಡುವ ಉದ್ದೇಶದಿಂದ ಹಮ್ಮಿಕೊಂಡಿರುವ ಈ ಯೋಜನೆಗಳ ಅಂಗವಾಗಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ೫೦ ಗ್ರಂಥಗಳನ್ನು ಪ್ರಕಾಶಪಡಿಸಲು ವಿದ್ವಾಂಸರಿಂದ ಕೃತಿಗಳನ್ನು ಆಹ್ವಾನಿಸಲಾಗಿತ್ತು. ನಮ್ಮ ಈ ಆಹ್ವಾನಕ್ಕೆ ಸ್ಪಂದಿಸಿ ವಿದ್ವಾಂಸರು ಕಳಿಸಿಕೊಟ್ಟ ಕೃತಿಗಳಲ್ಲಿ ಈಗ ಕರ್ನಾಟಕದ ಸುವರ್ಣ ಮಹೋತ್ಸವದ ಸವಿನೆನಪಿಗಾಗಿ ೫೦ ಕೃತಿಗಳನ್ನು ಪ್ರಕಾಶಪಡಿಸಲಾಗುತ್ತಿದೆ (ಅವುಗಳ ವಿವರವನ್ನು ಪ್ರತ್ಯೇಕ ಪುಟಗಳಲ್ಲಿ ಕಾಣಿಸಲಾಗಿದೆ).

ಕರ್ನಾಟಕದ ಇತಿಹಾಸ, ಸಂಸ್ಕೃತಿ, ಕಲೆ, ಸಾಹಿತ್ಯ ಇವೇ ಮೊದಲಾದ ವಿಷಯಗಳಲ್ಲಿ ಆಳವಾಗಿ ಅಧ್ಯಯನ ಮಾಡಿದ ಕರ್ನಾಟಕದ ವಿವಿಧ ವಿದ್ವಾಂಸರು ಕನ್ನಡದಲ್ಲಿ ಬರೆದ ಕೃತಿಗಳಿವು. ಈ ಕೃತಿಗಳು ನಮ್ಮ ಕರ್ನಾಟಕದ ಅಪೂರ್ವವಾದ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತವೆ, ಕರ್ನಾಟಕದ ಗತ ವೈಭವವನ್ನು ತಿಳಿಸಿ ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಜಾಗೃತಗೊಳಿಸುತ್ತವೆ, ಭಾರತದೇಶದ ಇತರ ರಾಜ್ಯಗಳ ನಿವಾಸಿಗಳಲ್ಲಿ ಕನ್ನಡಿಗರ ಮೇಲಿನ ಗೌರವವನ್ನು ಹೆಚ್ಚಿಸುತ್ತವೆ. ಇವುಗಳ ಪ್ರಕಾಶನದಿಂದ ಸಂಶೋಧಕ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಅನೇಕ ಉಪಯುಕ್ತ ಮಾಹಿತಿಗಳನ್ನೊದಗಿಸಿ ಹೆಚ್ಚಿನ ಸಂಶೋಧನೆಗೆ ಅನುವು ಮಾಡಿಕೊಟ್ಟಂತಾಗುತ್ತದೆ. ಈ ಕೃತಿಗಳಲ್ಲದೇ ಕರ್ನಾಟಕದಲ್ಲಿ ಅತ್ಯಮೂಲ್ಯವಾದ ವಿಷಯಗಳನ್ನೊಳಗೊಂಡ ಅನೇಕ ಕೃತಿಗಳು ಇನ್ನೂ ಹಸ್ತಪ್ರತಿ ರೂಪದಲ್ಲಿದ್ದು, ಬೆಳಕು ಕಾಣದಾಗಿವೆ. ಕೆಲವು ಕೃತಿಗಳು ಮುದ್ರಿತವಾಗಿದ್ದರೂ ಈಗ ಅವಲೋಕನೆಗೆ ದೊರೆಯದಂತಾಗಿವೆ. ಇಂಥ ಅಮೂಲ್ಯ ಕೃತಿಗಳು ನಾಶವಾಗುವ ಮೊದಲೇ ಅವುಗಳನ್ನು ಪ್ರಕಾಶಕ್ಕೆ ತರುವುದು ಕನ್ನಡಿಗರಾದ ನಮ್ಮೆಲ್ಲರ

ಕರ್ತವ್ಯವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈಗ ಮಂಡಲದಿಂದ ಪ್ರಕಟವಾಗುತ್ತಿರುವ ಈ ೫೦ ಕೃತಿಗಳಲ್ಲದೇ ಈ ಸಂದರ್ಭದಲ್ಲಿ ಪ್ರಸಿದ್ಧ ವಿದ್ವನ್ಮಣಿಗಳಿಂದ ಬರೆಯಲ್ಪಟ್ಟ ಇಂಗ್ಲೀಷ ಹಾಗೂ ಕನ್ನಡ ಲೇಖನಗಳಿಂದ ಕೂಡಿದ ಒಂದು ಬೃಹತ್ ಸ್ಮರಣ ಸಂಪುಟವನ್ನೂ ಪ್ರಕಾಶಪಡಿಸಲಾಗುತ್ತಿದೆ.

ಈ ಕೃತಿಗಳಲ್ಲಿ ಐದಾರು ಕೃತಿಗಳು ಈ ಮೊದಲೇ ಬಹು ವರ್ಷಗಳ ಹಿಂದೆ ಮಂಡಲದಿಂದ ಪ್ರಕಾಶಿತವಾಗಿದ್ದರೂ ಈಗ ಅನುಪಲಬ್ಧವಾಗಿರುವ ಅವುಗಳನ್ನು ಪುನರ್ಮುದ್ರಿಸಬೇಕೆಂದು ಬಹುಜನರ ಬೇಡಿಕೆ ಇದ್ದುದರಿಂದ ಈ ಶುಭಾವಸರದ ಪ್ರಕಟಣೆ ಮಾಲೆಯಲ್ಲಿ ಅವುಗಳನ್ನು ಸೇರಿಸಿಕೊಳ್ಳಲಾಗಿದೆ.

ಈ ಎಲ್ಲ ಕೃತಿಗಳ ಲೇಖಕರು ಹಾಗೂ ಸಂಪಾದಕರು, ಇವುಗಳನ್ನು ಗಣಕ ಯಂತ್ರದ ಸಹಾಯದಿಂದ ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟ ಕುಶಲ ಯಾಂತ್ರಿಕರು, ಪ್ರೂಫ ನೋಡುವಲ್ಲಿ ಸಹಕರಿಸಿದ ಕಾರ್ಯಕರ್ತರು ಮತ್ತು ಚೆನ್ನಾಗಿ ಮುದ್ರಿಸಿ ಪುಸ್ತಕ ರೂಪಕ್ಕೆ ತಂದುಕೊಟ್ಟ ಮುದ್ರಣಾಲಯದ ಅಧಿಕಾರಿಗಳು ಹಾಗೂ ಎಲ್ಲ ಕರ್ಮಚಾರಿಗಳು ಇವರೆಲ್ಲರ ಸಹಾಯ ಸಹಕಾರಗಳನ್ನು ಮಂಡಲವು ಕೃತಜ್ಞತೆಯಿಂದ ಸ್ಮರಿಸುತ್ತದೆ. ಕೆಲವು ಗ್ರಂಥಗಳ ಮೊದಲಿನ ಪ್ರೂಫುಗಳನ್ನು ಮಂಡಲದ ಕಾರ್ಯಕರ್ತರು ತಿದ್ದಿದ ನಂತರ ಕೊನೆಯ ಪ್ರೂಫನ್ನು ಆಯಾ ಗ್ರಂಥದ ಲೇಖಕರೇ ತಿದ್ದಿ ಸಹಕರಿಸಿದ್ದಾರೆ. ಈ ಎಲ್ಲ ಲೇಖಕರಿಗೆ / ಸಂಪಾದಕರಿಗೆ ವಿಶೇಷ ಕೃತಜ್ಞತೆಗಳು. ಈ ಗ್ರಂಥಗಳ ಸಂಪಾದನೆಯ ಕಾರ್ಯದಲ್ಲಿ ಅಮೂಲ್ಯ ಸಲಹೆಗಳನ್ನಿತ್ತು ಸಹಕರಿಸಿದ ಸಲಹಾ ಮಂಡಳಿಯ ಖ್ಯಾತನಾಮರಾದ ವಿದ್ವಾಂಸರಿಗೆ ಗೌರವಪೂರ್ವಕ ವಂದನೆಗಳು.

ಈಗ ಪ್ರಕಟಿಸಲಾಗುತ್ತಿರುವ ಗ್ರಂಥಗಳಲ್ಲಿಯ ಎಲ್ಲ ವಿಷಯಗಳು ಆಯಾ ಗ್ರಂಥದ ಲೇಖಕರು / ಸಂಪಾದಕರು ತಮಗೆ ಉಪಲಬ್ಧವಾದ ದಾಖಲೆಗಳೊಂದಿಗೆ ಮಂಡಿಸಿದ ಸ್ವಂತ ವಿಚಾರಗಳಿಂದ ಹೊರಹೊಮ್ಮಿದವುಗಳಾಗಿವೆ. ಏನಾದರೂ ವಿವಾದಾತ್ಮಕ ವಿಷಯಗಳು ಕಂಡುಬಂದರೆ ಅವುಗಳಿಗೆ ಮಂಡಲವು ಹೊಣೆಗಾರವಲ್ಲವೆಂದು ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಯಸುತ್ತೇನೆ.

ಕರ್ನಾಟಕ ಇತಿಹಾಸ ಸಂಶೋಧನ ಮಂಡಲವು ಎಲೆಮರೆಯ ಕಾಯಿಯಂತಿದ್ದು ಅವಾಸ್ತವ ಪ್ರಚಾರ- ಖ್ಯಾತಿಗಳನ್ನು ಬಯಸದೇ ತನ್ನ ಅನಿಯಮಿತ ಹಾಗೂ ಮಿತವಾದ ಆದಾಯದಲ್ಲೇ ಉಪನ್ಯಾಸ, ವಿಚಾರ ಸಂಕಿರಣ, ಹಸ್ತ ಪ್ರತಿಗಳ ಸಂಶೋಧನೆ, ಗ್ರಂಥ ಪ್ರಕಾಶನ ಇವೇ ಮೊದಲಾದ ಮಾಧ್ಯಮಗಳ ಮೂಲಕ ಕರ್ನಾಟಕ ಮಾತೆಯ ನಿಷ್ಕಾಮ ಸೇವೆಯನ್ನು ಕರ್ತವ್ಯಭಾವನೆಯಿಂದ ಮಾಡುತ್ತ ಆಗಾಗ ಎದುರಾಗುತ್ತಿರುವ ತೊಂದರೆಗಳನ್ನು ಲೆಕ್ಕಿಸದೇ ಮುನ್ನಡೆದಿದೆ.

"ಸಂಸ್ಕೃತ - ಸಂಸ್ಕೃತಿಸೇವೆ - ಪ್ರಸಾರದಲ್ಲಿ, ಕರ್ನಾಟಕದಲ್ಲಿ ಮುಂಚೂಣಿಯಲ್ಲಿರುವ, ಶತಮಾನದ ಸಂಭ್ರಮದಲ್ಲಿರುವ ಮಾದರಿ ಸಂಸ್ಥೆ" ಎಂದು ಈ ಮಂಡಲವನ್ನು ಶ್ಲಾಘಿಸುತ್ತ ಇದರ ಅದ್ಭುತ ಸಾಧನೆಗಾಗಿ ಮಂತ್ರಾಲಯದ ಶ್ರೀರಾಘವೇಂದ್ರ ಸ್ವಾಮಿ ಮಠದ ಪೀಠಾಧಿಪತಿಗಳು ದಿ. ೩೦-೮-೨೦೦೭ ರಂದು ಶ್ರೀರಾಯರ ಆರಾಧನಾ ಶುಭಸಂದರ್ಭದಲ್ಲಿ ಕರ್ನಾಟಕ ಇತಿಹಾಸ ಸಂಶೋಧನ ಮಂಡಲಕ್ಕೆ **ಶ್ರೀರಾಘವೇಂದ್ರಾನುಗ್ರಹ ಪ್ರಶಸ್ತಿ** ಹಾಗೂ ೧ ಲಕ್ಷ ರೂ. ಪ್ರೋತ್ಸಾಹದೊಂದಿಗೆ ಫಲಮಂತ್ರಾಕ್ಷತೆಯನ್ನಿತ್ತು ಅನುಗ್ರಹಿಸಿದ್ದಾರೆಂದು ತಿಳಿಸಲು ಹರ್ಷವಾಗುತ್ತದೆ.

ಸುವರ್ಣ ಮಹೋತ್ಸವದ ಪ್ರಕಟಣೆಗಳಿಗೆ ಕರ್ನಾಟಕ ಸರಕಾರವು ಆಂಶಿಕ ಅನುದಾನವನ್ನಿತ್ತ ಕಾರಣಕ್ಕಾಗಿ ಸರಕಾರದ ಸಂಬಂಧಿಸಿದ ಎಲ್ಲ ಅಧಿಕಾರಿಗಳನ್ನು ಮಂಡಲವು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಸುವರ್ಣ ಕರ್ನಾಟಕದ ಸುವರ್ಣ ಮಹೋತ್ಸವದ ಅವಿಸ್ಮರಣೀಯವಾದ ಈ ಶುಭಾವಸರದಲ್ಲಿ ಕರ್ನಾಟಕದ ವಿದ್ವಾಂಸರು ತಂದು ಕೊಟ್ಟ ಗ್ರಂಥರೂಪದಲ್ಲಿರುವ ೫೦ ಪುಷ್ಪಗಳನ್ನು ಸೇರಿಸಿ ಸಿದ್ಧಪಡಿಸಲಾದ ಗ್ರಂಥಮಾಲೆಯನ್ನು ಕರ್ನಾಟಕ ಮಾತೆಯ ಅಡಿದಾವರೆಗಳಲ್ಲಿ ಸಮರ್ಪಿಸುತ್ತ ಮಂಡಲವು ಕೃತಕೃತ್ಯ ಭಾವವನ್ನು ಹೊಂದುತ್ತಿದೆ. ಜನೋಪಯೋಗಿಯಾದ ಇಂಥ ಸತ್ಕಾರ್ಯಗಳು ಮಂಡಲದಿಂದ ನಿರಂತರ ನಡೆಯುತ್ತಿರುವಂತೆ ಎಲ್ಲ ಹಿರಿಯರ ಆಶೀರ್ವಾದ ಹಾಗೂ ಕನ್ನಡಾಭಿಮಾನಿಗಳಾದ ತಮ್ಮೆಲ್ಲರ ಸದಿಚ್ಛೆ-ಪ್ರೋತ್ಸಾಹಗಳು ನಮ್ಮೊಂದಿಗೆ ಸದಾಕಾಲ ಇರಲಿ ಎಂದು ಪ್ರಾರ್ಥಿಸುತ್ತೇನೆ.

ವಿಜಯದಶಮೀ
ಗುರುವಾರ
೦೯-೧೦-೨೦೦೮

**ಆ. ರಾ. ಪಂಚಮುಖಿ,**
ಕಾರ್ಯಾಧ್ಯಕ್ಷ ಕ. ಇ. ಸಂ. ಮಂಡಲ,
ಮತ್ತು ಕಾರ್ಯನಿರ್ವಾಹಕ ಸಂಪಾದಕ
ಧಾರವಾಡ

## ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ – ೦೧
## ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆಯ ೫೦ ಕೃತಿಗಳು

| ಕ್ರ. ಸಂ. | ಗ್ರಂಥದ ಹೆಸರು | ಲೇಖಕರ ಹೆಸರು |
|---|---|---|
| **I.** | **ಇತಿಹಾಸ** | |
| ೧. | ಕರ್ನಾಟಕದ ಅರಸು ಮನೆತನಗಳು | ಶ್ರೀ ಎನ್. ಲಕ್ಷ್ಮೀನಾರಾಯಣ ಮತ್ತು ವಿದ್ಯಾರತ್ನ ಶ್ರೀ ಆರ್.ಎಸ್. ಪಂಚಮುಖಿ |
| ೨. | ಕನ್ನಡ ನಾಡಿನ ಕಥೆಗಳು | ಶ್ರೀ ನಾರಾಯಣ ಶರ್ಮ |
| ೩. | ಕನ್ನಡ ನಾಡಿನ ಮಿಂಚಿದ ಮಹಿಳೆಯರು | ಡಾ|| ಪಾಂಡುರಂಗರಾವ ದೇಸಾಯಿ |
| ೪. | ಕರ್ನಾಟಕದ ಪ್ರಾಕೃತ ಕವಿಚರಿತೆ | ಡಾ|| ವ್ಹಿ.ಆರ್. ಉಮರ್ಜಿ |
| ೫. | ಕರ್ನಾಟಕದ ಇತಿಹಾಸ | ವಿದ್ಯಾರತ್ನ ಶ್ರೀ ಆರ್.ಎಸ್. ಪಂಚಮುಖಿ |
| ೬. | ಶಿಸುಗಲಿ ಪಾಂಡ್ಯರು ಮತ್ತು ಚಂದಾವರ ಕಾದಂಬರು | ಡಾ|| ಗಣಪತಿ ಗೌಡ |
| ೭. | ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ | ಶ್ರೀ ವಾಯ್. ಹನುಮಂತ ರೆಡ್ಡಿ |
| ೮. | ಗತಕಾಲದ ಧಾರವಾಡ | ಪ್ರೊ. ಎನ್. ಎಚ್. ಕಟಗೇರಿ |
| ೯. | ಯುದ್ಧಮಂಡಲಮಧ್ಯದೊಳಗೆ...... | ಶ್ರೀ ಅತ್ತಿಮುರುಡು ವಿಶ್ವೇಶ್ವರ |
| ೧೦. | ವಕೀಲ ರಾಮಪ್ಪನ ಕೈಫಿಯತ್ತು | ಡಾ|| ಎಚ್.ಎಸ್. ಗೋಪಾಲರಾವ |
| ೧೧. | ಕರ್ನಾಟಕದ ಕೋಟೆ ಕೊತ್ತಲಗಳು ಭಾಗ–೧ | ಡಾ|| ಎಸ್.ಕೆ. ಜೋಶಿ |
| ೧೨. | ವಿಜಯ ನಗರ ಸಾಮ್ರಾಜ್ಯ | ಡಾ|| ಪಿ.ಬಿ. ದೇಸಾಯಿ |
| **II.** | **ಶಾಸನ** | |
| ೧೩ | ಶಾಸನ ಸರಸ್ವತಿ | ಡಾ || ಕೆ. ಆರ್. ಗಣೇಶ |
| ೧೪ | ಕದಂಬರ ಅರತಲೆಗದ್ದೆಯ ಅಪೂರ್ವ ತಾಮ್ರಶಾಸನ ಭಂಡಾರ | ಡಾ|| ಜಗದೀಶ, ಡಾ. ಸಾಮಗ, ಡಾ|| ಎಮ್.ವ್ಹಿ. ರಮೇಶ ಜೋಯಿಸ್ |
| ೧೫ | ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಡಾ|| ಎಚ್. ಜಯಮ್ಮ |
| ೧೬ | ಹಂಪೆಯ ಶಾಸನಗಳು | ಡಾ|| ಜಿ.ಎಸ್. ಭಗವತಿ |
| ೧೭ | ಕರ್ನಾಟಕ ಶಾಸನೋಕ್ತ ಮಹಿಳೆ : ಸಮೀಕ್ಷೆ–ಸಂಸ್ಕೃತಿ | ಡಾ|| ಚೆನ್ನಕ್ಕ ಪಾವಟೆ |
| ೧೮ | ಕರ್ನಾಟಕ ಶಾಸನಗಳಲ್ಲಿ ಶಾಪಾಶಯ | ಡಾ|| ದೇವರಕೊಂಡಾರೆಡ್ಡಿ |

## III. ಸಂಸ್ಕೃತಿ, ಧರ್ಮ, ಕಲೆ

| | | |
|---|---|---|
| ೧೯ | ಸಂಗಮರ ದೇವಾಲಯಗಳು | ಡಾ॥ ಸಿ. ಎಸ್. ಅಪರ್ಣ |
| ೨೦ | ಕರ್ನಾಟಕದ ದೇವಾಲಯಗಳಲ್ಲಿ ರಂಗಭೋಗ (ನೃತ್ಯ) | ಡಾ॥ ಕರುಣಾ ವಿಜಯೇಂದ್ರ |
| ೨೧ | ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು | ಡಾ॥ ಡಿ. ಜಿ. ಕುಲಕರ್ಣಿ |
| ೨೨ | ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ | ಡಾ॥ ಎಮ್. ಎಸ್. ಕಡಪಟ್ಟಿ |
| ೨೩ | ಕಿಟೆಲ್ಲ ಕೋಶ – ಸಾಂಸ್ಕೃತಿಕ ಅಧ್ಯಯನ | ಡಾ. ಸುಧಾ ಎಸ್. ಕೌಜಗೇರಿ |
| ೨೪ | ಕರ್ನಾಟಕದ ಶೈವ ಶಿಲ್ಪಗಳು | ಡಾ॥ ಕೆ. ವಸಂತಲಕ್ಷ್ಮೀ |

## IV. ಕಲಾ ಪರಂಪರೆ

| | | |
|---|---|---|
| ೨೫ | ಬಾದಾಮಿಯ ಚಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ | ಡಾ॥ ಶ್ರೀನಿವಾಸ ವೆಂ. ಪಾಡಿಗಾರ |
| ೨೬ | ಪಟ್ಟದಕಲ್ಲು ದರ್ಶನ | ಡಾ॥ ಶೀಲಾಕಾಂತ ಪತ್ತಾರ |
| ೨೭ | ಉತ್ತರ ಕರ್ನಾಟಕದ ಪ್ರಾಚೀನ ಚಿತ್ತಾರಗಳು | ಶ್ರೀ ಎಮ್. ಎಮ್. ಜಗತಾಪ |
| ೨೮ | ಕರ್ನಾಟಕದ ಯಕ್ಷಗಾನ ಕಲಾಲೋಕ | ಶ್ರೀ ಜಿ. ಆರ್. ಪಾಂಡೇಶ್ವರ |
| ೨೯ | ಕನ್ನಡ ಯಕ್ಷಗಾನ ಮತ್ತು ಸಂಸ್ಕೃತದ ಕೂಟಿಅಟ್ಟಂ – ತೌಲನಿಕ ಅಧ್ಯಯನ | ಡಾ॥ ಜಿ. ಎಸ್. ಹೆಗಡೆ |

## V. ವಿವಿಧ ವಿಷಯಗಳ ಮೇಲಿನ ಕೃತಿಗಳು

| | | |
|---|---|---|
| ೩೦ | ಶ್ರೀಧರಾಚಾರ್ಯ ವಿರಚಿತ ತ್ರಿಶತಿಕಾ ಅಥವಾ ಪಾಣೀಗಣಿತಸಾರ | ಡಾ॥ ವೇಣುಗೋಪಾಲ ಹೆರೂರ |
| ೩೧ | ಭಾಸ್ಕರಾಚಾರ್ಯ ವಿರಚಿತ ಜ್ಯೋತ್ಪತ್ತಿ | ಡಾ॥ ವೇಣುಗೋಪಾಲ ಹೆರೂರ |
| ೩೨ | ಕನ್ನಡದ ಹಳಮೆ ಮತ್ತು ಇತರ ಸಂಪ್ರಬಂಧಗಳು | ಡಾ॥ ಶಾಲಿನಿ ರಘುನಾಥ ಭಟ್ಟ |
| ೩೩ | ಕನ್ನಡದಲ್ಲಿ ಮಹಾಭಾರತಗಳು ಮತ್ತು ಕುಮಾರವ್ಯಾಸ ಭಾರತ ನಿಘಂಟು | ಡಾ॥ ಎನ್ಕೆ. ಕುಲಕರ್ಣಿ |
| ೩೪ | ಕರ್ನಾಟಕದ ಸ್ಥಳನಾಮಗಳು –ಒಂದು ಅಧ್ಯಯನ | ಶ್ರೀ ಎಸ್.ಎಲ್. ದೇಶಪಾಂಡೆ |

| | |
|---|---|
| ೩೫ ನಾ ಕಂಡ ಕರ್ನಾಟಕ | ಡಾ॥ ಕೃಷ್ಣಾನಂದ ಕಾಮತ |
| ೩೬ ಕರುನಾಡಿನ ಜನಜೀವನ | ಡಾ॥ ಜ್ಯೋತ್ಸ್ನಾ ಕಾಮತ |
| ೩೭ ಸುವರ್ಣ ಕರ್ನಾಟಕ | ಡಾ॥ ಅರಳುಮಲ್ಲಿಗೆ ಪಾರ್ಥಸಾರಥಿ |
| ೩೮ i) ನಾಡು ಕಟ್ಟಿದವರು (ರೂಪಕ) | ಶ್ರೀ ಸಂಜೀವ ವ್ಹಿ. ಬೆಟಗೇರಿ |
| ii) ಹಂಪೆ–ರಾಮಾಯಣದ ಕಿಷ್ಕಿಂಧೆಯೆ? | ಡಾ॥ ಅ. ಸುಂದರ |
| ೩೯ ಕೈಗನ್ನಡಿಯಲ್ಲಿ ಕನ್ನಡಿತಿ | ಡಾ॥ ಜ್ಯೋತ್ಸ್ನಾ ಕಾಮತ |
| ೪೦ ಆಲೂರು ವೆಂಕಟರಾವ : ವ್ಯಕ್ತಿ ಮತ್ತು ಸಾಧನೆ | ಡಾ॥ ವಿ.ಎಸ್. ಆರಾಧ್ಯಮಠ |
| ೪೧ ಕರ್ನಾಟಕದ ಐತಿಹಾಸಿಕ ಮತ್ತು ಪ್ರೇಕ್ಷಣೀಯ ಸ್ಥಳಗಳು | ಪ್ರೊ. ರಾಜೇಶ ಚಿಟಗುಪ್ಪಿ |

## VI. ಜಾನಪದ ಸಾಹಿತ್ಯ

| | |
|---|---|
| ೪೨ ಕರ್ನಾಟಕದ ಉರುಸುಗಳು | ಡಾ॥ ಇಬ್ರಾಹಿಂ ಎಂ. ಮುಲ್ಲಾ |
| ೪೩ ಉತ್ತರ ಕರ್ನಾಟಕದ ಜನಪದ ಸೋಗುಗಳು | ಡಾ॥ ಎಸ್.ಆರ್. ರಾಮರಥ |
| ೪೪ ಮಹಿಳಾ ಜಾನಪದ | ಡಾ॥ ಶಾಲಿನಿ ಭಟ್ಟ ಮತ್ತು ಡಾ॥ ಇಮ್ರಾಪುರ |

## VII. ಶಿವಶರಣರು ಮತ್ತು ವಚನ ಸಾಹಿತ್ಯ

| | |
|---|---|
| ೪೫ ಶರಣ ಸಂಚಯ | ಡಾ॥ ವೀರಣ್ಣ ರಾಜೂರ |
| ೪೬ ಶರಣರ ವಿಚಾರಕ್ರಾಂತಿ | ಪ್ರೊ.ಎಸ್.ಉಮಾಪತಿ |
| ೪೭ ನಿಜಗುಣಶಿವಯೋಗಿಗಳು : ಜೀವನ–ಸಾಧನೆ | ಡಾ॥ ಎಸ್. ಎಸ್. ಬಸುಪಟ್ಟದ |
| ೪೮ ವೀರಶೈವ ತಾರಾವಳಿ ಸಾಹಿತ್ಯ | ಡಾ ॥ ವೀರಣ್ಣ ರಾಜೂರ |

## VIII. ದಾಸ ಸಾಹಿತ್ಯ

| | |
|---|---|
| ೪೯ ಕರ್ನಾಟಕದ ಹರಿದಾಸ ಸಂಚಯ ಮತ್ತು ಸಾಹಿತ್ಯ ಚಿಂತನೆ | ಡಾ॥ ಅರಳುಮಲ್ಲಿಗೆ ಪಾರ್ಥಸಾರಥಿ |
| ೫೦ ಕರ್ನಾಟಕದ ಹರಿದಾಸ ಸಾಹಿತ್ಯ | ವಿದ್ಯಾರತ್ನ ರಾ.ಸ್ವಾ. ಪಂಚಮುಖಿ |

******

# ಅರ್ಪಣೆ

ಎಳನೆಯ ವಯಸ್ಸಿನಲ್ಲೆ ತಬ್ಬಲಿಯನ್ನಾಗಿಸಿ ಕಣ್ಮರೆಯಾದ, ವಿವಿಧ ಕಲೆಗಳನ್ನು ಕೈಗೂಡಿಸಿಕೊಂಡಿದ್ದ ತಾಯಿ, ಶ್ರೀಮತಿ ಶಾರದಾಬಾಯಿ ಬುರ್ಡೆ ಅವರ ಪುಣ್ಯಸ್ಮೃತಿಗೆ -

ಜ್ಯೋತ್ಸ್ನಾ

## ಲೇಖಕಿಯ ನುಡಿ

ನಮ್ಮಲ್ಲಿ, ಇತಿಹಾಸದ ಅಧ್ಯಯನ ಕುತೂಹಲ ಕೆರಳಿಸುವ ವಿಧದಲ್ಲಿ ಬೆಳೆದು ಬಂದಿಲ್ಲ. ಶಾಲಾ ಕಾಲೇಜು ಪಠ್ಯಪುಸ್ತಕಗಳಲ್ಲಿ ಕೇವಲ ರಾಜಕೀಯ ಘಟನೆಗಳು, ಆಳಿದ ಅರಸು ಮನೆತನಗಳು, ಅವರು ಗೆದ್ದ ಯುದ್ಧಗಳು ಹಾಗೂ ಇಸ್ವಿಗಳ ಸರಮಾಲೆಯ ವಿವರಗಳೇ ತುಂಬಿರುತ್ತವೆ. ಹೀಗಾಗಿ ಇತಿಹಾಸ ವಿಷಯವನ್ನು ಪ್ರೀತಿಸುವವರಿಗಿಂತ ಅಲಕ್ಷಿಸುವವರೇ ಹೆಚ್ಚು ಜನ ಇದ್ದಂತೆ, ಕೇವಲ ಪರೀಕ್ಷೆಯ ದೃಷ್ಟಿಯಿಂದ ಓದಿ ಉರುಹಾಕಿ, ಬರೆದಾದ ಬಳಿಕ ಮರೆತು ಬಿಡುವವರೇ ಬಹು ಸಂಖ್ಯಾಕರಿದ್ದರೆ ಆಶ್ಚರ್ಯಪಡಬೇಕಿಲ್ಲ.

ಆದರೆ ಮಾನವ ಸಮಾಜಜೀವಿ. ಪರಿಸರದ ಶಿಶು. ಶತಮಾನಗಳಲ್ಲಿ ಆತನು ಬಾಳಿ ಬದುಕಿದ ಸಮಾಜದ ಅಭ್ಯಾಸವೂ ಮಹತ್ವದ್ದಾಗಿದೆ. ನಾಡಿನ ಸಮಗ್ರ ಸಾಂಸ್ಕೃತಿಕ ಅಧ್ಯಯನದಲ್ಲಿ ಸಾಮಾಜಿಕ ಇತಿಹಾಸದ ಪಾತ್ರ, ಪ್ರಮುಖವಾಗಿದೆಯೆಂಬ ವಿಚಾರ, ಈಗಿನ ಕೆಲ ದಶಕಗಳಲ್ಲಿ ಬೆಳೆದುಬಂದಿದೆ. ಸಹಸ್ರಾರು ವರ್ಷಗಳಿಂದ ನಮ್ಮ ಹಿರಿಯರು ಬೆಳೆಸಿ, ಉಳಿಸಿಕೊಂಡು ಬಂದ ಕೆಲವು ಮೌಲ್ಯಗಳನ್ನು, ಈಗ ಅವು ಭರದಿಂದ ಕುಸಿಯುತ್ತಿರುವ ಸಂದರ್ಭದಲ್ಲಿ ನೆನಪಿಸಿಕೊಳ್ಳುವದು, ಹಿಂದೆಂದಿಗಿಂತಲೂ ಸಾಮಯಿಕವಾಗಿದೆ. ಇಂಥ ಮೌಲ್ಯಗಳ ಹಿಂದಿನ ಸಮೂಹ ಪ್ರಜ್ಞೆ, ಪರಿಸರ ಪ್ರೇಮ, ಮಾನವೀಯತೆ ಮತ್ತು ಮುಖ್ಯವಾಗಿ ಅವರ ಜೀವನೋಲ್ಲಾಸದ ಕೆಲವು ಪರಿಗಳನ್ನು ಅರಿಯಲು ಯತ್ನಿಸುವದು ಮುಖ್ಯವಾಗಿದೆ.

ಸಾಮಾನ್ಯ ನಂಬಿಕೆಯಂತೆ, ನಮ್ಮ ಹಿರಿಯರು ಮಡಿಹುಡಿಯ ಧಾರ್ಮಿಕ ಆಚರಣೆಗಳಲ್ಲೇ ತೊಡಗಿದ್ದು ಕೇವಲ ಪರಲೋಕಚಿಂತನೆಯಲ್ಲಿ ಕಾಲ ಕಳೆಯುವವರಾಗಿರಲಿಲ್ಲ. ಲೌಕಿಕ ವಿಚಾರಗಳಲ್ಲೆಲ್ಲ ಉತ್ತಮ ಅಭಿರುಚಿಯನ್ನು ಬೆಳೆಸಿಕೊಂಡವರಾಗಿದ್ದರು. ಬಗೆಬಗೆಯ ರುಚಿಕಟ್ಟಾದ ಊಟ - ಉಣಿಸುಗಳನ್ನು ಸವಿದು ತಣಿಯುತ್ತಿದ್ದರು. ಮಧುಪಾನಗೋಷ್ಠಿಗಳ ಪರಿಚಯ ಉಳ್ಳವರಾಗಿದ್ದರು. ತರತರದ ವೇಷ ಭೂಷಣಗಳನ್ನು ಧರಿಸಿ ಮೆರೆಯುತ್ತಿದ್ದರು, ಆಧುನಿಕವೆನಿಸುವ ಎಷ್ಟೋ ಆಟೋಟಗಳಲ್ಲಿ, ಸಂಘಟಿತ ಕ್ರೀಡಾ ಕೂಟಗಳಲ್ಲಿ, ಸಂಗೀತ ಗೋಷ್ಠಿಗಳಲ್ಲಿ ಭಾಗವಹಿಸಿ ಮೈಮರೆಯುತ್ತಿದ್ದರು. 'ಶರೀರಮಾದ್ಯಂ ಖಲುಧರ್ಮಸಾಧನಂ' ದೇಹವು ಮೊದಲಿಗೆ ಧರ್ಮಕ್ಕೆ ಸಾಧನ, ಎಂದು ನಂಬಿದ ಜನಾಂಗಕ್ಕೆ ಧರ್ಮವೆಂಬುದು ಉತ್ತಮ ಜೀವನದ ಪರಿಯಾಗಿತ್ತು. ಸೊಗಸಿನ ಜೀವನಕ್ಕೂ ಕೊನೆಗೆ ಮೋಕ್ಷಕ್ಕೂ ದಾರಿ ಮಾಡಿಕೊಡುವ ಮಾರ್ಗಗಳು ಪರಿಚಿತವಿದ್ದವು. ಲೌಕಿಕತೆಯನ್ನು ಕಡೆಗಣಿಸದ ಪೂರ್ವಜರ ಜೀವನ ಪ್ರೇಮದ ಕ್ಷಣಗಳನ್ನು ಹುಡುಕಿ ಹಿಡಿದಿಡುವ ಪ್ರಯತ್ನವನ್ನು ಇಲ್ಲಿಯ ಹದಿನೆಂಟು ಲೇಖಗಳಲ್ಲಿ ಮಾಡಿದ್ದೇನೆ.

ಮೂರುವರೆ ದಶಕಗಳ ಹಿಂದೆ ಕರ್ನಾಟಕ ಜನಜೀವದ ಚರಿತ್ರೆಯಲ್ಲಿ ಆಸಕ್ತಿತಾಳಿ, ಅದನ್ನೇ ಡಾಕ್ಟರೇಟ್ ಪದವಿಯ ಅಧ್ಯಯನಕ್ಕೆ ಆರಿಸಿದ್ದೆ. ನಂತರದ ವರ್ಷಗಳಲ್ಲೂ ಅದೇ ವಿಷಯದ ಹಲವು ಆಯಾಮಗಳ ವ್ಯಾಸಂಗ ಒಂದು 'ಚಟ'ವಾಗಿ ಬೆಳೆದು ಬಂದಿತು. ಹಿಂದಿನವರ ರೂಢಿ-ನಂಬಿಕೆಗಳು, ಜೀವನಕ್ರಮ, ಶಿಕ್ಷಣ ವ್ಯವಸ್ಥೆ, ಮಹಿಳೆಯರ ಸ್ಥಾನಮಾನಗಳು, ಮೊದಲಾದ ದೈನಂದಿನ ಜೀವನದ ಮೇಲೆ ಬೆಳಕುಬೀರುವ ಸಂಶೋಧನಾ ಲೇಖನಗಳನ್ನು ಬರೆಯುತ್ತ ಬಂದೆ. ವಿವಿಧ ಪತ್ರಿಕೆಗಳ ವಿಶೇಷ ಸಂಚಿಕೆಗಳಲ್ಲಿ ಹಲವಾರು ಲೇಖಗಳು

ಪ್ರಕಟವಾಗಿಯೂ ಇವೆ. ಅವನ್ನೆಲ್ಲ ಒಂದು ಸಂಕಲನದಲ್ಲಿ ಹೊರತರುವ ಆಸೆಯಿದ್ದರೂ ಅನೇಕ ವರ್ಷಗಳ ಕಾಲ ಅದು ಫಲಿಸುವ ಸಂದರ್ಭ ಒದಗಿರಲಿಲ್ಲ. ಕೊನೆಗೊಮ್ಮೆ ಶ್ರೀ ಆ. ರಾ. ಪಂಚಮುಖಿ ಅವರ ಆಸಕ್ತಿ ಪ್ರೋತ್ಸಾಹಗಳಿಂದ "ಸುವರ್ಣ ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆಯಲ್ಲಿ" ಈ ಪ್ರಬಂಧ ಸಂಕಲನ, ಬೆಳಕು ಕಾಣುತ್ತಿದೆ. ವೈಚಾರಿಕ ಹಾಗೂ ಸಂಶೋಧನಾತ್ಮಕವಾಗಿದ್ದರೂ ಜನಜೀವನಕ್ಕೆ ನಿಕಟವಾದ, ಜೊತೆಗೆ ಸುಲಭವಾದ ಶೈಲಿಯಲ್ಲಿ ಬರೆಯಲು ಯತ್ನಿಸಿದ, ಈ ಬರಹಗಳು, ಕರ್ನಾಟಕ ಸಂಸ್ಕೃತಿಯನ್ನು ಅರಿಯಲು ಬಯಸುವವರ ಕೈ ಸೇರುವಂತೆ ಆಗಿದೆ. ಅವರಿಗೆ ನನ್ನ ವಿಶೇಷ ಕೃತಜ್ಞತೆಗಳು. ಇದರಲ್ಲಿಯ ಎಂಟು ಪ್ರಬಂಧಗಳು, ಕರ್ನಾಟಕ ಇತಿಹಾಸ ಅಕಾಡೆಮಿಯ 'ಇತಿಹಾಸದರ್ಶನ'ದ ಆಯಾ ವರ್ಷದ ಸಂಪುಟಗಳಲ್ಲಿ ಪ್ರಕಟವಾಗಿವೆ. ಅಕಾಡೆಮಿಗೆ ನನ್ನ ಕೃತಜ್ಞತೆಗಳು.

ಇಲ್ಲಿಯ ಪ್ರಂಬಂಧಗಳ ಜೊತೆಜೊತೆಗೆ ಹಾಸುಹೊಕ್ಕಾದ ರೇಖಾಚಿತ್ರಗಳ ಬಗ್ಗೆ ಒಂದು ಮಾತು. ಇವೆಲ್ಲ ಕನ್ನಡನಾಡಿನ ಉದ್ದಕ್ಕೂ ಅಲ್ಲದೇ ಹಿಂದೊಮ್ಮೆ ಕರ್ನಾಟಕದ ಭಾಗವಾಗಿಯೂ ಮೆರೆದಿದ್ದ ಊರುಗಳ ಬಹಳಷ್ಟು ದೇವಾಲಯಗಳಲ್ಲಿ. ಮಠಗಳಲ್ಲಿ ಕಂಡರಿಸಲ್ಪಟ್ಟ ಶಿಲ್ಪಗಳ, ಅಥವಾ ಚಿತ್ರಿಸಲ್ಪಟ್ಟ ಆಕೃತಿಗಳ ಕ್ಲಿಕಿಂಗ್‌ಗಳ ಪ್ರತಿ-ಕೃತಿಗಳಾಗಿವೆ. ನನ್ನ ಪತಿ ದಿ. ಡಾ। ಕೃಷ್ಣಾನಂದ ಕಾಮತರು ಛಾಯಾಚಿತ್ರದಲ್ಲಿ ಮೀರಿದ ಆಸಕ್ತಿಯುಳ್ಳವರು. ಮೂರು ದಶಕಗಳ ದೀರ್ಘಕಾಲದಲ್ಲಿ ಕರ್ನಾಟಕದಲ್ಲಿ ಅವರು ಸಂಚರಿಸಿ ಮರೆಯದೆ ಕ್ಲಿಕ್ಕಿಸಿ ಕಾದಿರಿಸಿದ ಪ್ರಯತ್ನದ ಪ್ರತಿಫಲವಾಗಿವೆ.ಸಾವಿರ ಶಬ್ದಗಳಲ್ಲಿ ಹೇಳುವುದನ್ನು ಒಂದೇ ಚಿತ್ರ ಸಾರುತ್ತದೆ! ಎಂಬ ಮಾತನ್ನು ಅವು ದೃಢೀಕರಿಸುತ್ತವೆ. ಪ್ರಬಂಧಗಳಿಗೆಲ್ಲ ಜೀವತುಂಬಿ ಪ್ರಮಾಣೀಕರಿಸಿದ ಅವರ ಕೊಡುಗೆಯನ್ನು ಸ್ಮರಿಸಿಕೊಳ್ಳುತ್ತೇನೆ. ಇದೊಂದು ಅಪೂರ್ವದ ಕನ್ನಡ ನಾಡಿನ ಚರಿತ್ರೆಯ ಚಿತ್ರ - ದಾಖಲೆಯಾಗಬೇಕು ಎನ್ನುವದು ಅವರ ಕನಸಾಗಿತ್ತು.

ಇತಿಹಾಸದ ಸಂಶೋಧನೆಯಲ್ಲಿ ನನಗೆ ಆಸಕ್ತಿ ಹುಟ್ಟಿಸಿ, ಬೆಳೆಸಿದವರು, ನಿರಂತರವಾಗಿ ಮಾರ್ಗದರ್ಶನವಿತ್ತು ಪ್ರೋತ್ಸಾಹಿಸಿದವರು ವಿದ್ಯಾಗುರುಗಳಾದ ಪ್ರೊ। ಜಿ. ಎಸ್. ದೀಕ್ಷಿತರು. ಈ ಪುಸ್ತಕಕ್ಕೂ ಮುನ್ನುಡಿ ರೂಪದ ಆಶೀರ್ವಚನ ನೀಡಿ ಉಪಕರಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ೨೦೦೪ ರಲ್ಲಿ ಕಣ್ಮರೆಯಾದ ಗುರುಗಳಿಂದ ಮುನ್ನುಡಿ ರೂಪದಲ್ಲಿ ಆಶೀರ್ವಾದ ಪಡೆದ ಭಾಗ್ಯ ನನ್ನದಾಗಿದೆ.

ತಾವು ನಂಬಿರುವ ಆದರ್ಶಗಳಿಗೆ ಅನುಗುಣವಾಗಿ ಬದುಕಿದ, ಪರಿಸರದೊಂದಿಗೆ ಒಂದಾಗಿ ಉಸಿರಾಡಿದ, ತಾವೂ ಬಾಳಿ ಸಹಜೀವಿಗಳನ್ನೂ ಬಾಳಿಸಿ, ಬದುಕೆಲ್ಲ ವರ್ಣಮಯವಾಗಿಸಿದ ನಮ್ಮ ಹಿರಿಯರ ಜೀವನೋಲ್ಲಾಸದ ಕೆಲ ಹೊಳಹುಗಳನ್ನಾದರೂ ಓದುಗರು ಗುರುತಿಸುವಂತಾದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಕರ್ನಾಟಕ ಇತಿಹಾಸ ಸಂಶೋಧನೆಯ ಕ್ಷೇತ್ರದಲ್ಲಿ ನನ್ನ ಅಲ್ಪಕಾಣಿಕೆಯನ್ನು ಗುರುತಿಸಿ ಈ ಪ್ರಬಂಧ ಸಂಕಲನ ಹೊರತರಲು ಪ್ರೋತ್ಸಾಹಿಸಿದ ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧನ ಮಂಡಳಕ್ಕೆ ನನ್ನ ವಿಶೇಷ ಕೃತಜ್ಞತೆಗಳು.

**ಶಶಿಕಿರಣ್** **ಜ್ಯೋತ್ಸ್ನಾ ಕಾಮತ್**
೧೮ನೇ ಕ್ರಾಸ್
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

# ಮುನ್ನುಡಿ

ಡಾ। ಶ್ರೀಮತಿ ಜ್ಯೋತ್ಸ್ನಾ ಕಾಮತರು ತಮ್ಮ 'ಕರುನಾಡಿನ ಜನಜೀವನ' ಎನ್ನುವ ಪ್ರಾಚೀನ ಕರ್ನಾಟಕದ ಜನಜೀವನ ಕುರಿತಾದ ಪುಸ್ತಕಕ್ಕೆ ಮುನ್ನುಡಿಯನ್ನು ನಾನು ಬರೆಯಬೇಕು, ಎಂದು ಕೇಳಿಕೊಂಡಾಗ, ಆನಂದದಿಂದ ಒಪ್ಪಿಕೊಂಡೆ. ಅದು ದಿವಂಗತ ಶ್ರೀ ಬೆಟಗೇರಿ ಕೃಷ್ಣಶರ್ಮರ 'ಕರ್ನಾಟಕ ಜನಜೀವನ'ವೆನ್ನುವ ಪ್ರಖ್ಯಾತ ಪುಸ್ತಕದ ಶೀರ್ಷಿಕೆಯನ್ನು ನೆನಪಿಗೆ ತಂದಿತು. ಆದರೆ ಎರಡೂ ಗ್ರಂಥಗಳಲ್ಲಿ ವಿಷಯ ನಿರೂಪಣೆ ಬೇರೆ ಬೇರೆ ಹಾದಿಯನ್ನು ತುಳಿದಿವೆ. ಬೆಟಗೇರಿಯವರು, ವಿಜಯನಗರಕಾಲದ ಜನಜೀವನವನ್ನು ಕನಕದಾಸರ 'ಮೋಹನ ತರಂಗಿಣಿ'ಯಿಂದ ಮತ್ತು ಒಡೆಯರ ಕಾಲದ ಜನಜೀವನವನ್ನು ಗೋವಿಂದ ವೈದ್ಯನ 'ಕಂಠೀರವನರಸರಾಜ ವಿಜಯ'ದ ಸಹಾಯದಿಂದ ಚಿತ್ರಿಸಿದ್ದಾರೆ. ಜ್ಯೋತ್ಸ್ನಾಕಾಮತರು ಜೀವನದ ಕೆಲವು ಅವಶ್ಯಕತೆಗಳ ಮತ್ತು ಸೌಕರ್ಯಗಳ ಸಾದ್ಯಂತ ಇತಿಹಾಸದಲ್ಲಿಯ ಮೈಲಿಗಲ್ಲುಗಳನ್ನು ಗುರುತಿಸಿದ್ದಾರೆ. ಅವರ ೧೮ ಲೇಖನಗಳನ್ನು ಹೀಗೆ ವಿಂಗಡಿಸಬಹುದು.

೧) ಜನರ ಒಟ್ಟು ಜನಜೀವನ : ೧. ತ್ರಿವಿಕ್ರಮಭಟ್ಟ ಮತ್ತು ೨. ಆದಿಪಂಪರ ಕಾವ್ಯಗಳಿಂದ; ೩. ಕಾಷ್ಠಶಿಲ್ಪಗಳಿಂದ ಮತ್ತು ೪. ಹಂಪೆಯ ಉಬ್ಬುಚಿತ್ರಗಳಿಂದ ೫. ಶಾಸ್ತ್ರಗ್ರಂಥದಿಂದ.

೨) ಜೀವನದ ಅವಶ್ಯಕತೆಗಳು : ೬. ಆಹಾರ ೭. ಸ್ನಾನ ೮. ಉಡಿಗೆ ತೊಡಿಗೆ ೯. ಸೀರೆ ಮತ್ತು ೧೦. ಕನ್ನಡಿಗಳು.

೩) ಜೀವನದ ಸೌಕರ್ಯಗಳು : ೧೧. ಮಂಚ ೧೨. ಕುಲಾಯಿ ೧೩. ಕೇಶಾಲಂಕಾರ

೪) ಮನರಂಜನೆ : ೧೪. ಸುರಾಪಾನ ೧೫. ಆಟಕೂಟಗಳು ಮತ್ತ ೧೬. ತೇರು.

೫) ಸಂಕೀರ್ಣ : ೧೭. ಐತಿಹಾಸಿಕ ವ್ಯಕ್ತಿಗಳು ಮತ್ತು ೧೮. ಪರಿಸರ ಪ್ರೇಮ, ಸಮಾಜವ್ಯವಸ್ಥೆ.

ಈ ೧೮ ಲೇಖಗಳ ಸ್ವಾರಸ್ಯವನ್ನು, ಅವುಗಳನ್ನು ಓದಿಯೇ ಸವಿಯಬೇಕು. ಇಲ್ಲಿ ಲೇಖಕಿಯ ಐತಿಹಾಸಿಕ ಪ್ರಜ್ಞೆ ಮತ್ತು ಸೂಕ್ಷ್ಮ ನೋಟಗಳ ಕೆಲವು ಉದಾಹರಣೆಗಳನ್ನು ಕೊಡಲು ಮಾತ್ರ ಸಾಧ್ಯ. ಆದಿ ಪಂಪನ ತುರುಕಾಳಗದ ವರ್ಣನೆಯನ್ನು ಯಥಾವತ್. ಕಲ್ಲಿನಲ್ಲಿ ಕಂಡರಿಸಿದಂತಿರುವ ವೀರಗಲ್ಲೊಂದು ಬನವಾಸಿಯ ಮ್ಯುಝಿಯಂದಲ್ಲಿದೆ. ತನ್ನ ಪ್ರೀತಿಯ ಬನವಾಸಿಯಲ್ಲಿ ಕಂಡಂಥ ತುರುಕಾಳಗದ ಹಸಿರು ನೆನಪನ್ನು ತನ್ನ ಕಾವ್ಯದಲ್ಲಿ ಸ್ಥಾಯಿಯಾಗಿಡಲು ಕವಿಯು ಹವಣಿಸಿದನೇ? ಎಂದು ಲೇಖಕಿ ಕೇಳುತ್ತಾರೆ.

ಊಟ-ಉಣಿಸು ಅಥವಾ 'ಆಹಾರ ಸಂಸ್ಕೃತಿ'ಯನ್ನು ಕುರಿತ ಲೇಖನ ಈ ಸಂಗ್ರಹದಲ್ಲಿ ಅತ್ಯುತ್ತಮ ಲೇಖನ. ನಮ್ಮ ತಿನಸುಗಳ ಪ್ರಾಚೀನತೆ ಆಶ್ಚರ್ಯಕರ. ಎಲ್ಲೆಡೆ ಈಗ ಜನಪ್ರಿಯವಾಗಿರುವ ಇಡ್ಲಿ, 'ವಡ್ಡಾರಾಧನೆ' (೧೦ ನೇ ಶತಮಾನ)ಯಷ್ಟು ಹಳೆಯದು. ನಮ್ಮ ತಿನಸುಗಳು ಎಷ್ಟು ಹಳೆಯವೋ ಅಷ್ಟು ವೈವಿಧ್ಯಮಯ. ಮಂಗರಸ (ಕ್ರಿ. ಶ. ಸುಮಾರು ೧೫೦೮) ತನ್ನ ಸೂಪಶಾಸ್ತ್ರದಲ್ಲಿ ೧೫ ಪ್ರಕಾರದ ಭಾತುಗಳನ್ನು ಮತ್ತು ಬದನೆಕಾಯಿಯ

೩೦ ಪ್ರಕಾರದ ವ್ಯಂಜನಗಳನ್ನು ವರ್ಣಿಸಿದ್ದಾನೆ. ಇವರು ಲೇಖನಗಳಲ್ಲಿ ಪದೇ ಪದೇ ಹೇಳುತ್ತಿರುವದು, ನಮ್ಮ ಸಂಸ್ಕೃತಿಯ ಅನೇಕ ಒಳ್ಳೆಯ ಆದರ್ಶಗಳನ್ನು ಮರೆತಿದ್ದೇವೆ ಎಂದು. ನಾವು ಮರೆತಿರುವ, ಮರೆಯಬಾರದ ಕೆಲವು ತಿನಸುಗಳನ್ನು ಮಾಡುವ ವಿಧಾನವನ್ನು ವಿವರಿಸಿದ್ದಾರೆ.

ಹತ್ತರಿಂದ ಹನ್ನೆರಡನೆಯ ಶತಮಾನಗಳಲ್ಲಿ, ಅಂದರೆ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಕರ್ನಾಟಕದ ವೇಷ-ಭೂಷಣಗಳು ಭಾರತಕ್ಕೆ ಮಾದರಿಯಾಗಿದ್ದವು. ಇದಕ್ಕೆ ಒಳ್ಳೆಯ ಉದಾಹರಣೆ, ಕಲ್ಹಣನ ರಾಜತರಂಗಿಣಿಯಲ್ಲಿದೆ. ಕಾಶ್ಮೀರದ ದೊರೆ ಹರ್ಷನು ಕರ್ನಾಟಕದ ವೇಷ-ಭೂಷಣಗಳಿಗೆ ಮಾರು ಹೋಗಿ, ಅವನ್ನು ತನ್ನ ದೇಶದಲ್ಲಿ ತರುವದಕ್ಕೆ, ಪ್ರಚಾರ ಮಾಡಿದನಂತೆ. ಭಾರತದಲ್ಲಿ ಮಾತ್ರವಲ್ಲ ವಿದೇಶಿಯರು ನಮ್ಮ ಕರಕುಶಲತೆಯನ್ನು ಮನಸಾರೆ ಹೊಗಳಿದ್ದಾರೆ. 'ಸಾಹಿತ್ಯ, ಶಿಲ್ಪ, ಚಿತ್ರಗಳಲ್ಲಿ ಮಂಚ' ಎನ್ನುವ ಲೇಖದಲ್ಲಿ ಲೇಖಕಿಯು, 'ಹದಗೊಳಿಸಿದ ಮೇಲ್ಹಾಸುಗಳ ಮೇಲೆ ಚಿನ್ನ, ಬೆಳ್ಳಿಗಳ ಕಸೂತಿಯಿದ್ದು. ಇದರಲ್ಲಿ ಭಾರತೀಯರ ನೈಪುಣ್ಯವನ್ನು ಇನ್ನಾವ ದೇಶವೂ ಪಡೆದಿಲ್ಲ' ಎಂಬ ಮಾರ್ಕೊಪೋಲೋನ ಹೇಳಿಕೆಯನ್ನು ನಮ್ಮ ಲಕ್ಷ್ಯಕ್ಕೆ ತಂದಿದ್ದಾರೆ.

'ಹಂಪೆಯ (ಮಹಾನವಮಿಯ ದಿಬ್ಬದ) ಚಿತ್ರಗಳಲ್ಲಿ 'ಜನಸಾಮಾನ್ಯ' ಎನ್ನುವ ಲೇಖನ, ಲೇಖಕಿಯ ಸೂಕ್ಷ್ಮನೋಟಕ್ಕೆ ಅತ್ಯುತ್ತಮ ಉದಾಹರಣೆ. ಅವುಗಳಲ್ಲಿ ಎದ್ದು ಕಾಣುವವು, ಆನೆ-ಕುದುರೆಗಳಾಗಿದ್ದರಿಂದ ಅವುಗಳ ಸವಾರರು ರಾಜರು, ಸೇನಾಪತಿಗಳು, ಅಂದಕೊಂಡು ಸುಮ್ಮನಿರುತ್ತೇವೆ. ಇವರ ಸೂಕ್ಷ್ಮನೋಟದಿಂದ, ಕುದುರೆಯ ತರಬೇತಿದಾರರು, ಗೃಹಕೃತ್ಯದಲ್ಲಿ ತೊಡಗಿರುವ ಹೆಂಗಳೆಯರು, ಒನಕೆಯಿಂದ ಬತ್ತ ಕುಟ್ಟಿ ಅಕ್ಕಿ ಮಾಡುವದರಲ್ಲಿ ಮೈ ಮರೆತಿರುವವರು. . . . ಕೋಲಾಟವಾಡುವ ಹೆಂಗಳೆಯರು, ಜನ ಸಾಮಾನ್ಯರ ಪ್ರತಿನಿಧಿಗಳೆಂದು ಅವರ ಮಿತವಾದ ಆಭರಣ ಅಲಂಕಾರಗಳಿಂದ ಮಾಡಿರುವ ಇವರ ಊಹೆ ಸಮಂಜಸವಾಗಿದೆ.

ಇವರ ಅಷ್ಟೇ ಸೂಕ್ಷ್ಮ ನಿರೀಕ್ಷಣೆಗೆ ಇನ್ನೊಂದು ನಿದರ್ಶನ, 'ವಾಸ್ತು, ಶಿಲ್ಪ, ಭಿತ್ತಿ-ಚಿತ್ರಗಳಲ್ಲಿ ತೇರು,' ಎನ್ನುವ ಲೇಖನ. ಇದರಲ್ಲಿ ಶ್ರವಣ ಬೆಳ್ಗೊಳದ ಮಠದಲ್ಲಿಯ ಭಿತ್ತಿ-ಚಿತ್ರಗಳಲ್ಲಿಯ ಸವಿಸ್ತರ ಮಾಹಿತಿ ನಮ್ಮ ಮುಂದೆ ಕಣ್ಣಿಗೆ ಕಟ್ಟಿದಂತೆ ವರ್ಣಿಸಿದ್ದಾರೆ. ನೂಕು-ನುಗ್ಗಲಲ್ಲಿ, ಕಳ್ಳಕಾಕರು, ತಮ್ಮ ಕೈಚಳಕವನ್ನು ತೋರಿಸಿ ಗುಪ್ತಚಾರರ ಕೈಗೆ ಸಿಕ್ಕು ಏಟು ತಿನ್ನುತ್ತಿರುವ ದೃಶ್ಯವನ್ನು ಲೇಖಕಿ ಪತ್ತೆಮಾಡಿರುವದು, ಗುಪ್ತಚಾರರ ಪತ್ತೆದಾರಿಗೆ ಸಮನಾದ ಪತ್ತೆದಾರಿಯಾಗಿದೆ.

ಇವರ ಲೇಖನಗಳಿಗೆ 'ಇವರು ಹಳೆಯದೆಲ್ಲವೂ ಚೆನ್ನಾಗಿತ್ತು ಹಿಂದೆ ಕೆಟ್ಟದು ಯಾವುದೂ ಇರಲಿಲ್ಲವೆಂದು ತಿಳಿದುಕೊಂಡ ಹಾಗೆ ಇದೆ!" ಎಂಬ ಟೀಕೆ ಬರಬಹುದು. ಇದಕ್ಕೆ ಉತ್ತರ ಇವರ ವಿಷಯ ಸಂಗ್ರಹವೇ ಹಾಗಿದೆ. ಹಳೆಯದರಲ್ಲಿ ಒಳ್ಳೆಯ ಪದ್ಧತಿಗಳನ್ನು ಆರಿಸಿ ಇವು ನಮ್ಮಲ್ಲಿ ಈಗಿಲ್ಲ. ಅವು ಇದ್ದಿದ್ದರೆ ಚೆನ್ನಾಗಿತ್ತು ! ಎಂದು ಅನೇಕ ಕಡೆ ಹೇಳಿದ್ದಾರೆ. ಕೆಲವು ಒಳ್ಳೆಯ ಪದ್ಧತಿಗಳನ್ನು ನಾವು ಮರೆತು ಬಿಟ್ಟಿದ್ದೇವೆಂದು

ದುಃಖಪಡುತ್ತಾರೆ. ಇವರ ಗ್ರಂಥಕ್ಕೆ ಪರ್ಯಾಯ ಶೀರ್ಷಿಕೆ ಸೂಚಿಸಬಹುದಾದರೆ ಅದು "ಕನ್ನಡಿಗರು ಮರೆತು ಹೋದ ತಮ್ಮ ಸಂಸ್ಕೃತಿಯ ಒಳ್ಳೆಯ ಪದ್ಧತಿಗಳು" ಆದ್ದರಿಂದ ಅವರು ನಮ್ಮಲ್ಲಿ ಹಿಂದೆ ಇದ್ದ ಕೆಟ್ಟಪದ್ಧತಿಗಳನ್ನು ಹೇಳುವದಿಲ್ಲವೆನ್ನುವ ಟೀಕೆ ಅಪ್ರಸ್ತುತ.

ಇದೇ ಲೇಖಕಿ 'ಸಂಸಾರದಲ್ಲಿ ಸ್ವಾರಸ್ಯ' ಎನ್ನುವ ಹಾಸ್ಯಲೇಖನಸಂಗ್ರಹವನ್ನು ಪ್ರಕಟಿಸಿದ್ದಾರೆ. ಅದೇ ತರಹ ಈ ಸಂಗ್ರಹಕ್ಕೆ 'ಸಂಶೋಧನೆಯಲ್ಲಿ ಸ್ವಾರಸ್ಯ' ವೆನ್ನುವ ಶೀರ್ಷಿಕೆ ಒಪ್ಪುತ್ತದೆ. ಬರಹಗಳು ಎಲ್ಲರಿಗೂ ತಿಳಿಯುವ ವಿಷಯಗಳ ಕುರಿತು, ಎಲ್ಲರೂ ತಿಳಿದುಕೊಳ್ಳ ಬಹುದಾದ ಸರಳ ಭಾಷೆಯಲ್ಲಿ ಮನಮುಟ್ಟುವ ಹಾಗೆ ಮೂಡಿ ಬಂದಿವೆ.

ಸ್ವಾರಸ್ಯದ ಜೊತೆಗೆ ಈ ಲೇಖನಗಳಲ್ಲಿ ಮಿತದ ಹಿತದ ಬೋಧನೆಯೂ ಇದೆ. ನಮ್ಮ ಹಿರಿಯರು ಪಾಲಿಸಿಕೊಂಡು ಬಂದ ಪಾನಪದ್ಧತಿಯನ್ನು ರೂಢಿಸಿಕೊಂಡು ಬಂದರೆ, ಮಿತ ಆಹಾರ, ಯೋಗ್ಯ ವ್ಯಾಯಾಮಗಳಂತೆ, ಮಿತಪಾನವು ಸರ್ವರಿಗೂ ಹಿತಕಾರಿಯಾದೀತು! ಎನ್ನುತ್ತಾರೆ.

ಹೊಸ ಸಂಶೋಧಕರಿಗೆ ಇವರು ಮಾರ್ಗದರ್ಶಿಯಾಗಿರುವ ಒಂದೆರಡು ಉದಾಹರಣೆಗಳೊಂದಿಗೆ ಈ ಮುನ್ನುಡಿಯನ್ನು ಮುಗಿಸುತ್ತೇನೆ.

೧. ಕೊರಡಿನ ಚಿತ್ರಗಳು ಇತಿಹಾಸದ ಅಧ್ಯಯನಕ್ಕೆ ಹೊಸ ಆಯಾಮ ನೀಡಬಲ್ಲವು. ಇವು ಪರ್ತಕಾಳಿಮಠ, ಶಿರಾಲಿಯ ಚಿತ್ರಾ ಪುರಮಠ ಶಿವಪ್ಪನಾಯಕನ ವಸ್ತು ಸಂಗ್ರಹಾಲಯ, ಶಿವಮೊಗ್ಗ ಮತ್ತು ಗೋವಾದ ರಾಮನಾಥದೇವಾಲಯಗಳಲ್ಲಿವೆ.

೨. ಕರ್ನಾಟಕ, ಆಂಧ್ರ ಮತ್ತು ತಮಿಳನಾಡುಗಳಲ್ಲಿ ಉಬ್ಬುಚಿತ್ರಗಳಿವೆ. ಇವುಗಳಲ್ಲಿ ರೂಪಗೊಂಡ ವಿಗ್ರಹಗಳ ಕೇಶಾಲಂಕಾರ, ಬಟ್ಟೆಬರೆ, ಒಡವೆಗಳನ್ನು ಅಭ್ಯಸಿಸಿ ಗುರುತಿಸಿದರೆ, ಅಂದಿನವರ ಸಾಮಾಜಿಕ ಜೀವದ ಮೇಲೆ ಹೊಸ ಬೆಳಕನ್ನು ಬೀರಬಹುದಾಗಿದೆ.

**ಡಾ। ಜಿ. ಎಸ್. ದೀಕ್ಷಿತ**
ನಿವೃತ್ತ ಇತಿಹಾಸ ಪ್ರಾಧ್ಯಾಪಕರು
ಹಾಗೂ
ಮಾಜಿ ಅಧ್ಯಕ್ಷರು, ಕರ್ನಾಟಕ
ಇತಿಹಾಸ ಅಕಾಡೆಮಿ
ಬೆಂಗಳೂರು.

ಧಾರವಾಡ
29-9-2000

# ಅನುಕ್ರಮಣಿಕೆ

# ಕರುನಾಡಿನ ಜನಜೀವನ

## ಚಿತ್ರ -ವಿವರ

| | | |
|---|---|---|
| | 4 | ನೀರಲ್ಲಿ ಕಸರತ್ತು |
| | 5 | ಜಟ್ಟಿಕಾಳಗದ ಪ್ರದರ್ಶನ |
| | 6 | ಕೋಲಾಟ |
| | 7 | ಸ್ತ್ರೀವಾದ್ಯ-ನೃತ್ಯ ಕೂಟ |
| 10 | 1 | ಶಿಲ್ಪದಲ್ಲಿ ತೇರು |
| | 2 | ಭಿತ್ತಿ ಚಿತ್ರದಲ್ಲಿ ತೇರು |
| | 3 | ಉಬ್ಬು-ಚಿತ್ರದಲ್ಲಿ ತೇರು |
| 11 | 1 | ನಿಂತುಕೊಂಡ ಸ್ವಾಭಾವಿಕ ಹೆರಿಗೆ |
| | 2 | ತಾಯ ಕೈಯಲ್ಲಿ ಜೋಕಾಲಿ |
| | 3 | ತಾಯ ಸೊಂಟಕ್ಕೇರಿದ ಮಗು |
| | 4 | ಅಲಂಕಾರದಲ್ಲಿ ಮೈ ಮರೆತಾಗ |
| | 5 | ಕುಂಕುಮದ ಬೊಟ್ಟು ಇಟ್ಟುಕೊಳ್ಳುವಾಗ |
| | 6 | ಪಾತ್ರೆ ತೊಳೆಯುವದು |
| | 7 | ಒರಳಿನ ಗೈಮೆ |
| | 8 | ಗಿಳಿಯೊಂದಿಗೆ ಗೃಹಿಣಿ |
| | 9 | ಹಾವಿನೊಂದಿಗೆ ಸರಸ |
| | 10 | ಪುಂಗಿಯೊಡನೆ ಹಾವಾಡಿಗ |
| | 11 | ಮೃದಂಗದೊಂದಿಗೆ |
| | 12 | ಊದುವ ವಾದ್ಯದೊಂದಿಗೆ |
| | 13 | ಮೈ ಮರೆತ ತರುಣಿ |
| | 14 | ವಿವೇಕ ಬೋಧಿಸುತ್ತಿರುವದು |
| 12 | 1 | ವೃಕ್ಷಪ್ರೇಮ |
| | 2 | ವೃಕ್ಷನೋಂಪಿ |
| | 3 | ಫಲ ಹೊತ್ತ ವೃಕ್ಷಕ್ಕೆ ಕೊಡಲಿ ಏಟು |
| | 4 | ಮಾನವನ ಅತೀಯಾಸೆ |
| 13 | 1 | ಲೇಪಾಕ್ಷಿ ಸೋದರರು |
| | 2 | ಹೈದರಲಿ, ಟೀಪು |
| | 3 | ನಲ್ಲಪ್ಪ |
| | 4 | ಮುಮ್ಮಡಿ |

| | | |
|---|---|---|
| 14 | 1 | ಸಾದಾಮಂಚ |
| | 2 | ಗುಜ್ಜರಿಗಾಲಿನ ಮಂಚ |
| | 3 | ಎತ್ತರಗಾಲಿನ ಮಂಚ |
| | 4 | ಸುಖಶಯನಕ್ಕಾಗಿ ಮಂಚ |
| | 5 | ಅಲಂಕೃತ ಮೇಲ್ವಾಸು |
| | 6 | ದಪ್ಪ, ಮೃದು ಹಾಸಿಗೆ |
| | 7 | ಪರಿಕರದೊಂದಿಗೆ ಉನ್ನತ ಮಂಚ |
| | 8 | ಜಲತಲ್ಪ |
| | 9 | ಸಾಲಂಕೃತ ಸೋಫಾಮಂಚ |
| | 10 | ಭೋಗ ಮಂಚ |
| | 11 | ಮಂಚ ಮತ್ತು ಲೋಡು ದಿಂಬುಗಳು |
| | 12 | ಸುಖ ನಿದ್ರೆಯ ಮಂಚ |
| | 13 | ಅರಸನ ಸುಖ-ತಲ್ಪ |
| | 14 | ತೂಗು-ಮಂಚ |
| 15 | 1 | ಒಂಟೆಯ ಪಾಲಕ |
| | 2 | ಕುದುರೆಯ ನಿಯಂತ್ರಕ |
| | 3 | ವಾದ್ಯಗಾರ |
| 16 | 1 | ಸೆರೆ ಇಳಿಸುವಾತ |
| | 2 | ಸುರೆಯ ಸಾಗಾಟ |
| | 3 | ಬುಡ್ಡಿಗೆ ಸೆರೆ ಸುರಿಯುವದು |
| | 4 | ಸುರಾಮತ್ತನ ಬೋಧನೆ |
| | 5 | ಪಾನಗೋಷ್ಠಿ |
| | 6 | ಪಾನರತ ದಂಪತಿ |
| | 7 | ಪಾನಮತ್ತೆ |
| 17 | 1 | ಭಲ್ಲೆಯ ವೀರ |
| | 2 | ಭಲ್ಲೆ-ಕಾಳಗ |
| | 3 | ಭಿಲ್ಲ-ಸುಂದರಿ |

# ೧. ಪಂಪ ಕಂಡ ಬಾಳಿನ ಇಂಪು

ಸಮಕಾಲೀನ ಸಮಾಜವನ್ನು ತಿಳಿದುಕೊಳ್ಳಲು ಪ್ರಾಚೀನ ಕಾವ್ಯಗಳು ಎಷ್ಟರ ಮಟ್ಟಿಗೆ ಸಹಾಯ ಮಾಡ ಬಲ್ಲವು? ಎಂಬ ಅಂಶ ಆಯಾ ಕವಿ, ತನ್ನ ಪರಿಸರಕ್ಕೆ ಸ್ಪಂದಿಸಿದ ರೀತಿಯಲ್ಲಿ ವ್ಯಕ್ತವಾಗಲು ಸಾಧ್ಯವಿದೆ. ಪೌರಾಣಿಕ ಕಥಾವಸ್ತುವನ್ನು ಹೊಂದಿ, ಆಶ್ರಯವಿತ್ತ ಅರಸನ ಗುಣಗಾನಕ್ಕಾಗಿ ಕೆಲವನ್ನು ಬರೆದರೆ, ಧಾರ್ಮಿಕ ಚಿಂತನ, ಪಠಣ, ಶ್ರವಣಕ್ಕಾಗಿ ಕೆಲವು ಕಾವ್ಯಗಳನ್ನು ಬರೆಯಲಾಗಿದೆ. ಸಾಲದ್ದಕ್ಕೆ ಅಷ್ಟಾದಶವರ್ಣನೆಗಳು ಕಡ್ಡಾಯವಾಗಿದ್ದವು. ಕವಿಯಾದವನು, ಸೀಮಿತ ಚೌಕಟ್ಟಿನೊಳಗೆ ಕಾವ್ಯಪ್ರತಿಭೆಯನ್ನು ಮೆರೆಯಬೇಕಾಗಿತ್ತು. ಹೀಗಿದ್ದಾಗ ಹಿಂದಿನವರ ಜೀವನವನ್ನು ಇಂಥ ಕೃತಿಗಳಲ್ಲಿ ಗುರುತಿಸಲು ಸಾಧ್ಯವೇ? ಎಂಬ ಪ್ರಶ್ನೆ ಆಗೀಗ ಚರಿತ್ರಕಾರರನ್ನು ಕಾಡುವದುಂಟು. ಆದರೆ ಕೆಲವು ಕವಿಗಳಾದರೂ ತಮಗೆ ಪರಿಚಿತವಿದ್ದ ದೈನಂದಿನ ಜೀವನದ ಕೆಲವು ಇಣಕು ನೋಟಗಳನ್ನು, ವಾಸ್ತವಿಕವಾದ ವರ್ಣನೆಯನ್ನು, ಕೊಡಲು ಯತ್ನಿಸಿದ್ದಾರೆ. ಸಮಕಾಲೀನ ಶಿಲ್ಪಿಗಳು, ಶಾಸನಗಳು, ಸಂಸ್ಕೃತ ಕಾವ್ಯ ಹಾಗೂ ಶಾಸ್ತ್ರಗಳ ವಿವರಗಳೊಂದಿಗೆ ಈ ವರ್ಣನೆಯನ್ನು ಹೋಲಿಸಿದಾಗ ಅಧಿಕೃತವಾದ ಮಾಹಿತಿಯನ್ನು ಪಡೆಯಲು ಸಾಧ್ಯ! ಮಹಾಕವಿ ಪಂಪ, ಇತರ ಹಲವಾರು ವಿಧಗಳಲ್ಲಿ ಮೊದಲಿಗನಿದ್ದಂತೆ ಸಮಕಾಲೀನ ಸಮಾಜದ ಚಿತ್ರಗಳನ್ನು ಕೊಡುವದರಲ್ಲೂ ಪ್ರಮುಖನಾಗಿದ್ದಾನೆ. ಆತನ ಕೃತಿಗಳಾದ 'ಆದಿಪುರಾಣ' ಹಾಗೂ 'ವಿಕ್ರಮಾರ್ಜುನವಿಜಯ'ಗಳಲ್ಲಿ ಹತ್ತನೆಯ ಶತಮಾನದ ಜನಜೀವನದ ಕೆಲವು ನೋಟಗಳನ್ನು ಪಡೆಯಬಹುದಾಗಿದೆ. ಮುಖ್ಯವಾಗಿ ನಾಡಿನ ವನರಾಜಿ, ಬೆಳೆಗಳು, ಹೂಹಣ್ಣು, ಊಟ-ಉಣಿಸು, ಪಾನಪದ್ಧತಿ, ಅಲಂಕಾರ ಸಾಧನಗಳು ವೇಷ-ಭೂಷಣಗಳು, ಶಿಕ್ಷಣ ಹಾಗೂ ಮನರಂಜನೆಗಳು ಕುರಿತಾದ ಮಾಹಿತಿಗೆ ಈ ಪ್ರಬಂಧ ಸೀಮಿತವಾಗಿದೆ.

ಬನವಾಸಿನಾಡಿನ ಕುರಿತಾಗಿ ಪಂಪನಿಗಿದ್ದ ಮಮತೆ ಕನ್ನಡ ಕಾವ್ಯಾಭ್ಯಾಸಿಗಳಿಗೆಲ್ಲ ಚಿರಪರಿಚಿತ. ಅಂದಿನ ಬನವಾಸಿ ನಾಡು ಸಾಕಷ್ಟು ವಿಸ್ತಾರವಾಗಿದ್ದು, ಮನೋಹರವಾಗಿದ್ದ ವನರಾಜಿಯಿಂದ ಶೋಭಿಸುತ್ತಿದ್ದ ವಿಚಾರ ಹಲವಾರು ಶಾಸನಗಳಿಂದ ದೃಢಪಟ್ಟಿದೆ. ಸದಾ ನಳನಳಿಸುವ ತೆಂಗು, ಕಂಗುಗಳ ತೋಟಗಳು, ಮಾವು, ಬಾಳೆ, ಜಂಬುಫಲ, ಹಲಸು ಇತ್ಯಾದಿಗಳು ಈ ಸೀಮೆಯ ವೈಶಿಷ್ಟ್ಯಗಳಾಗಿದ್ದಂತೆ ಲವಂಗ, ಏಲಕ್ಕಿ ಜಾಜಿ, ಮಲ್ಲಿಗೆ, ಮುಖ್ಯವಾಗಿ ಸುರಿಗೆ (ಸುರಹೊನ್ನೆ) ಬಕುಳ ಹಾಗೂ ಕುಂದಪುಷ್ಪಗಳು, ಈ ಪ್ರದೇಶಕ್ಕೆ

ಮೀಸಲಾಗಿದ್ದವು, ಎಂಬುದನ್ನು ಸ್ಮರಿಸಿಕೊಳ್ಳಬಹುದು. ಕದಂಬ ಅರಸು ಮುಮ್ಮಡಿ ಜಯಕೇಶಿಯ ಶಾಸನವೊಂದರಲ್ಲಿ ಬರುವ ಅಡಿಕೆ ಹಾಗೂ ವೀಳ್ಯದ ಸಮೃದ್ಧಿ ಪಂಪನಿಗೂ ಪರಿಚಿತವಿತ್ತು.

ಸುಮಾರು ನೂರೈವತ್ತು ವರ್ಷಗಳ ಬಳಿಕದ ಬಿಲ್ಹಣನ 'ವಿಕ್ರಮಾಂಕ ದೇವ ಚರಿತ' ದಲ್ಲೂ ಅಪ್ರತಿಮ ನೈಸರ್ಗಿಕ ಸೌಂದರ್ಯದಿಂದಾಗಿ ಬನವಾಸಿ ಬೀಡು ಅರಸರ ವಿಹಾರಸ್ಥಾನವಾಗಿ ಮುಂದರಿದದ್ದು ಕಂಡು ಬರುತ್ತದೆ. ಆದಿಪುರಾಣದ ಭರತನ ಅಂತಃ ಪುರದವರಿಗೆ ವನವಿಹಾರದ ಆನಂದ ಒದಗಿಸಿದ ತಾಣವು ಚಾಲುಕ್ಯ ವಿಕ್ರಮಾದಿತ್ಯ ತ್ರಿಭುವನ ಮಲ್ಲನ (೧೦೭೬-೧೧೨೬) ರಾಣಿಯರ ಮನಸ್ಸನ್ನು ಸೂರೆಗೊಳ್ಳುತ್ತದೆ. ಹೀಗಾಗಿ ದಕ್ಷಿಣದ ದಂಡಯಾತ್ರೆಗೆ ಹೊರಟಿದ್ದ ಅರಸು, ರಾಣಿಯರ ಪ್ರೀತ್ಯರ್ಥವಾಗಿ ಬನವಾಸಿಯಲ್ಲಿ ಕೆಲವು ಕಾಲ ತಂಗಿದ ವಿಚಾರ ವಿಕ್ರಮಾಂಕ ಚರಿತ'ದಲ್ಲಿ ಬರುತ್ತದೆ.

ಇದೇ ವಿಕ್ರಮಾದಿತ್ಯನ ಮಗ ಭೂಲೋಕಮಲ್ಲನ 'ಮಾನಸೋಲ್ಲಾಸ' ಗ್ರಂಥದ ಪ್ರಕಾರ ಬನವಾಸಿ ನಾಡಿನ ಅಡಕೆ ಹಾಗೂ ನಾಗವಲ್ಲಿ ವೀಳ್ಯದೆಲೆಗಳು ಸುಪ್ರಸಿದ್ಧವಿದ್ದವು, ಹಾಗೂ ರಾಜಯೋಗ್ಯ ಅಗಿದ್ದವು, ಎಂದು ತಿಳಿದುಬರುತ್ತದೆ. ಪಂಪ ಎಲ್ಲಿ ನೆಲೆನಿಂತನೆಂಬ ವಿಚಾರ ಮುಖ್ಯವಲ್ಲ. ಆದರೆ ಜೀವನದ ಒಂದು ಹಂತದಲ್ಲಿ ಆತ ಬನವಾಸಿಯಲ್ಲಿ ಅತ್ಯಂತ ಸಂತೋಷದ ದಿನಗಳನ್ನು ಕಳೆದ ಮತ್ತು ಆ ನೆನಪುಗಳನ್ನು ಅಮರವಾಗಿಸಿದ. ಮರಿದುಂಬಿ ಅಥವಾ ಕೋಗಿಲೆಯಾಗಿ ಆದರೂ ಅಲ್ಲಿ ಹುಟ್ಟಬೇಕೆನ್ನುವ ಕವಿಕಾಂಕ್ಷೆ, ಎಷ್ಟು ತೀವ್ರವಾಗಿರಬೇಡ?

**ಆಹಾರ ಸಮೃದ್ಧಿ**

ಕರ್ನಾಟಕದ ಕೃಷಿಕರು ಎರಡೇ ತಿಂಗಳಲ್ಲಿ ಭತ್ತ, ಗೋಧಿ, ಜವೆ, ಜೋಳ, ನವಣೆ, ಬರಗು, ಸಾವೆ, ಮಸೂರ, ತೊಗರಿ, ಹೆಸರು, ಹುರುಳಿ, ಉದ್ದು ಮೊದಲಾದವನ್ನು ಬೆಳೆಯುವದರಲ್ಲಿ ಸಿದ್ಧ ಹಸ್ತರಾಗಿದ್ದರು. ಎಳ್ಳು, ಸಾಸಿವೆ, ಕುಸುಬೆಗಳಂಥ ಎಣ್ಣೆ, ಕಾಳು, ಏಲಕ್ಕಿ, ಲವಂಗ, ಜೀರಿಗೆ, ಕೊತ್ತಂಬರಿ, ಮೆಣಸು (ಮರೀಚ)ಗಳಂಥ ಸಂಬಾರ ಪದಾರ್ಥಗಳು, ಕಬ್ಬಿನಿಂದ ಬೆಲ್ಲ ಸಕ್ಕರೆಗಳು ಹೈನದ ಹತ್ತಾರು ಪ್ರಕಾರಗಳು ಬಳಕೆಯಲ್ಲಿದ್ದವು.

ಪಾಕಕಲೆಯನ್ನು ಅಂದಿನವರು ನವಿರಾಗಿ ಮೈಗೂಡಿಸಿಕೊಂಡಿದ್ದರು. ಬಾಯಲ್ಲಿಟ್ಟೊಡನೆ ಕರಗುವಂಥ ಘೃತಪೂರಗಳು(ತುಪ್ಪದ ಪೂರಿಗಳು), ಹಲ್ಲಿಗೆ ಹತ್ತಿದೊಡನೆ ನುಚ್ಚುನೂರಾಗುವ ಮಂಡಿಗೆಗಳು ನಾಲಿಗೆ ತುದಿಗೆ ಸೋಕಿದೊಡನೆ ಮೆತ್ತಗಾಗುವ ಮೋದಕಗಳನ್ನು ಅಂದಿನ ಜನ ಮಾಡಬಲ್ಲವರಾಗಿದ್ದರು. ಇಂದಿನ ವೆಜಿಟೇಬಲ್ ಬೋಂಡ, ಪಂಪನಿಗೆ ಗೊತ್ತಿದ್ದು ಅದನ್ನು 'ಶಾಕವಟಕ' ಎಂದು ಕರೆದಿರುವ. ಇಂದಿನ ತರಹವೇ 'ಲಸ್ಸಿ' ಅಥವಾ ತಾಜಾ ಮೊಸರು ಕಡೆದು ಮಸಾಲೆ ಸಕ್ಕರೆ ಸೇರಿಸಿದ 'ಶಿಖರಿಣೀ' ಆಗಲೂ ಜನಪ್ರಿಯವಿತ್ತು. ಘೃತಪೂರ ತುಂಬ ಜನಪ್ರಿಯವಾಗಿತ್ತು. ಅದರ ತಯಾರಿಕೆ ಶತಕಗಳಲ್ಲಿ ಮುಂದರಿದು ಬಂದು, ಚಾವುಂಡರಾಯನ ಲೋಕೋಪಕಾರಂ ಹಾಗೂ ಮಂಗರಸನ ಸೂಪಶಾಸ್ತ್ರದಲ್ಲಿ ವಿವರಿಸಲ್ಪಟ್ಟಿದೆ.

## ಪಾನಗೋಷ್ಠಿ

ಪಂಪಭಾರತದಲ್ಲಿ ಬರುವ ಮದ್ಯಪಾನದ ವರ್ಣನೆ ಕವಿಸಮಯದಂತೆ ಭಾಸವಾಗುವದಿಲ್ಲ. ಅಂದಿನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಪಾನ ಪ್ರಕಾರಗಳನ್ನು ಅವನ್ನು ಸೇವಿಸುವ ಬಗೆಯನ್ನು ಪಂಪ ಸಹಜವಾಗಿಯೇ ವರ್ಣಿಸಿದ್ದಾನೆ.

ಮದ್ಯವನ್ನು ಸೇವಿಸಲು ಅಂದ ಚೆಂದದ ಗಿಳಿ, ಕೋಗಿಲೆ, ಹಂಸ ಮುಂತಾದ ಪಕ್ಷಿಗಳ ಆಕೃತಿಯ ಬಟ್ಟಲುಗಳು ಇರುತ್ತಿದ್ದವು. ಮುತ್ತಿನ ಶಂಖದ ಚಿಪ್ಪುಗಳಿಂದ ಅವನ್ನು ತಯಾರಿಸುತ್ತಿದ್ದರು. ಮಧು, ಸೀಧು, ಮರೀಚ ತೊಡರ್ಪು, ಶರದ್, ಚಿಂತಾಮಣಿ, ಕಕ್ಕರ ಮುಂತಾದ ಬಗೆಬಗೆಯ ಸೆರೆಯ ಪ್ರಕಾರಗಳಿದ್ದವು. ಮದ್ಯಸೇವನೆ ಒಂದು ಧಾರ್ಮಿಕ ವಿಧಿಯಿಂದ ಪ್ರಾರಂಭವಾಗುತ್ತಿತ್ತು. ಮಧು ಮಂತ್ರದಿಂದ ಮಧು ದೇವತೆಯನ್ನು ಅರ್ಚಿಸಿ ನೆಲದಲ್ಲಿ ಚೆಲ್ಲಿ ಹಿರಿಯರಿಗೆ ಮೊದಲು ನೀಡಿ ಆ ಬಳಿಕ ಕಿರಿಯರು ಸೇವಿಸುತ್ತಿದ್ದರು. ಕಳಲೆ, ಮಾವಿನ ಮಿಡಿ, ಹಸಿ ಶುಂಠಿಯ ಚೂರುಗಳು, ಖಾರದ ಕಡಲೆ, ಹಿಟ್ಟಿನ ಮಿಶ್ರಣ ಹೊಂದಿದ 'ಚಕ್ಕಣ'ಗಳನ್ನು ಸುರೆಯ ಬೇರೆ ಬೇರೆ ಪ್ರಕಾರಗಳೊಂದಿಗೆ ನೆಂಚಿಕೊಳ್ಳಲು ಬಳಸುತ್ತಿದ್ದರು. ಸ್ತ್ರೀಯರೂ ಮದ್ಯಪಾನ ಮಾಡುತ್ತಿದ್ದರು. ಪಂಪನ ಪ್ರಕಾರ ಮಧು ಅಥವಾ ಮಾಧ್ವೀ ಸಿಹಿಯಾದ್ದಂತೆ ಕಟುವೂ ಇರುತ್ತಿತ್ತು. 'ಸೀಧು' ವೆಂಬುದು ಹುಳಿಯಾಗಿರದೇ ಹದವಾದ ರುಚಿಹೊಂದಿರುತ್ತಿತ್ತು. 'ಕರ'ವೆಂಬ ಮದ್ಯ, 'ಮರೀಚಿತೊಡರ್ಪುಳ್' (ಬಹುಶಃ ಕರಿ ಮೆಣಸಿನ ಕಾಳು ಸೇರಿಸಿದ್ದು) ಕರ್ನಾಟಕದ ವಿಶಿಷ್ಟ ಪ್ರಕಾರಗಳಿರಲು ಸಾಕು! ಉತ್ತಮ ಸಂಗೀತದ ಮಾದಕತೆಯನ್ನು ಒಂದೆಡೆ ಪಂಪನು ಕಳ್ಗೆ ಚಕ್ಕಣವಿದ್ದಂತೆ! ಎಂದು ಉದ್ಗರಿಸಿದ್ದಾನೆ. ಚಹಾ-ಚೂಡಾದ ಜೋಡಿ, ಉತ್ತರ ಕರ್ನಾಟಕದಲ್ಲಿದ್ದಂತೆ ಈ ಕಳ್ಳು-ಚಕ್ಕಣಗಳ ಜೊತೆ ಇದ್ದಿರಬೇಕು! ಕಕ್ಕರವೆಂಬುದು ಬಲುಬೇಗ ಮದವೇರುವ ಸುರೆ ಇದ್ದಿರಬೇಕು. ಹಿಟ್ಟು, ನೀರು, ಬೆಲ್ಲ ಹಾಗೂ ಧಾತಕೀ ಪುಷ್ಪಗಳ ರಸ ಕೂಡಿದ ಪಾನೀಯದ ಮದವಿಕಾರವನ್ನು ಪಾನಪರಿಣತರು ಅರಿತುಕೊಂಡಿದ್ದರು.

ಪಾನ ಮತ್ತರಾಗಿ ಮೈಮೇಲಿನ ಪರಿವೆ ಇಲ್ಲದೇ ತೊದಲು ಮಾತಿನ, ಬಟ್ಟೆ ಅಸ್ತವ್ಯಸ್ತವಾದ ಹೆಣ್ಣುಗಳನ್ನು ಪಂಪನು ಉಲ್ಲೇಖಿಸಿದ್ದಾನೆ. ಸಮಕಾಲೀನ ಶಿಲ್ಪಗಳಲ್ಲಿ ಮಧುಪಾನದ ಮತ್ತು ಪಾನಮತ್ತೆಯರ ದೃಶ್ಯಗಳು ಕಂಡರಿಸಲ್ಪಟ್ಟಿವೆಯಾದರಿಂದ ಸಮಾಜದ ಕೆಲವು ವರ್ಗಗಳಲ್ಲ ಮದ್ಯಪಾನದ ಹಾಗೂ ಸ್ತ್ರೀ - ಪುರುಷರ ಸಹಪಾನಗೋಷ್ಠಿಗಳ ಪದ್ಧತಿ ಇತ್ತು, ಎಂದು ಹೇಳಬಹುದು.

## ಸೌಂದರ್ಯ ಪ್ರಸಾಧನ ಹಾಗೂ ವೇಷ ಭೂಷಣಗಳು

ಹುಬ್ಬುಗಳನ್ನು ಕತ್ತರಿಸಿಯೋ ಬೋಳಿಸಿಯೋ ಬಗೆ ಬಗೆಯ ಆಕಾರಗಳನ್ನು ಕೊಡುವುದು ಇಂದಿನ ಮಹಿಳೆಯರ ಮೇಕಪ್‌ದ ಮುಖ್ಯಭಾಗವಾಗಿದೆ. ಆದರೆ ಪಂಪನ ಕಾಲಕ್ಕೂ ಅದು ಪ್ರಚಲಿತವಿದ್ದದ್ದು ಕುತೂಹಲಕಾರಿಯಲ್ಲವೇ? ಶ್ರೀಮತಿಯ ವಿವಾಹ ಕಾಲದ

ಅಲಂಕಾರದ ವರ್ಣನೆಯಲ್ಲಿ "ಸಮರಿದ ಪುರ್ವು". ಉಲ್ಲೇಖಿಸಲ್ಪಟ್ಟಿದೆ. ಕರ್ಪೂರದ ಪುಡಿಯನ್ನು ಮುಖಕ್ಕೂ, ಬೆವರುವ ಭಾಗಗಳಿಗೂ ಲೇಪಿಸಿಕೊಳ್ಳುತ್ತಿದ್ದರು. ಚಂದನದ ಲೇಪದಿಂದ ಕಪೋಲ, ಸ್ತನ-ಪ್ರದೇಶಗಳ ಮೇಲೆ ಸುಂದರವಾದ ನಕ್ಷೆ ಚಿತ್ರಗಳನ್ನು ಬರೆದುಕೊಳ್ಳುತ್ತಿದ್ದರು. ಊಟವಾದ ಬಳಿಕ ಕಸ್ತೂರಿ, ಶ್ರೀಗಂಧ, ಕೇಸರಿ, ಕರ್ಪೂರಗಳ ಸಮ್ಮಿಶ್ರಣದ ಕೈಘಟ್ಟಿಗೆ ಕೈಗಳನ್ನು ತಿಕ್ಕಿ ಪಕ್ವಾನ್ನಗಳ ವಾಸನೆ, ಜಿಡ್ಡುಗಳನ್ನು ಇಲ್ಲವಾಗಿಸುತ್ತಿದ್ದರು. ಅನೇಕ ಬಗೆಯ ಸುವಾಸನಾ ದ್ರವ್ಯಗಳನ್ನು ಅವರವರ ಇಷ್ಟದಂತೆ ಆಯಾ ಸಂದರ್ಭ ಅಥವಾ ವೇಷ ಭೂಷಣಗಳಿಗೆ ಅನುಸಾರವಾಗಿ ತೇಯ್ದುಕೊಡುವ ಘಟ್ಟಿವಳ್ತಿಯರು ಇರುತ್ತಿದ್ದರು. ವಿರಾಟನ ಅರಮನೆಯನ್ನು ಸೇರಿಕೊಂಡ ಸೈರಂಧ್ರಿ (ದ್ರೌಪದಿ) ಘಟ್ಟಿವಳ್ತಿಯ ಕೆಲಸ ಕೈಕೊಂಡಿದ್ದಳು.

ಹಣೆಗೆ ತಿಲಕವಿಟ್ಟುಕೊಳ್ಳುವ ಪದ್ಧತಿ ಸ್ತ್ರೀ-ಪುರುಷರಲ್ಲಿ ಕೂಡಿಯೇ ಪ್ರಚಲಿತವಿತ್ತು. ಕಸ್ತೂರಿಯ ತಿಲಕವು ಜನಪ್ರಿಯವಿತ್ತು. ಹೆಂಗಳೆಯರು ಸಿಂಧೂರವನ್ನು ಹಣೆಯಲ್ಲೂ ಬೈತಲೆಯಲ್ಲೂ ಧರಿಸುತ್ತಿದ್ದರು. ಈಗ ಪೂರ್ವಭಾರತದಲ್ಲಿ ಹೆಚ್ಚಾಗಿ ಕಂಡು ಬರುವ ಅಲ್ತಾ ಅಥವಾ ಅಲತಿಗೆಯ ಬಣ್ಣವನ್ನು ಕಾಲಿಗೆ ಲೇಪಿಸುವ ಪದ್ಧತಿ ಹಿಂದೊಮ್ಮೆ ಕರ್ನಾಟಕದಲ್ಲೂ ಪ್ರಚಲಿತವಿತ್ತು.

ರಾಜ ಮನೆತನದವರಲ್ಲಿ, ಸಿರಿವಂತರಲ್ಲಿ ರೇಷ್ಮೆಬಟ್ಟೆಯ ಉಪಯೋಗ ಸಾಮಾನ್ಯವಾಗಿತ್ತು ಚೀನಾಂಬರ, ಸಾಹಯಾಣ, ಪಾಸಿಕಾರೋಹಣ, ದೇವಾಂಗ, ಪಟ್ಟೆ, ಮೊದಲಾದ ರೇಷ್ಮೆ ಬಟ್ಟೆಯ ಪ್ರಕಾರಗಳನ್ನು ಪಂಪನು ಹೆಸರಿಸಿದ್ದಾನೆ. ಸಾಮಾನ್ಯರಲ್ಲಿ ಹತ್ತಿಯಬಟ್ಟೆಯೇ ಪ್ರಚಲಿತವಿತ್ತು. 'ಸೀರೆ'(ಚೀರ ಸಂಸ್ಕೃತ ಶಬ್ದದ ತದ್ಭವ) ಶಬ್ದವನ್ನು ಗಂಡಸರು ಹೆಂಗಸರು ಕೂಡಿಯೇ ಬಳಸುವ ಬಟ್ಟೆಗೆ ಬಳಸಿದ್ದಾನೆ, ಪಂಪ. ಕುಪ್ಪಸ (ಕೂರ್ಪಾಸಕ) ಸವಂಗಗಳೆಂಬ ಉದ್ದನೆಯ ಅಂಗಿಗಳನ್ನು ಸ್ತ್ರೀ-ಪುರುಷರು, ವನವಿಹಾರಗಳಂತಹ ಹೊರಗಿನ ಚಟುವಟಿಕೆಗಳಲ್ಲಿ ಉಪಯೋಗಿಸುತ್ತಿದ್ದರು. ಚಿನ್ನದ ಜರಿಯ ಪಟ್ಟಿ ಹಾಗೂ ಅಂಚಿನ ದುಕೂಲ (ಕರೆವೆರಸಿದ)ವನ್ನು ವಿಶೇಷ ಸಂದರ್ಭಗಳಲ್ಲಿ ಉಡುತ್ತಿದ್ದರು. ಭಾರತದ ಬೇರೆ ಬೇರೆ ಪ್ರದೇಶಗಳ ಬಟ್ಟೆಗಳು ಇಲ್ಲಿ ಬಂದಂತೆ, ಇಲ್ಲಿಯವು ಹೊರನಾಡುಗಳಿಗೆ ಹೋಗುತ್ತಿದ್ದವು.

ಕನ್ನಡ ಸೈನಿಕರ ಉಡುಗೆ ತೊಡಿಗೆಯ ವಿಚಾರ ಆದಿಪುರಾಣದಲ್ಲಿ ಬರುವಂತೆ, ಸಂಸ್ಕೃತ ಚಂಪೂಕಾವ್ಯಗಳಾದ ತ್ರಿವಿಕ್ರಮಭಟ್ಟನ ನಳಚರಿತ್ರೆ ಹಾಗೂ ಸೋಮದೇವ ಸೂರಿಯ ಯಶಸ್ತಿಲಕಗಳಲ್ಲೂ ಬರುತ್ತದೆ. ಬಟ್ಟೆಯ ಪಟ್ಟಿಗಳಿಂದ ಕೂದಲು ಕಟ್ಟಿಕೊಂಡು ಕೈ ತುಂಬ ಕಬ್ಬಿಣದ ಬಳೆಗಳನ್ನು ಅವರು ಧರಿಸುತ್ತಿದ್ದರು. ಗಂಡುಡೆ ಅಥವಾ ವೀರಗಚ್ಚೆ ಹಾಕಿದ ಕಿರಿಯ ಧೋತರ ಉಟ್ಟು ಕಠಾರಿಗಳನ್ನು ಹೊಂದಿದ ಕಲಿಗಳು, ರಣರಂಗದಲ್ಲಿ ಕಾದುತ್ತಿದ್ದರು. ಸಮಕಾಲೀನ ವೀರಗಲ್ಲುಗಳಲ್ಲಿ ವೀರರ ಆಕೃತಿಗಳು ಇದೇ ಉಡಿಗೆ, ಬಳೆ ಹಾಗೂ ಆಯುಧಗಳನ್ನು ಹೊಂದಿರುವದನ್ನು ಗುರುತಿಸಬಹುದು. (ಚಿತ್ರ ೨)




ತುರಪರಿವಾಗಳೆಮ್ಮ ಪೆಣನಂ ತುಳಿದು



ಲೋಹದ ಬಳೆಗಳ ವೀರ

ಗಂಡಸರು, ಹೆಂಗಸರು ಬಗೆಬಗೆಯ ಆಭರಣಗಳನ್ನು ತೊಡುತ್ತಿದ್ದರು. ಬಂಗಾರ ಮತ್ತು ವಜ್ರಗಳ ಕರ್ಣಾಭರಣಗಳು, ಕೊರಳ ಹಾರಗಳು, ಬಾಹುಮುರಿ, ಕಡಗ, ಸೊಂಟ ಮತ್ತು ಕಾಲಿನ ಒಡವೆಗಳನ್ನು ಇಬ್ಬರೂ ತೊಡುತ್ತಿದ್ದರೂ ಅವುಗಳಲ್ಲಿ ಸೂಕ್ಷ್ಮ ವ್ಯತ್ಯಾಸವಿರುತ್ತಿತ್ತು. ಹೆಣ್ಣು ಮಕ್ಕಳ ಒಡ್ಯಾಣದಲ್ಲಿ, ಮಣಿಗಳಿಂದ ಕೂಡಿದ ಗೆಜ್ಜೆಗಳು ಝಣತ್ಕಾರದ ವಿನ್ಯಾಸವಿದ್ದರೆ, ಗಂಡಸರ ಕಾಂಚೀದಾಮಗಳಲ್ಲಿ ಅದು ಇರುತ್ತಿದ್ದಿಲ್ಲ. ಹೆಣ್ಣು ಮಕ್ಕಳು ಬೈತಲೆಯಲ್ಲಿ ತಲೆಯಲ್ಲಿ 'ಚೂಡಾಮಂಡನ' ಧರಿಸಿದರೆ, ಹೂವಿನ ಶಿರೋಭೂಷಣಗಳನ್ನು ಇಬ್ಬರೂ ತೊಡುತ್ತಿದ್ದುರು.

ಗಾಜಿನ ಬಳೆಗಳು ಅದಾಗಲೇ ಜನಸಾಮಾನ್ಯರಲ್ಲಿ ಪರಿಚಿತವಿದ್ದು ಬಳೆಯ ಹೇರನ್ನು ಆನೆ ತುಳಿದ ರೀತಿಯಲ್ಲಿ ಭೀಮನು ಕೀಚಕನನ್ನು ನುಜ್ಜುಗುಜ್ಜಾಗಿಸಿದ್ದನ್ನು ಪಂಪ ಉಲ್ಲೇಖಿಸಿರುವ.

ಶಿಕ್ಷಣ :

ಅರಿಕೇಸರಿ ಅರ್ಜುನನ ಹಾಗೂ ಪಾಂಡವರ ವಿದ್ಯಾಭ್ಯಾಸದ ವರ್ಣನೆ ಮಾಡುವಾಗ ಪಂಪನು ಸಮಕಾಲೀನ ಅರಸು ಮಕ್ಕಳಿಗೆ ದೊರೆಯುತ್ತಿದ್ದ ಹತ್ತಾರು ವಿಷಯಗಳ ತರಬೇತಿಯ ಕುರಿತು ಹೇಳಿದ್ದಾನೆ. ವ್ಯಾಕರಣ, ಛಂದಸ್ಸು, ಅಲಂಕಾರ, ಮಹಾಕಾವ್ಯ, ನಾಟಕ, ಧರ್ಮಶಾಸ್ತ್ರ, ವೇದ ದರ್ಶನ, ಭರತಶಾಸ್ತ್ರ, ಸಂಗೀತಗಳಂತೂ ಸರಿಯೇ! ಕ್ಷತ್ರಿಯ ಕುಮಾರರು ಯುದ್ಧ ಶಾಸ್ತ್ರವನ್ನಂತೂ ಪರಿಶ್ರಮ ಪೂರ್ವಕ ಅಭ್ಯಸಿಸಬೇಕಾಗಿತ್ತು. ತೋಮರ, ಮುಸಲ, ಭಿಂಡಿವಾಳ, ಗದೆ, ಬಿಲ್ಲು, ಖಡ್ಗ, ಕಠಾರಿಗಳಂಥ ಯಾವತ್ತೂ ಆಯುಧಗಳನ್ನು ಪ್ರಯೋಗಿಸುವದು, ಗಜ ಅಶ್ವಗಳನ್ನು ಸವಾರಿ ಮಾಡುವದಲ್ಲದೇ ಅವುಗಳ ಕುರಿತಾದ ಶಾಸ್ತ್ರಗ್ರಂಥಗಳನ್ನು ಓದಬೇಕಾಗಿತ್ತು.

ಆದಿಪುರಾಣದಲ್ಲಿ ಸ್ತ್ರೀಶಿಕ್ಷಣದ ಮಾದರಿಯೊಂದು ಚಿತ್ರಿತವಾದದ್ದು ವಿಶೇಷ. ಒಂದು ದಿನ ವೃಷಭದೇವನು ತನ್ನಿಬ್ಬರು ಹೆಣ್ಣುಮಕ್ಕಳು ಬ್ರಾಹ್ಮಿ, ಸುಂದರಿಯರನ್ನು ಕಂಡು, ಈ ವಯಸ್ಸು ವಿದ್ಯಾಭ್ಯಾಸಕ್ಕೆ ಯೋಗ್ಯವಾದದ್ದೆಂದು ಸ್ವತಃ ತಾನೇ ಶಿಕ್ಷಣ ಕೊಡುತ್ತಾನೆ. ಸಿದ್ಧಂ ನಮಃ ಎಂದು ಪ್ರಾರಂಭಿಸಿ ಬ್ರಾಹ್ಮಿಗೆ ಅಕ್ಷರಗಳು, ವಿವಿಧ ಲಿಪಿಗಳು, ಸುಂದರಿಗೆ ಗಣಿತ,ವ್ಯಾಕರಣ, ಅಲಂಕಾರಗಳನ್ನು, ಇಬ್ಬರಿಗೂ ಸಮಸ್ತಕಳಾಕಳಾಪಂ, (ಸಮಸ್ತ ಕಲೆಗಳನ್ನು)ಕಲಿಸುತ್ತಾನೆ. ಹೆಣ್ಣು ಮಕ್ಕಳಿಗೆ ಸ್ವತಂತ್ರ ಶಾಲೆಗಳು ಇರದ ಯುಗದಲ್ಲಿ ಮನೆಯಲ್ಲೇ ಓದು ಬರಹದ ವ್ಯವಸ್ಥೆ ಆಗುತ್ತಿದ್ದು ಅಕ್ಷರಾಭ್ಯಾಸ, ಗಣಿತ, ವ್ಯಾಕರಣ ಹಾಗೂ ನೃತ್ಯ, ಸಂಗೀತ ವಿವಿಧವಾದ್ಯಗಳ ಪ್ರಯೋಗ, ಚಿತ್ರಕಲೆ, ಇತ್ಯಾದಿ ಯಾವತ್ತೂ ಕಲೆಗಳ ಪರಿಚಯ ಕೊಡಲಾಗುತ್ತಿತ್ತು. ಇಂಥ ವಿದ್ಯಾಭ್ಯಾಸಕ್ಕೆ 'ಕನ್ನೆಮಾಡ'ಗಳಿದ್ದು, ಕುಟುಂಬದ ಸದಸ್ಯರಲ್ಲದೇ ಪಂಡಿತೆಯರಾದ ದಾದಿಯರು ಓದಿಸುತ್ತಿದ್ದರು. ಶ್ರೀಮತಿಯು ಪಂಡಿತೆಯಿಂದ ಚೆನ್ನಾಗಿ ವಿದ್ಯೆ ಕಲಿತು ಗುರುವನ್ನು ಮೀರಿಸುವ ಪಂಡಿತೆಯಾಗುತ್ತಾಳೆ. ಈ ಕನ್ನೆಮಾಡಗಳ ಪದ್ಧತಿ ವಿಜಯನಗರ ಕಾಲವರೆಗೂ ಮುಂದರಿದು ಬಂದ ವಿಚಾರ "ಪ್ರಭುಲಿಂಗಲೀಲೆ"ಯಿಂದ, ವಿದೇಶೀ ವೃತ್ತಾಂತಗಳಿಂದ ತಿಳಿದು ಬರುತ್ತದೆ.

**ಆಟೋಟಗಳು**

ಪಾಂಡವರ ಬಾಲ್ಯದ ಆಟಗಳನ್ನು ಉಲ್ಲೇಖಿಸುವಾಗ ಪಂಪನು ತನ್ನ ಸಮಕಾಲೀನ ಬಾಲಕ್ರೀಡೆಗಳನ್ನೇ ಹೆಸರಿಸಿದಂತಿದೆ. ಮರಗೆರಸೆ, ಗುಳ್ಳೆಗೊಟ್ಟೆ, ಬಟ್ಟೆ, ಉಳಿಸೆಂಡು, ಪೊಡೆಸೆಂಡು ಮುಂತಾದವುಗಳನ್ನು, ಗಿಡಮಂಗನಾಟ, ಬಿಲ್ಲೆಯಾಟ, ಚೆಂಡನ್ನು ಬಚ್ಚಿಟ್ಟು ಹುಡುಕುವ ಆಟ, ಹಾಗೂ ಚೆಂಡಿನಿಂದ ಹೊಡೆಯಲೆತ್ನಿಸಿದಾಗ ತಪ್ಪಿಸಿಕೊಂಡು ಓಡುವದು ಎಂದು ಕ್ರಮವಾಗಿ ಗುರುತಿಸಬಹುದು.

ಅಂಗ ಸಾಧನೆಯ, ಆಯುಧ ವಿದ್ಯೆಯ ಪ್ರದರ್ಶನಗಳಿಗೆ ಭಾರೀ ಏರ್ಪಾಡು ಆಗುತ್ತಿತ್ತು. ಊರ ಹೊರಗೆ ದೊಡ್ಡ ಬಯಲಿನಲ್ಲಿ ಕಲ್ಲು ಮುಳ್ಳು ತೆಗೆದು, ನೆಲವನ್ನು ಅಳೆದು, ಧಮ್ಮಸ್ಸು ಮಾಡಿ ವ್ಯಾಯಾಮರಂಗವನ್ನು ರಚಿಸಲಾಗುತ್ತಿತ್ತು. ಪ್ರೇಕ್ಷಕರಿಗಾಗಿ ಹಲಗೆಗಳನ್ನು ಇಂದಿನ 'ಗ್ಯಾಲರಿ' ಗಳ ತರಹ ಜೋಡಿಸಿ ಕುಳಿತುಕೊಳ್ಳುವ ವ್ಯವಸ್ಥೆ ಇರುತ್ತಿತ್ತು. ಸುತ್ತಲೂ ಬಣ್ಣ ಬಣ್ಣದ ಬಾವುಟಗಳು ಉತ್ಸವದ ವಾತಾವರಣ ನಿರ್ಮಿಸುತ್ತಿದ್ದವು. ಇಂಥ ವ್ಯಾಯಾಮರಂಗದಲ್ಲಿ ಅರಸು ಮಕ್ಕಳು ಆವರೆಗೆ ಕಲಿತ 'ಬಿಲ್ವಿದ್ಯೆ' ಅಥವಾ ವಿವಿಧ ಆಯುಧಗಳ ಪರಿಣತಿಯ ಪ್ರದರ್ಶನವಾಗುತ್ತಿತ್ತು. ಜಟ್ಟಿಗಾಳಗ, ಮುಷ್ಟಿಯುದ್ಧ (ಇಂದಿನ ಬಾಕ್ಸಿಂಗ್) ತಗರುಕಾಳಗ, ಕೋಣಕಾಳಗಗಳು ಜನಪ್ರಿಯ ವಿನೋದಗಳಾಗಿದ್ದವು.

ಸಂಗೀತ, ನೃತ್ಯ ಗೋಷ್ಠಿಗಳು ರಸಿಕವರ್ಗದ ಸದಭಿರುಚಿಯ ತಾಣಗಳಾಗಿದ್ದವು. ಗೀತ, ವಾದ್ಯ, ನೃತ್ಯ ಹಾಗೂ ಅಭಿನಯಗಳನ್ನು ಒಟ್ಟಿಗೇ ಹೊಂದಿದ 'ಸಂಗೀತಕ'ಗಳು ಪ್ರೇಕ್ಷಕರ, ಅವುಗಳ ಕುರಿತಾದ ಜ್ಞಾನವನ್ನು ಅಳೆಯುವಂತಿರುತ್ತಿದ್ದವು. ಪಂಪನಿಗೆ ಭರತ (ನಾಟ್ಯ) ಶಾಸ್ತ್ರದ ಉತ್ತಮ ಜ್ಞಾನವಿತ್ತು. ಪ್ರಸಿದ್ಧ ಕಾವ್ಯಭಾಗವಾದ ಆತನ 'ನೀಲಾಂಜನೆಯ ನೃತ್ಯ' ಪ್ರಸಂಗ. ಅಂಗಹಾರ, ಕರಣ, ಚಾರಣ, ಚಲನ, ವರ್ತನಗಳ ವಿನ್ಯಾಸವನ್ನು, ವಾಚಿಕ, ಆಂಗಿಕ, ಆಹಾರ್ಯವೆಂಬ ಭರತನ ವಿಭಜನೆಗನುಗುಣವಾಗಿ ವರ್ಣಿತವಾಗಿದೆ. ಲೌಕಿಕ ಜೀವನದ ನಶ್ವರತೆಯನ್ನು ಬಿಂಬಿಸಲು ಪಂಪನು ಈ ಪ್ರಸಂಗವನ್ನು ತಂದಿರುವನಾದರೂ ಸಾಮಾಜಿಕ ಚರಿತ್ರೆಯ ಸಂದರ್ಭದಲ್ಲಿ ನೀಲಾಂಜನೆಯ ನೃತ್ಯವನ್ನು ಈಗಿನ ಸ್ಟ್ರಿಪ್‌ಟೀಸ್ ಇಲ್ಲವೆ ಈಜಿಪ್ಟ್ ದೇಶದ ಉದರ ನೃತ್ಯ ಅಥವಾ 'ಬೆಲಿಡಾನ್ಸ್'ಗೆ ಹೋಲಿಸಬಹುದಾಗಿದೆ "ಮಾನವರೂ, ದೇವತೆಗಳೂ, ಆ ಸುರಾಂಗನೆಯನ್ನು ಎವೆಯಿಕ್ಕದೇ ನೋಡುತ್ತಿದ್ದರು...... ನಾಭಿಮೂಲ, ಬಾಹುಗಳನ್ನು ನೋಡುತ್ತ ಅವರು ಅಮೃತಾಸ್ವಾದನೆಯನ್ನು ಅನುಭವಿಸಿದರು. ಬಲು ಕೌಶಲದಿಂದ ಆಕೆ ದೇವಾಂಗ ರೇಶ್ಮೆಯ ಉಳ್ಳುಡೆ (ಒಳ ಬಟ್ಟೆ)ಯನ್ನು ಸರಿಸುವ ಭಂಗಿ, ಮದನರಾಜ್ಯ ವಿಳಾಸವಾಗಿತ್ತು" (ಆದಿಪುರಾಣ ೯ನೇ ಸಂಧಿ) ಎಂಬ ವಿವರಗಳನ್ನು ಓದಿದಾಗ ಕೆಲ ಪ್ರತಿಷ್ಠಿತ ವರ್ಗಗಳ ಆನಂದ ವಿಳಾಸಗಳಿಗಾಗಿ ಸ್ತ್ರೀ ದೇಹ ಪ್ರದರ್ಶನದ ನೃತ್ಯಗಳು, ಏರ್ಪಡುತ್ತಿದ್ದಿರಬಹುದು ಎಂಬ ಕಲ್ಪನೆ ಮೂಡುತ್ತದೆ.

ತುರುಕಾಳಗದ ಪ್ರಸಂಗಗಳು ತೀರ ಸಾಮಾನ್ಯವಾಗಿದ್ದ ಯುಗ ಅದು. ವಿರಾಟನ ಗೋಗ್ರಹಣಪ್ರಸಂಗದಲ್ಲಿ ಮರೆಯದೇ ಪಂಪನು ಇಂಥ ತುರುಕಾಳಗದ ವರ್ಣನೆ ತಂದಿದ್ದಾನೆ.

"ತುರು ಪರಿವಾಗಳೆಮ್ಮ ಪೆಣನಂ ತುಳಿದು ಪರಿಗುಂದಲೆಂದು, ತುರುಗೊಳೆ ಬಾಳೆಮೆಂದು ತುರುಗೊಳೊಳ್ ಸಾವುದು ಸೈಪಿದೆಂದು" (ತುರುಗಳೇ ಬಾಳಿನ ಆಧಾರವಾಗಿರುವಾಗ, ಅವನ್ನು ಅಪಹರಿಸಲು ಬಂದಾಗ, ಬಿಟ್ಟುಕೊಡುವದು ಸಾಧ್ಯವೇ? ನಾವು ಕಾದಿ ಮಡಿದಾಗ ತುರುಕರುಗಳು ನಮ್ಮ ಹೆಣಗಳನ್ನು ತುಳಿದಾದರೂ ಹೋಗುವಂತಾಗಲಿ!) ಎಂಬ ಉದ್ಗಾರ ಬರುತ್ತದೆ.

ಪಂಪನ ಈ ವರ್ಣನೆಯನ್ನೇ ಯಥಾವತ್ ಕಲ್ಲಿನಲ್ಲಿ ಕಂಡರಿಸಿದಂತಿರುವ ವೀರಗಲ್ಲೊಂದು ಬನವಾಸಿಯ ಮ್ಯುಝಿಯಂದಲ್ಲಿದೆ! ತುರುಕರುಗಳಸಾಲೊಂದು, ಅವನ್ನು ಬಿಟ್ಟುಕೊಡಲಾರದೇ ಕಾದಾಡಿ ಸತ್ತವರ ಶವಗಳನ್ನು ಮೆಟ್ಟಿ ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ತನ್ನ ಪ್ರೀತಿಯ ಬನವಾಸಿಯಲ್ಲೆ ಕಂಡಂಥ ತುರುಗಾಳಗದ ಹಸಿನೆನಪೊಂದನ್ನು ಪಂಪನು ತನ್ನ ಅಮರಕಾವ್ಯದಲ್ಲಿ ಸ್ಥಾಯಿಯಾಗಿರಿಸಲು ಹವಣಿಸಿದನೇ? ಎಂಬಷ್ಟು ಈ ಶಿಲ್ಪ ಪಂಪನ ಹೇಳಿಕೆಗೆ ನಿಕಟವಾಗಿದೆ. (ಚಿತ್ರ ೧) ಗೋವನ್ನು ಕೊಲ್ಲಬಂದ ಹುಲಿಯೊಂದಿಗೆ ಕಾದು ಮಡಿದ ಕಲಿಗಳು ಕಲ್ಲಿನಲ್ಲಿ ಅಮರರಾಗಿದ್ದಾರೆ. (ಚಿತ್ರ ೨)

ಅಂದಿನ ಕಾವ್ಯದ ಪಾರಂಪರಿಕ ಚೌಕಟ್ಟಿನೊಳಗೇ ತನ್ನ ಕೃತಿಗಳನ್ನು ಬರೆಯಬೇಕಾದ ಪ್ರಸಂಗ ಬಂದರೂ, ಪಂಪ ಮಹಾಕವಿ, ಸಾಧ್ಯವಿದ್ದೆಡೆ ತನಗೆ ಚಿರಪರಿಚಿತವಿದ್ದ ಮಾನವಸಹಜ ವ್ಯಾಪಾರಗಳನ್ನು ಬಣ್ಣಿಸಿದ. ಸಮಕಾಲೀನ ಸಮಾಜವನ್ನು ಬಿಂಬಿಸಲು ಹವಣಿಸಿದ. ಹೀಗಾಗಿ ಇಂಥ ಕೆಲ ಪ್ರಸಂಗಗಳನ್ನು ಚಾರಿತ್ರಿಕ ದಾಖಲೆಗಳನ್ನಾಗಿ ಬಳಸಬಹುದಾಗಿದೆ.

## ಆಧಾರಸೂಚಿ

೧. ಪಂಪನ ಆದಿಪುರಾಣಂ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೭
೨. ಪಂಪಭಾರತಂ ಅಥವಾ ವಿಕ್ರಮಾರ್ಜುನ ವಿಜಯಂ ಕನ್ನಡ ಸಾಹಿತ್ಯಪರಿಷತ್ತು,ಬೆಂಗಳೂರು೧೯೭೭
೩. ವಿಕ್ರಮಾಂಕದೇವ ಚರಿತ ಮಹಾಕಾವ್ಯ (ಸಂಸ್ಕೃತ)ಬಿಲ್ಹಣ ಕವಿ. ಬನಾರಸ ೧೯೪೫
೪. ಚಾಮರಸನ ಪ್ರಭುಲಿಂಗಲೀಲೆ : ಕನ್ನಡ ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫
೫. ಶ್ರೀ ಗೊಂದೇಕರ್ ಜಿ.ಎಮ್. (ಸಂ) ಸೋಮೇಶ್ವರನ ಮಾನಸೋಲ್ಲಾಸ ಸಂಪುಟ ೩ ಬಡೋದಾ ೧೯೬೧



## ೨. ಶತಮಾನಗಳಲ್ಲಿ ಕನ್ನಡಿಗರ ಸ್ನಾನ

ನಮ್ಮ ಪೂರ್ವಜರು, ಬರೆದಿಟ್ಟ ಶಾಸ್ತ್ರ, ಪುರಾಣ, ಸಾಹಿತ್ಯ, ಕೊರೆದಿಟ್ಟ ಶಿಲ್ಪ, ಬಿಡಿಸಿಟ್ಟ, ಚಿತ್ರಗಳನ್ನು ಅವಲೋಕಿಸಿದಾಗ, ಕನ್ನಡಿಗರು ಪರಿಶುದ್ಧ ಮನಸ್ಸಿನೊಂದಿಗೆ ದೇಹಶುದ್ಧಿಗೂ ವಿಶೇಷಗಮನ ನೀಡುತ್ತಿದ್ದ ವಿಚಾರ ಸ್ಪಷ್ಟವಾಗುತ್ತದೆ. ಅಗ್ನಿಪುರಾಣವು (೧೦ನೇ ಶತಮಾನ) ದೇಹಶುದ್ಧತೆಯ ಅಷ್ಟಸೂತ್ರಗಳನ್ನು ಉಲ್ಲೇಖಿಸುತ್ತದೆ : ನೀರಿನಿಂದ ತೊಳೆಯುವದು, ಕಾಸಿಕೊಳ್ಳುವುದು, ಬಾಯಿಯನ್ನು ಔಷಧಿಯುಕ್ತ ನೀರಿನಿಂದ ಮುಕ್ಕಳಿಸುತ್ತ ಇರುವದು, ಕಕ್ಕುವದು, ಧೂಪ ಸಂಸ್ಕಾರ, ಬಟ್ಟೆ-ಬರೆಗಳಿಗೆ, ಮನೆಗಳಲ್ಲಿ, ಸುಗಂಧಯುಕ್ತ ಹೊಗೆಹಾಕುವದು, ಸುಗಂಧಾದಿಲೇಪನ ಹಾಗೂ ಹೂಮಾಲೆಗಳನ್ನು ಧರಿಸುವದು, ಇತ್ಯಾದಿ. ಕಲ್ಯಾಣ ಚಾಲುಕ್ಯರ ಮುಮ್ಮಡಿ ಸೋಮೇಶ್ವರ ಭೂಲೋಕ ಮಲ್ಲನು (ಕ್ರಿ. ಶ. ೧೧೨೬-೧೧೩೮) ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಾಷಿತಾರ್ಥ ಚಿಂತಾಮಣಿಯು' ಅರಸು ಮಕ್ಕಳೆಲ್ಲ ಅಭ್ಯಸಿಸಲೇಬೇಕಾಗಿದ್ದ ಸಂಸ್ಕೃತ ಭಾಷೆಯ ಕೈಪಿಡಿಯಾಗಿದ್ದು ದೇಹ ಶುದ್ಧಿಯ ಎಲ್ಲ ಕ್ರಮಗಳನ್ನು ಒಳಗೊಂಡಿದೆ. ಸ್ನಾನ ಸಂಸ್ಕೃತಿಯು, ರೋಮನ್, ಟರ್ಕಿಶ್, ಮೊಗಲರಿಗಷ್ಟೆ ಮೀಸಲೆನಿಸಿರಲಿಲ್ಲ, ಕನ್ನಡನಾಡೂ ಹಿಂದೊಮ್ಮೆ ಕ್ರಮಬದ್ಧವಾಗಿ. ಬೆಳೆಸಿಕೊಂಡ ಅಭ್ಯಂಜನ ಪದ್ಧತಿಯು, ಅಭಿರುಚಿಯ ಇಣುಕು ನೋಟಗಳನ್ನು ಒಳಗೊಂಡಿದೆ ಎಂಬುದನ್ನು ಇವುಗಳಿಂದ ತಿಳಿಯಬಹುದು.

ಅರಮನೆಯ ಈಶಾನ್ಯ ದಿಕ್ಕಿನಲ್ಲಿ ಸ್ನಾನಗೃಹವನ್ನು ಪ್ರಶಸ್ತವಾಗಿ ಬೆಳಕು ಬರುವಂತೆ ಕಟ್ಟಲಾಗುತ್ತಿತ್ತು. ಸ್ಫಟಿಕದ ಆಸನಗಳು, ಕಲಾತ್ಮಕವಾದ ಬಣ್ಣಬಣ್ಣದ ಗಾಜಿನ ಹಂಚುಗಳು (ಕಾಚಕುಟ್ಟಿಮ) ಸ್ನಾನಗೃಹಕ್ಕೆ ಜೋಡಿಸಲ್ಪಡುತ್ತಿದ್ದವು. ರಂಗಾದ ಚಿತ್ರಗಳು ಸ್ತಂಭ-ಗೋಡೆಗಳ ಮೇಲಿದ್ದರೆ, ಆಕರ್ಷಕವಾದ ರೇಶ್ಮೆ ಪರದೆಗಳನ್ನು ಇಳಿ ಬಿಡಲಾಗಿರುತ್ತಿತ್ತು. ಪುಣ್ಯನದಿಗಳ ಶುಭ್ರವಾದ ಝುರಿ ನೀರನ್ನು, ಗಿಡಮೂಲಿಕೆಗಳನ್ನು ಹಾಕಿ ಕಾಯಿಸಲಾಗುತ್ತಿತ್ತು. ಔಷಧೀಯ ಹಾಗೂ ಸುಗಂಧದ ಅಂಶಗಳನ್ನು ಈ ಬೇರುಗಳು ಹೊಂದಿರುತ್ತಿದ್ದವು.[೧]

ಶಸ್ತ್ರಾಭ್ಯಾಸ, ಆಶ್ವಾರೋಹಣ, ಮಲ್ಲಯುದ್ಧಾದಿ ದೇಹಶ್ರಮ, ಅರಸು ಮಕ್ಕಳಿಗೆ, ಸೇನಾಧಿಕಾರಿಗಳಿಗೆ ಕಡ್ಡಾಯವಾಗಿದ್ದ ಯುಗದಲ್ಲಿ, ಬೆಳಕು ಹರಿಯುತ್ತಿದ್ದಂತೆ ಇಂಥ ವ್ಯಾಯಾಮಗಳನ್ನು ಕೈಗೊಂಡು ಮೈ, ಕೈ ನೋವು ಕಾಣಿಸಿ ಕೊಳ್ಳುತ್ತಿತ್ತು. ಹೀಗಾಗಿ ಸ್ನಾನಕ್ಕೆ ಪೂರ್ವಭಾವಿಯಾಗಿ ತೈಲ ಮರ್ದನ ಅಥವಾ ಎಣ್ಣೆ, ತಿಕ್ಕಿಕೊಳ್ಳುತ್ತಿದ್ದರು. ಮರ್ದನ ಕಲೆಯನ್ನು

ಶಾಸ್ತ್ರೋಕ್ತವಾಗಿ ರೂಢಿಸಿಕೊಂಡ (ಸಂವಾಹವೇದಿ) ಮಲ್ಲರು ಅಂಗೈಯಿಂದಲೆ ಕ್ರಮವಾಗಿ ಮೈಗೆಲ್ಲ ಎಣ್ಣೆ, ಪೂಸಿ, ತಿಕ್ಕಿ, ತೀಡಿ ಒತ್ತಿ ಇಂಗಿಸುತ್ತಿದ್ದರು.[೨] ಪೋರ್ಚಗೀಸ್ ಪ್ರವಾಸಿ ದುಮಿಂಗೋ ಪೈಸ್ (ಕ್ರಿ. ಶ. ಸು ೧೫೨೦-೨೧)ನು ಕೃಷ್ಣದೇವರಾಯನ ದೈನಂದಿನ ಶಾರೀರಿಕ ಶ್ರಮ ತೈಲಮರ್ದನ, ಸ್ನಾನದ ದಿನಚರಿಯನ್ನು ಉಲ್ಲೇಖಿಸಿದ್ದನ್ನು ನೆನಪಿಸಿಕೊಳ್ಳಬಹುದು.[೩] ಚಾವುಂಡರಾಯನ ಲೋಕೋಪಕಾರಂ (ಕ್ರಿ.ಶ. ೧೦೫೦) ಕೃತಿಯು ಸಹ ಅನೇಕ ಬಗೆಯ ತೈಲಗಳ ತಯಾರಿಕೆಯನ್ನು ಹೇಳುತ್ತದೆ.[೪] ಮುಖ್ಯವಾಗಿ ಕೋಷ್ಠ, ಪಟೋಲಕ, ಭದ್ರಮುಸ್ತೆ, ವಾಜಿಗಂಧ, ತಗರ, ಪುಷ್ಕಲಗಳ ಬೇರು, ಬಾಕುಚಿ, ಚಕ್ರಮರ್ದನಗಳ ಬೀಜ, ಬೇವಿನೆಲೆ, ತುಲಸಿ, ಏಲಗಳನ್ನು ಒಣಗಿಸಿ ಪುಡಿ ಮಾಡಿ ಸಾಸಿವೆ ಇಲ್ಲವೆ ಎಳ್ಳೆಣ್ಣೆಗಳೊಂದಿಗೆ ಸೇರಿಸಿ, ಪುನ್ನಾಗ, ಚಂಪಕ ಶ್ರೀಗಂಧಾದಿಗಳಿಂದ ಸುವಾಸಿತಗೊಳಿಸುತ್ತಿದ್ದರು. ಜೊತೆಗೆ ಗುಗ್ಗುಳ, ಸೈಂಧಲವಣ, ಸರ್ಜರಸಗಳನ್ನು ಹಾಲಿನಲ್ಲಿ ಅರೆದು, ತೈಲಗಳೊಂದಿಗೆ ಸೇರಿಸಲಾಗುತ್ತಿತ್ತು.

ಬಡವರು, ಉಳ್ಳವರೆಂಬ ಭೇದವಿಲ್ಲದೇ ಸ್ನಾನ-ಪದ್ಧತಿ ಪ್ರಚಲಿತವಿತ್ತು. ಸಕಲವರ್ಗದವರಿಗೆ ಲಭ್ಯವಾಗುವ ನೀರು, ಉರುವಲಗಳಿಗಂತೂ ಹಿಂದೆ ಕೊರತೆಯಿರಲಿಲ್ಲ. ಸುಖೋಷ್ಣವಾದ ನೀರನ್ನು ಹೊಯ್ದುಕೊಂಡು, ಹೊಯ್ಯಿಸಿಕೊಂಡು ಅಂಗಾಂಗಗಳನ್ನು ಹಗುರ ಮಾಡಿಕೊಳ್ಳುವ ಕ್ರಮ ಜಾರಿಯಲ್ಲಿತ್ತು. ಜಿಡ್ಡನ್ನು ಹೋಗಲಾಡಿಸಲು 'ಖಲೀ'ಎಂಬ ಸೋಪು ಬಳಕೆಯಲ್ಲಿತ್ತು. ಹೆಸರು, ಕಡಲೆ, ಗೋದಿಗಳ ಹಿಟ್ಟಿಗೆ, ಮದನದ ಬೇರಿನ ಪುಡಿ ಹಾಗೂ ಕರ್ಪೂರವನ್ನು ಸೇರಿಸಿ 'ಖಲೀ'ಯನ್ನು ತಯಾರಿಸುತ್ತಿದ್ದರು. ತಲೆಕೂದಲ ಜಿಡ್ಡಿಗೆ ನೆಲ್ಲಿಕಾಯಿ ಲೇಪ ಹೇಳಿದೆ. ಇಷ್ಟಾಗಿಯೂ ಜಿಡ್ಡು ಹೋಗದಿದ್ದರೆ 'ಅರನಾಲ' ಎಂಬ ಒಗರಾದ ಗಂಜಿಯನ್ನು ಬಳಸುತ್ತಿದ್ದರು.[೫]

ಕೆಳದಿಯ ಬಸವಪ್ಪನಾಯಕನ 'ಶಿವತತ್ವರತ್ನಾಕರ'ದಲ್ಲಿ (ಕ್ರಿ.ಶ. ೧೬೬೪-೧೭೧೧) ಹೆಚ್ಚುಕಡಿಮೆ, ಮಾನಸೋಲ್ಲಾಸದ ಸ್ನಾನಕ್ರಮವನ್ನೆ ಹೇಳಿದ್ದರೂ ಸೋಮ, ಬುಧ, ಶನಿವಾರಗಳಿಗೆ ಅಭ್ಯಂಗಸ್ನಾನ ಸೀಮಿತಗೊಳಿಸಲಾಗಿದೆ.[೬] ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ' (ಕ್ರಿ.ಶ. ೧೬೪೮) ದಲ್ಲಿ ಕಾವೇರಿ ನದಿಯ ಘಟ್ಟದ ಸುಂದರ ವರ್ಣನೆ ಇದೆ. ಹೆಂಗಸರಿಗೆ ವಿಶೇಷ ಮೀಸಲಾತಿಯನ್ನು ಸಾರಿ ಹೇಳದಿದ್ದರೂ, ಗಂಡಸರು/ಹೆಂಗಸರು ಸ್ನಾನ ಮಾಡುವ ಸ್ಥಾನಗಳು ಬೇರ್ಪಟ್ಟು ಇರುತ್ತಿದ್ದಂತೆ ಭಾಸವಾಗುತ್ತದೆ! ಶರೀರಕ್ಕೆ ಶೀತ, ನಂಜಿನ ಬಾಧೆ ಆಗದಂತೆ, ಅರಿಸಿನದ ಲೇಪ ಮಾಡಿಕೊಂಡು ಹೆಂಗಳೆಯರು ನೀರಿಗೆ ಇಳಿಯುತ್ತಿದ್ದರು. ನೀರು ಸಿಂಪಡಿಸುತ್ತ, ಕಸರತ್ತು, ಮುಟ್ಟಾಟವಾಡುತ್ತ, ಮನದಣಿ ನೀರಾಟವಾಡಿ, ಮನಸ್ಸಿಲ್ಲದ ಮನಸ್ಸಿನಿಂದ ಅಂತೂ ಜಳಕ ಮುಗಿಸಿ, ಒದ್ದೆಬಟ್ಟೆ ಕಳೆದು, ಒಣ ಬಟ್ಟೆ ಧರಿಸಿ, ಕುಂಕುಮವಿಟ್ಟು, ಕಾಡಿಗೆ ತೀಡಿ, ಕೂದಲ ಸಿಕ್ಕು ಬಿಡಿಸಿ, ಎಣ್ಣೆಗಂಟು ಹಾಕಿ, ಬೆಳಗಿದ ಬಿಂದಿಗೆಗಳಲ್ಲಿ ನೀರು ತುಂಬಿಕೊಂಡು ಗೃಹಾಭಿಮುಖವಾಗುತ್ತಿದ್ದರು. ಘಟ್ಟದಲ್ಲಿ ಸಂಧ್ಯಾವಂದನೆಯಲ್ಲಿ ಮೈಮರೆತವರು, ಶಿವಭಕ್ತರು, ಹರಿದಾಸರು ಇತ್ಯಾದಿ ಜನ ಕಂಡು ಬರುತ್ತಿದ್ದರು.[೭]

ಜೀವನದ ಅತ್ಯಾವಶ್ಯಕತೆಗಳಲ್ಲಿ ಒಂದಾದ ನೀರಿನ ಪೂರೈಕೆ, ಧಾರ್ಮಿಕ ಹಾಗೂ ಪುಣ್ಯದ ಕೆಲಸವೆಂದು ಪರಿಗಣಿಸಲಾಗುತ್ತಿತ್ತು. ಅಂತೆಯೇ ದಾನಿಗಳು ಬಾವಿ, ಕೆರೆ, ತಟಾಕಗಳನ್ನು ನಿರ್ಮಿಸುವುದು, ಹಳೆಯವನ್ನು ದುರಸ್ತಿಗೊಳಿಸುವದು, ಹೂಳೆತ್ತಿಸುವದು ಮುಂತಾದ ಕೆಲಸ ಕಾರ್ಯಗಳನ್ನು ಕೈಕೊಂಡರೆ, ಸ್ಥಳೀಯ ಜನ ಅವುಗಳ ಸ್ವಚ್ಛತೆ, ತಮ್ಮ ಹೊಣೆ, ಎಂಬುದನ್ನು ಅರಿತಿರುತ್ತಿದ್ದರು. ಗ್ರಾಮಕ್ಕೊಂದು ಕೆರೆ, ಊರಿಗೊಂದು ತಟಾಕ, ನದಿ ಇದ್ದಲ್ಲಿ ನಗರ, ಇರುವದು ಸಾಮಾನ್ಯವಾಗಿತ್ತು. ಕನ್ನಡ ಕಾವ್ಯಗಳಲ್ಲಿ ಹೊಳೆ, ಕೊಳ, ಬಗರಗೆ, ದೀರ್ಘಿಕೆ, ಹೊಕ್ಕರಣೆ ಬಾವಿಗಳ ಉಲ್ಲೇಖ ಬರುತ್ತದೆ.[೮] ಕನಕದಾಸರು, ವರ್ಷದುದ್ದಕ್ಕೂ ಏಕಪ್ರಕಾರವಾಗಿ ಹರಿಯುವ ಕಾಲುವೆಗಳಿಂದ, ತೂರೆ-ಕೆರೆಗಳಿಂದ ರಾಜಧಾನಿಗೆ ಸತತವಾದ ನೀರಿನ ಪೂರೈಕೆಯಾಗುತ್ತಿದ್ದ ವಿಚಾರವನ್ನು 'ಮೋಹನ ತರಂಗಿಣಿ'ಯಲ್ಲಿ ಉಲ್ಲೇಖಿಸಿದ್ದಾರೆ.[೯] ನದಿಯ ಶುಚಿತ್ವವನ್ನು ಕಾಯ್ದುಕೊಂಡು ಹೋಗುವದು ಸಾರ್ವಜನಿಕರ ಕರ್ತವ್ಯವಾಗಿದ್ದು, ಬಾಯಿ ಮುಕ್ಕಳಿಸಿದ ನೀರನ್ನು, ನೀರು ಹರಿಯುವಲ್ಲಿಂದ ಹನ್ನೆರಡು ಬಾಣಗಳಷ್ಟು ದೂರ ಉಗುಳಬೇಕಾಗಿತ್ತು. ಬಟ್ಟೆ ಒಗೆಯುವದು, ಮಲಮೂತ್ರವಿಸರ್ಜನೆ ಮುಂತಾದವುಗಳಿಂದ ನೀರು ಕಲುಪಿತಗೊಳಿಸವವರಿಗೆ ಶಿಕ್ಷೆಯಾಗುತ್ತಿತ್ತು.

ಸ್ನಾನ - ಅಭ್ಯಂಜನಗಳು ಕೇವಲ ರಾಜ ಮಹಾರಾಜರಿಗೆ, ಸಿರಿವಂತರಿಗಷ್ಟೆ ಸೀಮಿತವಾಗಿರಲಿಲ್ಲ ಬಡವರು, ದೀನದಲಿತ ಪಂಥಬೇದವಿಲ್ಲದೇ ದೇಹಶುದ್ಧಿಯತ್ತ ಗಮನಕೊಡುತ್ತಿದ್ದರು. ಬೆಲೆಬಾಳುವ ಸುಗಂಧ ತೈಲವಿಲ್ಲದಿದ್ದರೂ ಕಾಡು ಪೂರೈಸುತ್ತಿದ್ದ ಬೇರು, ತೊಗಟೆ, ಹೊನ್ನೆ ಹೂ ಬೀಜಗಳನ್ನು ಒಣಗಿಸಿ ತೈಲವನ್ನು ಪಡೆಯುತ್ತಿದ್ದರು. ತಾಮ್ರ, ಹಿತ್ತಾಳೆ ಪಾತ್ರ-ಪಡಗ ಇಲ್ಲದಿದ್ದರೆ ಮಣ್ಣಿನ ಹಂಡೆಯಲ್ಲೇ ನೀರು ಕಾಯಿಸುವರು (ಚಿತ್ರ- 1,2). ತರಗೆಲೆ ಒಣಗಿದ ಮುಳ್ಳು-ಗಂಟಿಗಳಿಗೆ ಬೆರಣಿಗೆ ಬರಗಾಲವಿರಲಿಲ್ಲ! ತೊಟ್ಟು ಕೊಬ್ಬರಿಎಣ್ಣೆ ಆಗೀಗ ಮೈಗೆ ಸವರಿಕೊಂಡಾರು! ಅಂಟವಾಳ ಅಥವಾ ಸೀಗೆಪುಡಿಗಳನ್ನು ಕಾಡು-ಬೆಟ್ಟಗಳಿಂದ ಒಟ್ಟುಮಾಡಿ, ಕುಟ್ಟಿ ಪಡೆಯುಬಹುದಿತ್ತು. ಬಡತನ ಅಶುಚಿತ್ವ ಶುಚಿತ್ವಗಳಿಗೆ ತಾಳೆ ಹಾಕುವ ಆಧುನಿಕತೆ ಆಗ ಹಣಿಕಿರಲಿಲ್ಲ! ತಾಳಗುಂದದ ಅಗ್ರಹಾರದಲ್ಲಿ ವಿದ್ಯಾರ್ಥಿಗಳಿಗೆ ಎಣ್ಣೆ-ನೀರಿನ ಸರಬರಾಜಿಗೆ ವ್ಯವಸ್ಥೆ ಇತ್ತು. ಮಹಾಮಂಡಲೇಶ್ವರ ಚಾವುಂಡರಾಯನು ಸಮ್ಮಾನದ ಮಠಿಕೆಯಲ್ಲಿ ದೀಪದ ವ್ಯವಸ್ಥೆಯೊಂದಿಗೆ ಸ್ವಾಧ್ಯಾಯಿಕರ ತೈಲಲೇಪಕ್ಕೆ ಕೊಟ್ಟದಾನವನ್ನು ಕ್ರಿ.ಶ. ೧೦೩೪ ರ ಶಾಸನವೊಂದು ಪ್ರಸ್ತಾಪಿಸುತ್ತದೆ.

ಕರ್ನಾಟಕ ಶಿಲ್ಪ ಮತ್ತು ಚಿತ್ರಕಾರರು ಸ್ನಾನದ ವಿವಿಧ ಹಂತಗಳನ್ನು ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರದಿಂದ ಎಂಟು ಕಿಲೋಮೀಟರ್ ದೂರದ ಸೊರಬ ರಸ್ತೆಯಲ್ಲಿ, ನಾಡಕಲಿಸೆ ಗ್ರಾಮದಲ್ಲಿ ಕ್ರಿ.ಶ. ೧೨೭೮ ರ ಮಲ್ಲಿಕಾರ್ಜುನ ದೇವಾಲಯವಿದೆ. ಅದರ ಹೊರಗೋಡೆಯ ಮೇಲೆ ಅನೇಕ ಭಂಗಿಗಳಲ್ಲಿ ಮಿಥುನ ಶಿಲ್ಪಗಳಿವೆ. ಇವು ಉಬ್ಬುಶಿಲ್ಪಗಳು. ಹಲವು, ಅಂದಿನ ಸಾಮಾಜಿಕ ಜೀವನವನ್ನು ಚಿತ್ರಿಸುತ್ತವೆ. ಹೆಣ್ಣುಮಕ್ಕಳು ಎರೆದುಕೊಳ್ಳುವಾಗ ಮನೆಯ ಇತರ ಹೆಂಗಳೆಯರು ನೆರವಿಗೆ

ಬರುತ್ತಾರಲ್ಲವೆ?(3).ಕಾಲುಮಣೆಯ ಮೇಲೆ ಕುಳಿತ, ದಟ್ಟ ತಲೆಗೂದಲು ಬೆಳೆಸಿ ಬಾಚಿ ಮುಡಿಕಟ್ಟಿ ಹೂಮುಡಿಯುವದು ಸಾಮಾನ್ಯವಾಗಿತ್ತಲ್ಲವೇ? ಹೀಗಾಗಿ ಅವರ ತಲೆಸ್ನಾನಕ್ಕೂ ಸಹಾಯ ನೀಡುವದು ಹೆಂಗಳೆಯರ ಪ್ರಮುಖ ಜವಾಬ್ದಾರಿ ಇರಲು ಸಾಕು! ಕಲ್ಲಿನ ಆಸನದಲ್ಲಿ ಕುಳಿತವನಿಗೆ ಒಬ್ಬಾಕೆ ನೀರೆರೆದರೆ, ಇನ್ನೊಬ್ಬಳು ಕೂದಲ ಸಿಕ್ಕು ಬಿಡಿಸುತ್ತಿರುವ ಚಿತ್ರವಿದೆ. ಉತ್ತರ ಕನ್ನಡ ಜಿಲ್ಲೆಯ ಭಟಕಳದಲ್ಲಿರುವ ಖೇತಪೈ ನಾರಾಯಣ ದೇವಾಲಯ (ಕ್ರಿ.ಶ. ೧೫೪೬)ವು, ಊರ ವೋಟಾರ ನಿಲ್ದಾಣದ ಸನಿಹದಲ್ಲೇ ಇದೆ. ದೇವಾಲಯದ ಹೊರಪೌಳಿಗಳನ್ನು ಸಾಮಾಜಿಕ ಜೀವನದ ಉಬ್ಬುಚಿತ್ರಗಳಿಂದ ತುಂಬಿಸಲಾಗಿದೆ. ಅವುಗಳಲ್ಲಿ ಎರಡು, ಸ್ನಾನದ ವಿಧಿಯನ್ನು ಪ್ರತಿನಿಧಿಸುತ್ತವೆ. ಹೆಣ್ಣೋರ್ವಳು ಸ್ನಾನ ಮುಗಿಸಿ ಕೂದಲ ನೀರನ್ನು ಹಿಂಡುತ್ತಿದ್ದಾಗ, ಇನ್ನೊಬ್ಬಾಕೆ, ಕೈಯಲ್ಲಿ ಬೈರಾಸು ಹಿಡಿದು ಅವಳಿಗೆ ಕೊಡಲು ಧಾವಿಸುತ್ತಿದ್ದಾಳೆ (4). ಇನ್ನೊಂದು ಶಿಲ್ಪದಲ್ಲಿ ಪುರುಷನೋರ್ವನು, ನೀರುಹಾಕುವದು ಹೆಂಗಸರ ಕೆಲಸ, ಅದರ ಸುಖವಷ್ಟೆ ತನಗೆ ಮೀಸಲು, ಎನ್ನುವಂತೆ ಸ್ಥಿತಪ್ರಜ್ಞನಾಗಿ ಕುಳಿತೇ ಬಿಟ್ಟಿದ್ದಾನೆ!(5). ಒಬ್ಬಾಕೆ ಚೊಂಬಿನಿಂದ ನೀರು ಅಥವಾ ಅಂಟಾಳದ ಅರ್ಕವನ್ನು ಸುರಿದರೆ, ಇನ್ನೊಬ್ಬಾಕೆ ತಲೆ ತಿಕ್ಕುತ್ತಿದ್ದಾಳೆ (6).

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವಿಯ ತ್ರಿಪುರಾಂತಕೇಶ್ವರ ದೇವಾಲಯದ ಹೊರಗೋಡೆಯ ಮೇಲೆ ಪಂಚತಂತ್ರದ ಕಥೆಗಳನ್ನು ಕಟೆದಿರುವದು ಎಲ್ಲರಿಗೂ ಪರಿಚಿತ. ಅವುಗಳ ಭಾಗವಾಗಿ ಸ್ನಾನ ಮಾಡುವ ಸ್ತ್ರೀವಿಗ್ರಹವೂ ಇದೆ. ಆದರೆ ಬಿಸಿಲು ಝಳ, ಜಡಿಮಳೆಗಳಿಂದಾಗಿ, ಶಿಲ್ಪ ತುಂಬ ಸವೆದಿದೆ. ಇದರಂತೆ ಹರಿಹರದಲ್ಲಿರುವ ಹರಿಹರೇಶ್ವರ ದೇವಾಲಯದ ಹೊರಗೋಡೆಯ ಮೇಲೆ ಮಗುವಿಗೆ ಸ್ನಾನ ಹಾಕುವ ಉಬ್ಬು ಶಿಲ್ಪವೂ ತುಂಬಾ ಸವೆದು ಹೋಗಿ ವಿವರಗಳು ಕಾಣದಾಗಿವೆ.

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಕ್ರಿ.ಶ. ಸುಮಾರು ೧೮೩೫ ರಲ್ಲಿ 'ಸೌಗಂಧಿಕಾ ಪರಿಣಯ'ವೆಂಬ ಕಲ್ಲಚ್ಚಿನ ಕೃತಿಯನ್ನು ಪ್ರಕಟಿಸಿದರು. ಇದು ಸಚಿತ್ರವಾಗಿದ್ದು ಅಂದಿನ ಸ್ನಾನ-ವಿಹಾರಗಳ ಕೆಲವು ರೇಖಾಚಿತ್ರಗಳನ್ನು ಹೊಂದಿದೆ. ಅರಸನು ಪರಿವಾರದೊಂದಿಗೆ ವನವಿಹಾರಕ್ಕೆ ಹೋದಾಗ ಶಿಬಿರ ಹೂಡಿದೆಡೆ ಸ್ನಾನದ ವ್ಯವಸ್ಥೆ ಮಾಡಿದ ಚಿತ್ರವನ್ನು ಸೇರಿಸಲಾಗಿದೆ. ಕಲ್ಲಿನ ಅಥವಾ ಇಟ್ಟಿಗೆಯ ಒಲೆ ಹೂಡಿ ದೊಡ್ಡ ಪಾತ್ರೆಯಲ್ಲಿ ನೀರಿಡಲಾಗಿದೆ. ಜೊತೆಗೆ ಬಂದ ಹೆಂಗಳೆಯರು ಅಲ್ಲಿಯ ಸರೋವರದಲ್ಲಿ ನಿಶ್ಚಿಂತೆಯಿಂದ ನೀರಿಗೆ ಇಳಿದು ಜಲಕ್ರೀಡೆಯಾಡಿದ ಸುಂದರ ದೃಶ್ಯವಿದೆ. ಒಂದರಲ್ಲಿ ಪುಟ್ಟನಾವೆಯನ್ನು ನಾರಿಯರು ನಡೆಸುತ್ತ ನೀರಾಟಕ್ಕೆ ಹೊರಟರೆ. ಇನ್ನೊಬ್ಬಳು ನೀರಿನಲ್ಲಿಯ ಜಲಸಸ್ಯ ಕಿತ್ತು ಕೇಕೆ ಹಾಕುತ್ತಿದ್ದಾಳೆ. ಮೀನಿನಂತೆ ಕೈಕಾಲು ಬಡಿದು ಈಜಲು ಮತ್ತೊಬ್ಬಳು ಯತ್ನಿಸಿದರೆ, ಮಗುದೋರ್ವಳು ಗೆಳತಿಯ; ಭುಜವೇರಿ ಆಲಾಪ ಮಾಡುತ್ತಿದ್ದಾಳೆ. ಇನ್ನೋರ್ವಳಂತೂ ಧನುಷ್ಯಾಕಾರದಲ್ಲಿ ಬಗ್ಗಿ ಕಸರತ್ತು ಮಾಡುತ್ತಲೇ ನೀರಿಗಿಳಿಯುವ ಸಾಹಸ ನಡೆಸಿದ್ದಾಳೆ!

ಶ್ರಮವಹಿಸಿದಲ್ಲಿ ಇನ್ನೆಷ್ಟೋ ಶಿಲ್ಪಗಳಲ್ಲಿ ಹಳೆಯ ದೇವಸ್ಥಾನಗಳಲ್ಲಿ ಈ ಮೊದಲು ಗಮನಿಸದ ಎಡೆಗಳಲ್ಲಿ ಸ್ನಾನ ಅಭ್ಯಂಜನದ, ಜಲಕೇಳಿಯ ದೃಶ್ಯಗಳು ಕಾಣಬಹುದಾದ ಸಂಭವವಿದೆ! ದೈನಂದಿನ ಜೀವನದ ಅತ್ಯವಶ್ಯ ಕ್ರಮವನ್ನು ನಮ್ಮ ಶಿಲ್ಪವರ್ಯರು ಗಮನಿಸಿಯೇ ಇದ್ದಾರೆ.



1. ಸ್ನಾನಕ್ಕೆ ನೀರು ಸಂಗ್ರಹಣೆ



2. ಕಾಯುತ್ತಿರುವ ನೀರು



3.ಮಹಿಳೆಯರ ವಾರದ ಸ್ನಾನ



4. ನೀರು ಹೀರುವ ಪಂಚೆ



5. ಗೃಹಸ್ಥನ ಅಭ್ಯಂಜನ



6. ಕೂದಲಿನ ಸ್ವಚ್ಛತೆ

## ಆಧಾರ ಸೂಚಿ


೧. ಶ್ರೀ ಗೊಂದೇಕರ್ ಜಿ.ಕೆ. (ಸಂ) ಮಾನಸೋಲ್ಲಾಸ ಆಫ್. ಕಿಂಗ್ ಸೋಮೇಶ್ವರ (ಸಂಸ್ಕೃತ) ಸಂಪುಟ II ಬಡೋದಾ ೧೯೩೯ : ಸ್ನಾನಭೋಗ ; ಪದ್ಯ ೯೨೭-೯೫೭ (ಮಾನ)

೨. ಉಪರೋಕ್ತ : ಪದ್ಯ -೯೩೩-೪೪

೩. ಸಿವೆಲ್‌ರಾಬರ್ಟ್ ಮರೆತುಹೋಗಿರುವ ಸಾಮ್ರಾಜ್ಯ- ವಿಜಯನಗರ : ಕನ್ನಡ ಅನುವಾದ ಡಾ|| ಸದಾನಂದ ಕನವಳ್ಳಿ ಹಂಪಿ ೧೯೯೨, ಪು. ೨೬೯-೭೦

೪. ಶೇಷಯ್ಯಂಗಾರ್ ಎಚ್. (ಸಂ). ಚಾವುಂಡರಾಯನ ಲೋಕೋಪಕಾರಂ ಮದ್ರಾಸ ೧೯೫೦. ಅಧ್ಯಾಯ-೭, ಪದ್ಯ-೭-೨೭

೫. ಮಾನಸೋಲ್ಲಾಸ : ಉಪರೋಕ್ತ ಪದ್ಯ ೯೪೧.

೬. ಶಿವತತ್ವ ರತ್ನಾಕರ

೭. ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ

೮. ಕನ್ನಡ ಕಾವ್ಯಗಳು

೯. ಕನಕದಾಸರ ಮೋಹನತರಂಗಿಣಿ


★★★

## ೩. ಊಟ - ಉಣಿಸಿನ ಕತೆ

ಹಲವಾರು ಶಕ್ತಿಗಳು ನಮ್ಮ ದೇಶವನ್ನು ಛಿದ್ರಗೊಳಿಸುತ್ತಿವೆ ಎಂಬ ದೂರು ಕೇಳಿಬರುತ್ತಿದೆ. ಭಾವೈಕ್ಯವನ್ನು ಸಾಧಿಸುವ ಸೂತ್ರಗಳಾವುವು? ಅವನ್ನು ಹೇಗೆ ಆಚರಣೆಯಲ್ಲಿ ತರಬೇಕು ? ಎಂಬುದರ ಬಗ್ಗೆ ದೇಶಪ್ರೇಮಿಗಳು, ವಿದ್ವಾಂಸರು, ರಾಜಕಾರಣಿಗಳು, ಶಿಕ್ಷಣತಜ್ಞರು ತಲೆಕೆಡಿಸಿಕೊಳ್ಳುವ ಕಾಲ ಬಂದಿದೆ. ಆದರೆ ಅನ್ನ ಸೂತ್ರದಿಂದ ದೇಶವನ್ನು ಏಕತ್ರಿತವಾಗಿಟ್ಟು ಬೆಳೆಸುಬಹುದೆಂಬ ಸರಳ ಅಥವಾ ಗಟ್ಟಿ ಉಪಾಯ ಹೆಚ್ಚಿನವರಿಗೆ ಹೊಳೆದಂತಿಲ್ಲ! ರಾಜ್ಯರಾಜ್ಯಗಳ ಜನಾಂಗಗಳಲ್ಲಿ ಒಮ್ಮತವಿರದೇ ಹೋಗಬಹುದು ಆದರೆ ಪರಸ್ಪರರ ತಿಂಡಿ ತಿನಸುಗಳನ್ನು ನಾವು ಮನಸಾರೆ ಮೆಚ್ಚಿಕೊಂಡಿದ್ದೇವೆ. ಬಂಗಾಲಿಗಳ ರಸಗುಲ್ಲ ಗುಜರಾಥಿಗಳ ಢೋಕಳಾ, ಮಹಾರಾಷ್ಟ್ರದ ಬಟಾಟಾವಡಾ (ಬೊಂಬೇ ಬೋಂಡ), ಪಂಜಾಬಿಗಳ ತಂದೂರಿ, ಕಾಶ್ಮೀರದ ಕಬಾಬ್ ಮತ್ತು ದಕ್ಷಿಣದ ಇಡ್ಲಿ ದೋಸೆಗಳು ಸೀಮಾತೀತವಾಗಿ ದೇಶದಾದ್ಯಂತ ಮೆರೆಯುತ್ತಿವೆ. ಬರಿಯ ಕಾಲು ಶತಕದಲ್ಲಿ ಥಾಲಿಮೀಲ್ಸ್ ಅಥವಾ ಪ್ಲೇಟ್ ಮೀಲ್ಸ ಕಾಣಿಸಿಕೊಂಡು, ಶ್ರೀನಗರದಿಂದ ಕನ್ಯಾಕುಮಾರಿ, ಮುಂಬಯಿಯಿಂದ ಕಲಕತ್ತಾವರೆಗೆ ಲಭ್ಯವಾಗಿ ಪೂರಿ ಅಥವಾ ಚಪಾತಿ ಮತ್ತು ಅನ್ನವನ್ನು ಮೇಳವಿಸಿಕೊಂಡು, ಭಾರತೀಯತೆಯನ್ನು ಎತ್ತಿ ಹಿಡಿದಿದೆ! ಅಂತರ್ ರಾಜ್ಯ ಕೋಟಲೆಗಳು ಹಲವಾರು ಇದ್ದರೂ, ಜಿಹ್ವಾರುಚಿ ನಮ್ಮೆಲ್ಲರನ್ನು ಬೆಸುಗೆ ಹಾಕಿಡುತ್ತದೆ, ಎನ್ನುವುದು ಸತ್ಯ.

ಕರ್ನಾಟಕದ ಮುಖ್ಯ ತಿಂಡಿ ಯಾವುದು? ಎಂದು ಕೇಳಿದರೆ ಫಕ್ಕನೆ ಹೇಳಲು ಆಗಲಿಕ್ಕಿಲ್ಲ. ಆಯಾ ಜಿಲ್ಲೆಯವರು ಒಂದೊಂದು ಹೆಸರು ಹೇಳಿಯಾರು! ಹೀಗಿದೆ, ಏಕತೆಯಲ್ಲಿಯ ನಮ್ಮ ವೈವಿಧ್ಯ. ಹೇಳಿ ಕೇಳಿ ನಾವು ಕನ್ನಡಿಗರು; ಭೋಜನ ಪ್ರಿಯರು 'ಭೋಜನ ಸುಖರತ'ರು. ಈ ಬಿರುದನ್ನು ದಯಪಾಲಿಸಿದವರು ಕರ್ನಾಟಕ ಏಕೀಕರಣದ ಚಳವಳಿಯಲ್ಲಿ ಮಹತ್ವದ ಪಾತ್ರವಹಿಸಿದ ದಿವಂಗತ ಕೌಜಲಗಿ ಹನುಮಂತರಾಯರು. ಕನ್ನಡನಾಡು, ಬೊಂಬಾಯಿ, ಮದ್ರಾಸು ಪ್ರಾಂತಗಳು, ಮೈಸೂರು ಮತ್ತು ನಿಜಾಮ ಸಂಸ್ಥಾನಗಳಲ್ಲಿ ಹರಿದು ಹಂಚಿ ಹೋಗಿದ್ದಾಗ, ನಮ್ಮ ನಾಡಿನ ತಿಂಡಿ-ತಿನಸುಗಳ ವೈಭವದ ಕುರಿತು ತುಂಬಿದ ಮನಸ್ಸಿನಿಂದ ಹಾಡಿದ್ದರು.

ಭೋಜನ ಸುಖರತ ಈ ಕಾಡು।
ಎನ್ನದು ಈ ಕನ್ನಡ ನಾಡು

ಮಂಗಳೂರಿನ ಮತ್ಸ್ಯಾಹಾರಾ।
ಕೊಡಗಿನ ಕಟು ಕಾಫಿ ನೀರಾ।

ಮೈಸೂರಿನ ಇಡ್ಲಿ ದ್ವಾಸಿ।
ಬಳ್ಳಾರಿಯ ಅನ್ನದ ರಾಸಿ।

ಧಾರವಾಡದ ಅವಲಕ್ಕಿ।
ಕಾರವಾರದ ತಾಳಿಯಚಕ್ಕಿ
ಬೆಳಗಾವಿಯಲಿ ಬರುಬುರಿ। ಕಲಬುರ್ಗಿಯಲಿ ಕಂದೂರಿ

ಬಿಜಾಪುರದ ಒಣಒಣರೊಟ್ಟಿ।
ನೆನಪಾದರ ಉರಿತದ ಹೊಟ್ಟೆ।

ಅಂಬೋಡಿ ಉಪ್ಪಿಟ್ಟಿನ ದೇಶಾ।
ನಾನಾವಿಧ ತಿಂಡಿಯ ಕೋಶಾ

ಕನ್ನಡಿಗರ ಮೋಹದ ಪಾಶಾ।
ಹೆರೆತುಪ್ಪ ಕಡುಬಿನ ಬೀಡು।
ಎನ್ನದು ಈ ಕನ್ನಡ ನಾಡು.

ನಮ್ಮವರ ಜಿಹ್ವಾಸಂಸ್ಕಾರದ ಕತೆ ಎಷ್ಟು ಪ್ರಾಚೀನವೋ ಅಷ್ಟು ವೈವಿಧ್ಯಮಯ, ಎಷ್ಟು ರುಚಿಕರವೋ ಅಷ್ಟೆ ರಂಜಕವಾಗಿದೆ. ಇಡ್ಲಿಯ ಇತಿಹಾಸ, ವಡ್ಡಾರಾಧನೆಯಷ್ಟು ಹಿಂದಿನದು. ಅತ್ಯಾಧುನಿಕವೆಂದು ನಂಬಿ, ಮೆದ್ದು ಚಪ್ಪರಿಸುವ ಆಮ್ರಖಂಡ, ಕೋಫ್ತ, ಕಬಾಬ್‌ಗಳು ೮ ರಿಂದ ೧೦ ಶತಮಾನಗಳಷ್ಟು ಹಿಂದಿನ ಕನ್ನಡಿಗರಿಗೆ ಗೊತ್ತಿದ್ದವು, ಎಂಬುದು ಕೂತೂಹಲಕಾರಿ.

ಆಹಾರವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರು, ಅದನ್ನು 'ಸೂಪಶಾಸ್ತ್ರ'ವೆಂದು ಕರೆದರು. ಚಾವುಂಡರಾಯನ 'ಲೋಕೋಪಕಾರಂ' ಎಂಬ ಕನ್ನಡಕೋಶ (೧೧ನೇ ಶತಕ) ಹಾಗೂ ಕೆಳದಿಯ ಬಸವಪ್ಪ ನಾಯಕನ 'ಶಿವತತ್ವ ರತ್ನಕಾರ' ವೆಂಬ ಇನ್ನೊಂದು ಸಂಸ್ಕೃತ ಕೋಶ (೧೭ನೇ ಶತಕ)ಗಳಲ್ಲಿ ಸೂಪಶಾಸ್ತ್ರದ ಅಧ್ಯಾಯಗಳು ಇವೆ. ಕನ್ನಡದಲ್ಲಿ ಗ್ರಂಥ ರೂಪದಲ್ಲಿ ದೊರೆಯುವ ಮೂರನೇ ಮಂಗರಸನ ಸೂಪಶಾಸ್ತ್ರ, ಅಪೂರ್ಣವಿದ್ದರೂ ಅಪೂರ್ವ ಕೃತಿ. ಇವು ಹಿಂದೆ ಕರ್ನಾಟಕದಲ್ಲಿ ಪ್ರಚಲಿತವಿದ್ದ ಆಹಾರ ಪದ್ಧತಿ, ಪಾಕ ಮಾಡುವ ಕ್ರಮ. ಸಸ್ಯಾಹಾರ ಹಾಗೂ ಸಾಮಿಷಗಳ ಪ್ರಕಾರಗಳನ್ನು, ಪರಿಚಯಿಸುತ್ತವೆ. ಅಪರೂಪದ, ಈಗ ಕಣ್ಮರೆಯಾಗಿರುವ ಹಲವಾರು ಪಾಕ ಪ್ರಕಾರಗಳನ್ನು, ಪಾನೀಯಗಳನ್ನು, ಕಾಯ್ದಿರಿಸುವ ಕ್ರಮಗಳನ್ನು ನಿರೂಪಿಸುತ್ತವೆ. ಮುಖ್ಯ ಆಹಾರ, ವ್ಯಂಜನಗಳು ಮತ್ತು ಉಣಿಸಿನ ಕೆಲ ವೈವಿಧ್ಯಗಳನ್ನು ಇದರಿಂದ ಅರಿತುಕೊಳ್ಳಬಹುದು. 'ಅನ್ನಂ ವೈ ಪ್ರಾಣಃ' ಎಂಬುದು ಸಾಮಾನ್ಯ ಆಹಾರಕ್ಕೆ ಅನ್ವಯಿಸಿದ್ದರೂ ಅಕ್ಕಿಯ ಅನ್ನ, ಮುಖ್ಯ ಆಹಾರವಿತ್ತು. ಶಾಸನಗಳು, ಕಾವ್ಯಗಳು

ಭತ್ತದ ಹೊಲಗಳ ವರ್ಣನೆಯಿಂದ ತುಂಬಿ ತುಳುಕುತ್ತಿವೆ. ಅಕ್ಕಿಯಲ್ಲದೆ ಜೋಳ, ನವಣೆ, ರಾಗಿಗಳೂ ಇದ್ದು, ಸರ್ವಜ್ಞನು "ಜೋಳವನ್ನು ತಿಂಬುವನು ತೋಳದಂತಾಗುವನು, ನವಣೆಯನು ತಿಂಬುವನು ಹವಣಾಗಿ ಇರುತಿಹನು, ರಾಗಿಯನು ಉಂಬುವನು ನಿರೋಗಿಯೆಂದೆನಿಸುವನು" ಎಂದು ಈ ಧಾನ್ಯಗಳ ಬಗ್ಗೆ ತನ್ನ ನಿರ್ಣಯವನ್ನು ಕೊಟ್ಟು ಬಿಟ್ಟವನು. ಕನಕದಾಸರು, ದಲಿತರ ಧಾನ್ಯವೆನಿಸಿಕೊಂಡ ರಾಗಿಯ ಬಗ್ಗೆ ರಾಮಧಾನ್ಯ ಚರಿತವೆಂಬ ಕಿರುಗಬ್ಬವನ್ನೆ ಬರೆದಿದ್ದಾರೆ. ರಾಘವನಿಗೆ ಪ್ರಿಯವಾದದ್ದು ರಾಗಿಯಾಯಿತಂತೆ!

ಅನ್ನ ಮಾಡುವ ಎರಡು ವಿಧಾನಗಳು ಗೊತ್ತಿದ್ದವು. ತಿಳಿಯನ್ನು ಬಸಿದು ಮಾಡುವುದು ಮತ್ತು ನೀರನ್ನು ಇಂಗಿಸಿ ಮಾಡುವದು. ಮಣ್ಣಿನ, ಕಬ್ಬಿಣದ ಮತ್ತು ತಾಮ್ರದ ಪಾತ್ರೆಗಳಲ್ಲಿ ಬೇಯಿಸಿದ ಅನ್ನ ಆರೋಗ್ಯಕಾರಿ. ಮಂಗರಸ, ಕಟ್ನೋಗರಗಳು ಅಥವಾ ಭಾತುಗಳ ೧೫ ಪ್ರಕಾರಗಳನ್ನು ಮಾಡುವ ರೀತಿಯನ್ನು ವಿವರಿಸಿದ್ದಾನೆ.

**ವ್ಯಂಜನಗಳು :** ಅನ್ನ ಬಸಿದ ತಿಳಿಯನ್ನು ಚೆಲ್ಲುತ್ತಿರಲಿಲ್ಲ. ಅದಕ್ಕೆ ಸಂಬಾರ ಪದಾರ್ಥಗಳು, ಮಜ್ಜಿಗೆ ಸೇರಿಸಿ ಒಗ್ಗರಣೆ ಹಾಕಿ ಸಾರು ಮಾಡುತ್ತಿದ್ದರು. ತೊಗರಿ ಬೇಳೆಯಲ್ಲದೇ ಎಲ್ಲ ದ್ವಿದಳ ಧಾನ್ಯಗಳನ್ನು ಹುಳಿಗೆ ಬಳಸುತ್ತಿದ್ದರು. ಅದೆಷ್ಟೋ ಪ್ರಕಾರದ ಸೊಪ್ಪುಗಳು, ಗಡ್ಡೆಗಳು, ಕುಂಬಳ, ಬಾಳೆ ಹೂಗಳು, ವಿವಿಧ ಕಾಳು, ಕಡಲೆ, ಹಲಸು, ಬಾಳೆ ದಿಂಡುಗಳನ್ನು ಪಲ್ಯಕ್ಕೆ ಬಳಸುತ್ತಿದ್ದರು. ಹಲಸಿನ ಕಾಯಿ, ಬಾಳೆಕಾಯಿ, ಹತ್ತಾರು ವೈವಿಧ್ಯಗಳನ್ನು ಮಂಗರಸನು ವರ್ಣಿಸಿದ್ದಾನೆ.

ಬದನೆಕಾಯಿಯ ಪಲ್ಯದ ೩೦ ಪ್ರಕಾರಗಳನ್ನು ಮಂಗರಸನು ಬಣ್ಣಿಸಿದ್ದಾನೆ. ನೆಲ್ಲಿ, ಬದನೆಕಾಯಿ, ಮೊಸರುಗಾಯಿ, ಹಾಲುಬದನೆ, ಎಣ್ಣೆಗಾಯಿ ತುಂಬುಗಾಯಿ, ಬೆಣ್ಣೆಗಾಯಿ, ಹೂರಣಬದನೆ, ಸಾಸುವೆಬದನೆ, ಶಾಕಬದನೆ, ಶೂಲ್ಯಕ, ಬಟ್ಟತ್ರಿಕ, ತುಳುವ ಬದನೆ, ತಾಳಿದ ಇತ್ಯಾದಿ. ನೆಲ್ಲಿಕಾಯಿಯ ವಿವಿಧ ಉಪಯೋಗ ವಿಸ್ಮಯಗೊಳಿಸುವಂಥದು. ನೆಲ್ಲಿಯ ಭಾತು, ಸಂಡಿಗೆ, ಗುಳಂಬ, (ಗುಡಪಾಕ) ಬೆಲ್ಲದ ನೆಲ್ಲಿ, ಇತ್ಯಾದಿ ಮೆಣಸು, ಮೊಸರು, ಹುಣಸಿಗೊಜ್ಜುಗಳಿಗೆ ನೆಲ್ಲಿಕಾಯಿ ಸೇರಿಸಿ ಅನೇಕ ವ್ಯಂಜನ ತಯಾರಿಸುತ್ತಿದ್ದರು. ಈಗ ವಿಟಮಿನ್ "ಸಿ" ವಿಪುಲವಾಗಿದೆಯೆಂದು ಗುರುತಿಸಲ್ಪಟ್ಟ ನೆಲ್ಲಿಕಾಯಿಯ ಉಪಯುಕ್ತತೆಯನ್ನು ಹಿಂದಿನವರು ಚೆನ್ನಾಗಿ ಅರಿತಿದ್ದರೆಂಬುದು ಸ್ಪಷ್ಟ!

**ಸಾಮಿಷಾಹಾರ :** ಇತ್ತೀಚೆಗೆ ಆಹಾರದ ಮಟ್ಟಿಗೆ ಹಿಂದಿನ ಮಡಿವಂತಿಕೆ ಕಡಿಮೆಯಾಗಿ ಮಾಂಸಾಹಾರ ಹೆಚ್ಚೆಚ್ಚು ಜನಪ್ರಿಯವಾಗುತ್ತಿದೆ. ಕನ್ನಡ ನಾಡಿನಲ್ಲಿ ನೂರಾರು ವರ್ಷಗಳ ಹಿಂದೆಯೇ ಸೂಪ್, ಕೋಫ್ತಾ, ಕಬಾಬ್, ಸ್ಟೇಕ್ಸ ಮತ್ತು ಬಾರ್ಬೆಕ್ಯು ಮುಂತಾದವು ಪರಿಚಿತವಿದ್ದವು. ಮೇದಸ್ಸು, ಅಸ್ಥಿ ಸಹಿತ ನೀರನ್ನು ಕುದಿಸಿ, ಸೂಪ್ ಮಾಡುತ್ತಿದ್ದರು. ಇಂಗ್ಲೀಷ್ ಮತ್ತು ಸಂಸ್ಕೃತದಲ್ಲಿ ಸಮಾನಾರ್ಥವಾದ 'ಸೂಪ'ಶಬ್ದವನ್ನು ಸಾಮಾನ್ಯವಾಗಿ ಅಡಿಗೆಗೂ ಉಪಯೋಗಿಸುತ್ತಿದ್ದರು. ಬೇರೆ ಬೇರೆ ಮಾಂಸವನ್ನು ಸೂಕ್ಷ್ಮ ಚೂರು ಮಾಡಿ ಮಸಾಲೆ ಬೆರೆಸಿ, ಕಡಲೆ ಅಥವಾ ಮೊಳಕೆಯೊಡೆದ ಹೆಸರನ್ನು ನೆನೆಸಿ, ರುಬ್ಬಿ ಅದರಲ್ಲಿ ಖೀಮಾದ

ಉಂಡೆಗಳನ್ನು ಅದ್ದಿ ಕರಿದು ಕೋಫ್ತಾ ತಯಾರಿಸುತ್ತಿದ್ದರು. ಈಗಿನ ಸೀಖ್ ಕಬಾಬ್ ಮಾಂಸದ ಉಂಡೆಗಳಿಗೆ ಮಸಾಲೆ ತುಂಬಿ, ಶೂಲಕ್ಕೆ ಚುಚ್ಚಿ ಕೆಂಡದ ಮೇಲೆ ಹುರಿದದ್ದು ಚಾಲಕ್ಯರ ಕಾಲಕ್ಕೆ ಜನಪ್ರಿಯವಾಗಿತ್ತು. ಸ್ಟೇಕ್ಸ್‌ಗಳಿಗೆ 'ಶುಂಠಕ' ಅಥವಾ 'ಸೊಂಟಿಗೆ' ಎನ್ನುತ್ತಿದ್ದರು. ವರಾಹದ ಮಾಂಸಖಂಡಗಳಿಂದ ತೆಳ್ಳಗಿನ ಸ್ಲಾಯಿಸ್ ಅಥವಾ 'ಚಕ್ಕಲಿಕೆಗಳನ್ನು ತೆಗೆದು ಬೇಯಿಸಿ, ಹುರಿಯಲು, ವ್ಯಂಜನ ಮಾಡಲು ಅಥವಾ ಮೊಸರಿನಲ್ಲಿ ಮಸಾಲೆ ಹಾಕಿ ಸೇವಿಸಲು ಬಳಸುತ್ತಿದ್ದರು. ಕುಮಾರವ್ಯಾಸನು ಸಮಾಕಾಲೀನ ಕ್ಷತ್ರಿಯರ ಸಾಮಿಷಾಹಾರದ ಪ್ರಕಾರಗಳನ್ನು ಬಾಣಸಿಗ ಭೀಮನು ಅಡುತ್ತಿದುದನ್ನು ಚೆನ್ನಾಗಿ ಚಿತ್ರಿಸಿದ್ದಾನೆ.

ತಿಂಡಿಗಳು : ಉತ್ತಮ ಗೋಧಿ, ಹಾಲು - ಹೈನು, ಹಣ್ಣು ಹಂಪಲಗಳು, ಧಾರಾಳವಾಗಿದ್ದ ದಿನಗಳಲ್ಲಿ ಪಕ್ವಾನ್ನಗಳ ವೈವಿಧ್ಯ ಇಷ್ಟೇ ಎಂದು ಹೇಳಲಿಕ್ಕುಂಟೆ? ಕೆಲವು ತಿಂಡಿಗಳಂತೂ ನಾಮಶೇಷವಾಗಿ ಹೋಗಿವೆ. ನೀರ್ವತ್ತಿಗೆ, ಘೃತಪೂರ, ಸವಡುರೊಟ್ಟಿ, ಹಾಲುಗಾರಿಗೆ, ಚಿಲುಮುರಿ, ಸಮುದ್ರಫೇನ, ನಕ್ಷತ್ರಫೇನ, ಬಾಬರ, ಚಂದ್ರಮಂಡಲ, ಸುಧಾಪಿಂಡ, ಗುಜ್ಜರಿವೇಣಿ ಮುಂತಾದವು, ಗತವೈಭವದ ಕುರುಹಾಗಿ ನಿಂತಿವೆ. ಫೇಣಿ, ಹೋಳಿಗೆ, ಪಾಯಸ, ಕಡುಬುಗಳ ಅದೆಷ್ಟೋ ಪ್ರಕಾರಗಳಿದ್ದವು. 'ಬಾಬರ'ವನ್ನು ಮೈದಾಹಿಟ್ಟನ್ನು ಹಾಲಿನಲ್ಲಿ ಕಲಿಸಿ, ಕೆನೆ ಮೊಸರು ಸೇರಿಸಿ, ಉಂಡೆ ಮಾಡಿ, ತುಪ್ಪದಲ್ಲಿ ಕರಿದು, ಸಕ್ಕರೆ ಪಾಕದಲ್ಲಿ ಸೇರಿಸುತ್ತಿದ್ದರು. ಈಗಿನ ಜಾಂಗೀರು ಅಂದಿನವರಿಗೆ ಅಮೃತವಲ್ಲರಿ, ಮತ್ತು ದೂದ್ ಪೇಡ, ಆಗಿನ 'ಪೀಯೂಷಪಿಂಡ'ವಾಗಿತ್ತು. ಮಾವಿನಹಣ್ಣಿನ ತಿರುಳನ್ನು ಶ್ರೀಖಂಡಕ್ಕೆ ಸೇರಿಸಿದ ಅಮ್ರಖಂಡ ಈಗಷ್ಟೇ ಇಲ್ಲಿ ಜನಪ್ರಿಯವಾದರೆ ಐದು ಶತಮಾನಗಳ ಹಿಂದೆ ಇದು ಕನ್ನಡಿಗರ "ಚೂತಾಮ್ರದಧಿ" ಯಾಗಿತ್ತು. ಶ್ರೀಖಂಡಕ್ಕೆ "ಶಿಖರಿಣೀ" ಎಂದು ಸೋಮೇಶ್ವರನು ಕರೆದರೆ, ಮಂಗರಸನು "ರಸಾಲದಧಿ" ಎಂದಿದ್ದಾನೆ. ಬರಿ ಮನೆಯ ತಿಂಡಿಗಳಿಂದ ತೃಪ್ತರಾಗದ ರಸಿಕರು ಆಗೀಗ ಮಿಠಾಯಿ ಅಂಗಡಿಗಳಿಗೆ ಹೋಗಿಬರುತ್ತಿದ್ದರು. ಆ ಅಂಗಡಿಯಲ್ಲಿ ಮಾರುವ ತಿಂಡಿಗಳು ಕಡಿಮೆ ಬೆಡಗಿನವೇ?

ಕರಜಿಗೆ ಕಾಯತಿರಸವುದ್ದಿನೊಡೆಯು
ಹಿಮಕರನಂತೆ ರಾಜಿಸುವ ಇಡ್ಡಲಿಗೆ ಎಳ್ಳುಂಡೆ
ತರಣಿ ಮಂಡಲದಂ ತೆಸೆವ ಒಬ್ಬಟ್ಟು ಗಾರಗಿಯ ಚಕ್ಕಲಿ ಸೇವಗೆ
ಹೊರೆಯ ಪೇಣಿಯು, ಮನೋಹರ ದುಂಡೆ, ಅರಗು, ಸಕ್ಕರೆ ಬುರುಡೆ
ಹಾಲುಂಡಲಿಗೆಯು, ಸ್ವಾದಿಸಲಮೃತ ಸರಳಿನಿಂ ನಿರ್ಮಿಸಿದ
ಲತೆಯಂತೆ ಜಿಲ್ಲಬಿಯ ಅಂಗಡಿಗಳೆಸೆದವು

ಕರಜಿಗೆಯ ಕಾಯಿ, ಅತಿರಸ, ಉದ್ದಿನೊಡೆ ಚಂದ್ರನಂತೆ ಹೊಳೆಯುವ ಇಡ್ಡಲಿಗೆ ಎಳ್ಳುಂಡೆ, ಸೂರ್ಯಮಂಡಲದಂತೆ ಹೊಳೆಯುವ ಒಬ್ಬಟ್ಟು (ಹೂರಣ ಹೋಳಿಗೆ) ಗಾರಿಗೆ, ಚಕ್ಕಲಿ, ಸೇವಗೆ. ಫೇಣಿ (ಚಿರೋಟಿಯ) ಹೊರೆ, ಬೂಂದಿಲಾಡು, ಅರಗು, ಸಕ್ಕರೆಬುರುಡೆ,

ಹಾಲುಂಡೆ (ದೂದ್‌ಪೇಡ) ಅಮೃತ ಸರಳಿನಿಂದ ಮಾಡಿದಂತಹ ಜಿಲೇಬಿಗಳು ಮಿಠಾಯಿ ಅಂಗಡಿಗಳಲ್ಲಿ ಶೋಭಿಸುತ್ತಿದ್ದವು.

**ಹಣ್ಣುಗಳು :** ಹಣ್ಣುಗಳ ರಾಜ ಮಾವಿನ ಬಗ್ಗೆ ಪಂಪನ ಉದ್ಗಾರಗಳು ಕನ್ನಡಿಗರಿಗೆ ಚಿರಪರಿಚಿತ, ಅದರ ಹಲ ಪ್ರಕಾರಗಳನ್ನು ಕಸಿ ಮಾಡಿ ಪಡೆಯುತ್ತಿದ್ದರು. ಪೇರಲ, ನೇರಳೆ, ಹಲಸು, ದಾಳಿಂಬ, ದ್ರಾಕ್ಷಿ, ಬಾಳೆ, ಕಿತ್ತೀಳೆ ಹಣ್ಣುಗಳ ಹಲವಾರು ಜಾತಿಗಳಿದ್ದವು. ಫ್ರುಟ್ ಸ್ಟಾಲ್ ಅಥವಾ ಪಣ್‌ಪಸರಗಳು ಪೇಟೆಗಳಲ್ಲಿ ಕಂಡು ಬರುತ್ತಿದ್ದವು. ಕನಕದಾಸರು ಕಂಡ ವಿಜಯನಗರದಲ್ಲಿಯ ಹಣ್ಣಿನ ಪಸರಗಳಲ್ಲಿ

ಉತ್ತತ್ತೆ, ಖರ್ಜೂರ, ದ್ರಾಕ್ಷಿ, ಸಕ್ಕರೆ ಬೆಲ್ಲ
ಮೆತ್ತೈಸಿದ ಕಾಯಭಾಗ
ಒತ್ತದೆ ಕಳಿತ ಸಮಸ್ತ ಹಣ್ಣುಗಳನ್ನು ಇತ್ತೆರದಲಿ

ಮಾರುತ್ತಿದ್ದರು. ಅಂದರೆ ಡ್ರೈಫ್ರೂಟ್ ಅಥವಾ 'ಸುಕಾಮೇವಾ' ದೊಂದಿಗೆ ಒತ್ತಿ ಹಣ್ಣು ಮಾಡದೆ ಮರದಲ್ಲೇ ಹಣ್ಣಾದ ಫಲಗಳನ್ನು ಪೇಟೆಯ ಎರಡೂ ಕಡೆ ಕಾಣಬಹುದಾಗಿತ್ತು.

**ಪಾನೀಯಗಳು :** ನೀರನ್ನು ಸೋಸಿ, ಫಿಲ್ಟರ್ ಮಾಡಿ, ಅವಶ್ಯವಿದ್ದರೆ ಕಾಯಿಸಿ ಶೈತ್ಯೀಕರಿಸಿ ಇಡುತ್ತಿದ್ದರು. ನೆಲಮಾಳಿಗೆಗಳಲ್ಲಿ, ಮಣ್ಣಿನ ಮಡಕೆಗಳಲ್ಲಿ ಗಾಳಿ ಬೀಸಿ ಬೀಸಿ ತಣ್ಣಗಿರಿಸಿದ ನೀರನ್ನು ಹಲವಾರು ಬಗೆಯ ಸುವಾಸನೆ, ಲಾವಂಚದ ಬೇರು ಬೆರಿಸಿ, ಪಾನೀಯಗಳಿಗೆ ಬಳಸುತ್ತಿದ್ದರು. ಮಾವು, ದಾಳಿಂಬ, ಬೇಲ, ಹಲಸು, ಖರ್ಜೂರ, ನಿಂಬೆ, ಕಿತ್ತಳೆ, ತಿರುಳಿನ ಜ್ಯೂಸ್ (ರಸ) ತೆಗೆದು ಕಾದಿರಿಸುತ್ತಿದ್ದರು. ಟಂಕಣಕಾರ, ಮುತ್ತಗದ ಹೂ, ಸೈಂದವ ಲವಣಗಳನ್ನು ಆಯಾ ಹಣ್ಣುಗಳಿಗೆ ಬೆರೆಸಿ, ಬಿಸಿಲಲ್ಲಿರಿಸಿ, ರಸಗಳನ್ನು ಪಡೆಯುತ್ತಿದ್ದರು. ಹೊಸ ಬೆಲ್ಲದ ಪಾಕ, ಮಾವಿನಕಾಯಿಯ ಚೂರ್ಣ, ಲೋಳಸರದ ತಿರುಳು, ಮೊದಲಾದವನ್ನು ಪಾನಕಕ್ಕೆ ಬಳಸಿದಂತೆ, ಅಕ್ಕಿ ತೊಳೆದ ನೀರು, ಮಜ್ಜಿಗೆಯ ಪ್ರಕಾರಗಳು ಮತ್ತು ಸೊಪ್ಪು ಬೇಯಿಸಿದ ಸೂಪ್‌ಗಳಿಂದಲೂ ಪೇಯಗಳನ್ನು ಮಾಡುತ್ತಿದ್ದರು. ಸಂಪಿಗೆ, ಮಲ್ಲಿಗೆ, ಪಾದರಿ, ಕೇದಗೆ, ಸೇವಂತಿ ಹೂವುಗಳನ್ನು ಸುವಾಸನೆಗೆ ಬಳಸುತ್ತಿದ್ದರು. ಕಬ್ಬಿನರಸ, ಬೆಲ್ಲ, ಹುಣಿಸೆಯ ಎಸೆನ್ಸ್ ತೆಗೆದಿಡುತ್ತಿದ್ದರು.

**ಕಾಯ್ದಿರಿಸಿದ ಆಹಾರ :** ತುಳಸಿ ಎಲೆ, ಮಾದಳದ ಎಲೆ ಹಾಕಿ ಕುದಿಸಿದ ನೀರಿನಲ್ಲಿ ಅನ್ನಮಾಡಿ ಮೊಸರೊಳಗೆ ಕಲಸಿಟ್ಟು ಹೊಸ ಮಡಕೆಯಲ್ಲಿ ಅನೇಕ ದಿನ ಕಾಯ್ದಿರಿಸಿದಂತೆ, ಪಾಯಸವನ್ನು ಮಾಡಿ ಮಡಕೆಯನ್ನು ತಣ್ಣೀರಿನಲ್ಲಿ ಮುಳುಗಿಸಿಟ್ಟು ಅನೇಕ ದಿನ ಇರುವಂತೆ ಮಾಡುತ್ತಿದ್ದರು.

**ಕೃತ್ರಿಮ ಹಾಲು, ಮೊಸರು, ತುಪ್ಪ :** ಕಡಲೆ ಬೇಳೆ ಮತ್ತು ಶುಂಠಿಯನ್ನು ಅರೆದು ಹಾಲಿನಲ್ಲಿ ಹಾಕಿ, ಕಾಸಿ ಗಟ್ಟಿ ಹಾಲು ಪಡೆದಂತೆ, ತೆಂಗಿನಹಾಲು, ಪಿಪ್ಪಲಿ ಸೇರಿಸಿ ರುಬ್ಬಿ,

ಸೋಸಿ, ಕೃತ್ರಿಮ ಹಾಲು ಪಡೆಯುತ್ತಿದ್ದರು. ಬೆಳವಲದ ತಿರುಳಿಗೆ ಹಾಲನ್ನು ಸೇರಿಸಿ ರುಬ್ಬಿ, ಒಣಗಿಸಿ, ಹಾಲಿನ ಪುಡಿ, ತಿಳಿತುಪ್ಪಕ್ಕೆ ಜೇನು ಮೇಣ ಮತ್ತು ಕುಸುಬಿ ಎಣ್ಣೆ ಸೇರಿಸಿ 'ತುಪ್ಪ' ಮತ್ತು ಬೆಳವಲದ ತಿರುಳು ಮತ್ತು ಮೊಸರಿನ ಮಿಶ್ರಣವನ್ನು ಒಣಗಿಸಿ ಮೊಸರ ಪುಡಿಯನ್ನು ಅಭಾವ ಇದ್ದಾಗ ಬಳಸುತ್ತಿದ್ದರು.

ಆಹಾರ ಸಂಸ್ಕರಣೆಗೆ 'ಭಾವನೆಯಂ ಕೊಡುವದು' 'ಪುಟಮಂ ಕೊಡುವದು' ಎಂಬ ಶಬ್ದಗಳನ್ನು ಸೂಪ ಶಾಸ್ತ್ರಜ್ಞರು ಬಳಸಿದ್ದಾರೆ. ಆದರೆ 'ಭಾವನೆ' ಕೊಡುವ ವಿವರಗಳು ಸ್ಪಷ್ಟವಾಗಿ ದೊರೆಯುವದಿಲ್ಲ.

**ಸಂಬಾರ ಪದಾರ್ಥಗಳು :** ಮೆಂತೆ, ಧನಿಯ, ಜೀರಿಗೆ, ಸಾಸಿವೆ, ಮೆಣಸು, ಲವಂಗ, ಜಾಜಿಕಾಯಿ, ಪತ್ರೆ, ಕೋತಂಬರಿ ಮತ್ತು ಕರಬೇವಿನ ಸೊಪ್ಪು, ಹಿಂಗು, ಈರುಳ್ಳಿ, ಬೆಳ್ಳುಳ್ಳಿಗಳನ್ನು ಧಾರಾಳವಾಗಿ ಬಳಸುತ್ತಿದ್ದರು. ಮಂಗರಸನಂತೂ, ಬೆಳ್ಳುಳ್ಳಿ, ಪಾಯಸ, ಹುಣಸೆಹಣ್ಣಿನ ಪಾಯಸಗಳನ್ನೂ ವಿವರಿಸಿರುವ. ತ್ರಿಜಾತಕ ದಾಲಚಿನ್ನಿ, ಏಲಕ್ಕಿ, ಲವಂಗಪತ್ರೆಗಳ ಮಿಶ್ರಣ, ಮತ್ತು ಚತುರ್ಜಾತಕ ಎಂದರೆ, ಲವಂಗ, ಚಕ್ಕೆ, ಕೇಸರಿ, ಏಲಕ್ಕಿಗಳ ಮಿಶ್ರಣವನ್ನು ಸಿಹಿ ತಿಂಡಿಗಳಿಗೆ ಬಳಸುತ್ತಿದ್ದರು. ದಾಲಚಿನ್ನಿ ಪೋರ್ಚುಗೀಸರಿಂದ ಪರಿಚಯಿಸಲ್ಪಟ್ಟಿತು. ಅದರಂತೆ ಮೆಣಸಿನಕಾಯಿ, ಶೇಂಗಾ, ಆಲೂಗಡ್ಡೆ, ಪಪಾಯಿ, ತೊಗರಿ ಬೇಳೆಗಳೆಲ್ಲ ಅವರ ಕೊಡುಗೆಗಳೇ! ಆದರೆ ನಮ್ಮವರು ಅವನ್ನು ಬಲು ಬೇಗ ತಮ್ಮವನ್ನಾಗಿ ಮಾಡಿಕೊಂಡರು. ಶೇಂಗಾ ಅಥವಾ ಕಳ್ಳೆಕಾಯೆಣ್ಣೆಯಂತೂ 'ಒಳ್ಳೆಣ್ಣೆ' ಅಭಿದಾನದಿಂದ ಮೆರೆಯುತ್ತದೆ. ಅದರ ಆಗಮನಕ್ಕೆ ಮೊದಲು, ಎಳ್ಳೆಣ್ಣೆ, ತೆಂಗಿನೆಣ್ಣೆ, ಕುಸುಬಿ ಎಣ್ಣೆ, ಅಗಸೆ ಎಣ್ಣೆ ಮತ್ತು ತುಪ್ಪಗಳು ಅಡಿಗೆಯ ಮಾಧ್ಯಮವಾಗಿದ್ದವು. ವಿದೇಶದಿಂದ ನಮ್ಮಲ್ಲಿ ಬಂದ ಅನೇಕಾನೇಕ ಪೈರುಗಳನ್ನು "ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕೆ" ಎಂಬ ಪುಸ್ತಕದಲ್ಲಿ (ದಿ.) ಬಿ.ಜಿ.ಎಲ್. ಸ್ವಾಮಿಯವರು ವಿವರಿಸಿದ್ದಾರೆ.

**ಊಟದ ಪದ್ಧತಿ :** ಕನ್ನಡಿಗರ ಸೌಂದರ್ಯ ದೃಷ್ಟಿ, ಅಚ್ಚುಕಟ್ಟುತನಗಳು ಭೋಜನ ರೂಪದಲ್ಲಿ ಚೆನ್ನಾಗಿ ವ್ಯಕ್ತವಾಗಿವೆ. ಸ್ವಚ್ಛವಾಗಿ ಸಾರಿಸಿದ ಭೋಜನಶಾಲೆಯಲ್ಲಿ, ರಂಗವಲ್ಲಿ ಇಕ್ಕಿ, ಓರಣವಾಗಿ ಬಾಳೆಲೆ, ದೊನ್ನೆ, ಪತ್ರಾವಳಿ, ದ್ರೋಣಗಳನ್ನು ಜೋಡಿಸಿಡಬೇಕು. ಕೂಡ್ರಲು ಬಣ್ಣದ ಮಣೆ, ಎಲೆತುದಿಯಲ್ಲಿ ಉಪ್ಪು, ಉಪ್ಪಿನಕಾಯಿ, ಹಳದಿ, ಹಸಿರು, ಬಿಳೇ ಕೇಸರಿ, ಕೆಂಪು ಬಣ್ಣದ ವ್ಯಂಜನಗಳು ಬಹುವಾಗಿ ರಾರಾಜಿಸಬೇಕು. ನಡುವೆ ಮಲ್ಲಿಗೆ ಹೂವಿನಂಥ ಅನ್ನ. ಮನೆಯ ಯಜಮಾನಿ ತುಪ್ಪ ಬಡಿಸಬೇಕು. ಯಜಮಾನ ಆಗಾಗ ಬಂದು ಉಪಚರಿಸಬೇಕು ವಿಶೇಷಭಕ್ಷ್ಯವನ್ನು ಒತ್ತಾಯದಿಂದ ನೀಡಿಸಬೇಕು. ಅಂದರೆ ಔತಣದೂಟ ಕಳೆ ಕಟ್ಟುತ್ತಿತ್ತು.

ಕನಕದಾಸರ ಮೋಹನ ತರಂಗಿಣಿಯಲ್ಲಿ ವಿಶೇಷ ಸಂದರ್ಭದ ವಿಪ್ರಭೋಜನದ ಸೊಗಸಾದ ವರ್ಣನೆ ಬರುತ್ತದೆ. ಎಲ್ಲರೂ ಒಂದೇ ಸಲ ಭೋಜನಶಾಲೆಗೆ ನುಗ್ಗಲು ಯತ್ನಿಸಿ,

ಸಾಧ್ಯವಾಗದೇ ಗುದ್ದಾಡಿ, ಒಳಹೊಕ್ಕ ನಂತರ ('ಪುಗುವಡಕೆ ಗುದ್ದಾಡಿದರು, ಬಾಗಿಲು ಹಿಡಿಯದೆ ಪೊಕ್ಕು ಗದ್ದುಗೆವಿಡಿದರು ಇಕ್ಕಲದಲಿ') ಎರಡೂ ಕಡೆ ಗದ್ದುಗೆಯಲ್ಲಿ ಕುಳಿತರು. ಉಟ್ಟ ಮೇಲು ಬಟ್ಟೆ, ಕಿರುವಸ್ತ್ರ ಉತ್ತರೀಯಗಳನ್ನು ಸಡಲಿಸಿ ಗಂಧಾಕ್ಷತೆ ಸ್ವೀಕರಿಸಿದರು. ಪಾಯಸ, ಸಣ್ಣಕ್ಕಿಯನ್ನ ಬೇಳೆತೊವ್ವೆ, ಪಳಿದ್ಯಗಳನ್ನು ಜೇನು, ಸಕ್ಕರೆ, ಹಾಲು ಪೇಣಿ, ಸುಖಿನುಂಡೆ, ವಡೆ, ಗಾರಿಗೆ, ಹುಳಿ, ತಾಳಿದ, ಸೀಕರಣೆ, ತುಂಬ ಮಸಾಲೆ ಹಾಕಿದ ನಿಂಬೆಹಣ್ಣಿನ ಉಪ್ಪಿನಕಾಯಿಗಳನ್ನು ಬಡಿಸಿದರು. ದೊನ್ನೆ ತುಳುಕುವಂತೆ ತುಪ್ಪ ಹಾಕಿದರು.

ಚಪ್ಪಿರಿದು ಈಂಟಿದರು ನೀರುಮಜ್ಜಿಗೆಯನು............
ಸಿತರಾಜಾನ್ನ ಸದ್‌ಘೃತ ತೊವ್ವೆಗೂಡಿ ನಿರ್ಮಿತಮಾದತೋರದುತ್ತಗಳ।
ಜತನ ತಪ್ಪದೇ ಕೈಕೊಂಡರು ಕೃಷ್ಣಾರ್ಪಿತಮೆಂದು ಪರಿತೋಷವಡೆದು।

ಕೃಷ್ಣಾರ್ಪಿತ! ಎನ್ನುತ್ತಾ ವಿಘ್ನರಾಜನ ಹೊಸ ಬಳಗದಂತೆ ಬ್ರಾಹ್ಮಣರು ಗುರಿ ತಪ್ಪದೆ ದೊಡ್ಡ ದೊಡ್ಡ ತುತ್ತು ಬಾಯಿಗೆ ಎಸೆಯುತ್ತ ದಿವ್ಯಭೋಜನದಲ್ಲಿ ಶೋಭಿಸಿದರು.

ಕ್ಷತ್ರಿಯರಾದ ಆಳರಸರಲ್ಲಿ, ಗದ್ದಿಗೆ, ಅಡ್ಡಣಿಗೆ ಇಲ್ಲವೆ ಚಿಕ್ಕ ಟೇಬಲ್ಲುಗಳನ್ನು ಭೋಜನದಲ್ಲಿ ಬಳಸುತ್ತಿದ್ದರು. ಬಿಳಿಯ ನ್ಯಾಪ್‌ಕಿನ್‌ಗಳನ್ನು ಹೊಟ್ಟೆ, ತೊಡೆಗಳ ಮೇಲೆ ಹಾಕಿಕೊಳ್ಳುವ ಪದ್ಧತಿ ಅಂದೂ ಇತ್ತು (ಉರು-ನಾಭಿ ಪ್ರದೇಶಂ, ಸಂಛಾದ್ಯ ಸಿತವಾಸಸಾ!ಮಾನಸೋಲ್ಲಾಸ) ಚಿನ್ನದ ಇಲ್ಲವೆ ಬೆಳ್ಳಿಯ ಅಥವಾ ತಾಮ್ರದ ತಟ್ಟೆಗಳು, ವ್ಯಂಜನಕ್ಕಾಗಿ ಬಟ್ಟಲುಗಳು, ಮೇಜಿನ ಮೇಲೆ ಬರುತ್ತಿದ್ದವು. ಮೊದಲು ತುಪ್ಪತೊವ್ವೆಯ ತುತ್ತು, ಬಗೆ ಬಗೆಯ ಭಕ್ಷ್ಯ ಮಾಂಸದ ಓಗರಗಳು ನಡುವೆ, ಕೊನೆಯಲ್ಲಿ ಮಜ್ಜಿಗೆ ಅನ್ನ ಉಣ್ಣುವ ಪರಿಪಾಠವಿತ್ತು. ನಡುನಡುವೆ ರಸಾಯನಗಳು, ಪಾನಕ, ಮಜ್ಜಿಗೆಗಳನ್ನು ಕುಡಿಯುತ್ತಿದ್ದರು. ಕರಾವಳಿಯ ಮುಸ್ಲಿಂ ಅರಸರಲ್ಲಿಯೂ ಹೆಚ್ಚು ಕಡಿಮೆ ಕ್ಷತ್ರಿಯರಂತಹವೇ ಊಟದ ಪದ್ಧತಿ ರೂಢಿಯಲ್ಲಿರುವದನ್ನು ಇಬ್ನಬತೂತನೆಂಬ ಅರಬ್ ಪ್ರವಾಸಿ ೧೪ನೇ ಶತಮಾನದಲ್ಲಿ ಗಮನಿಸಿದ್ದ.

ಅಂದಿನವರ ಊಟದ ಅವಿಭಾಜ್ಯ ಪರಿಕರಗಳಾಗಿ ಇಂದು ಇಲ್ಲವಾದ ಕೆಲವು ಅಪರೂಪದ ಅಡಿಗೆಯ ಮಾದರಿಗಳನ್ನು ನೋಡಬಹುದು.

**ಕಂದೂರ್ ಕೂಷ್ಮಾಂಡ :** ಕಂದೂರ ಅಥವಾ ತಂದೂರ್ ಪಾಕ ಪ್ರಕಾರದ ಪರಿಚಯ ನಮ್ಮ ಪ್ರಾಚೀನರಿಗೆ ಇತ್ತು, ಎಂಬುದಕ್ಕಾಗಿ ದೊಡ್ಡ ಕುಂಬಳಕಾಯಿಯ ವ್ಯಂಜನದ ಮಾದರಿ ನೋಡಬಹುದು. ದೊಡ್ಡ ಬಲಿತ ಕುಂಬಳಕಾಯಿಯನ್ನು ಪೊಳ್ಳುಮಾಡಿ ಬೀಜಗಳನ್ನು ತೆಗೆದು ಹುಣಿಸೆರಸದಲ್ಲಿ ಇಡಿಯದಾಗಿ ನೆನಹಾಕಿ, ಸಂಡಿಗೆ ಚೂರು, ಕೊಬ್ಬರಿ, ಎಳ್ಳುಪುಡಿ, ಉಪ್ಪು, ಗರಂ ಮಸಾಲೆ (ನಾಗಕೇಸರ, ಜಾಜಿ ಹೂ, ಜಾಯಿಪತ್ರೆ ಲವಂಗದ ಚಕ್ಕೆ, ಜಾಜುಕಲ್ಲು ಕಾರಗೆಣಸು, ನೀರುಳ್ಳಿ, ಕೋತಂಬರಿ ರಸ ಸೇರಿಸಿ ರುಬ್ಬಿದ್ದು) ಸೇರಿಸಿ, ಮೊಸರು, ನಿಂಬೆಹುಳಿಗಳನ್ನು ನಿರ್ದಿಷ್ಟಪ್ರಮಾಣದಲ್ಲಿ, ಕಲಿಸಿ ಕುಂಬಳ ಪೊಳ್ಳಿನಲ್ಲಿ ತುಂಬಿ, ಹೊರ ಮೈಗೆಲ್ಲಎಣ್ಣೆ ಲೇಪಿಸಿ, ಕಂದೂರ ಒಲೆಯ ಒಳಗೆ ಇಟ್ಟು ಬೇಯಿಸುತ್ತಿದ್ದರು. ಎರಡುಗಳಿಗೆ



1. ಪಾತ್ರೆ - ಪಡಗ ನೆಲುವುಗಳು



2. ಅಡಿಗೆಯಲ್ಲಿ ತೊಡಗಿದ ಗೃಹಿಣಿ



3. ಹಾಲು - ಮೊಸರು ಕಾವಡಿಗಳಲ್ಲಿ
ಹೊತ್ತೊಯ್ಯುವುದು



4. ಬಂಡಿಯಲ್ಲಿ ಎಣ್ಣೆ, ಬೆಲ್ಲ ಸಾಗಾಟ

ಬೇಯಿಸಿ ನೀರುಬತ್ತಿದಾಗ, ಹೊರತೆಗೆದು, ಮತ್ತೆ ಇಷ್ಟವಿದ್ದ ಮಸಾಲೆಯನ್ನು ಸೇರಿಸಿದಾಗ 'ಕಂದುರ ಕುಂಬಳ' ತಯಾರಾಗುತ್ತಿತ್ತು. ನಂತರ ಬೇಕಷ್ಟೆ ತುಂಡುಗಳನ್ನು ತೆಗೆದು ಅಡಕೆ ಹಾಳೆಯಲ್ಲಿ ಕಟ್ಟಿಟ್ಟು ಅನೇಕ ದಿನ ತಿನ್ನಲು ಬಳಸಲಾಗುತ್ತಿತ್ತು.

ಈಗೀಗ ಉತ್ತರಭಾರತದ ತಂದೂರಿ ಪಕ್ವಾನ್ನಗಳು ದಕ್ಷಿಣದಲ್ಲಿ ತುಂಬ ಜನಪ್ರಿಯ. ಆದರೆ ತಂದೂರದ ಉಪಯೋಗ ಸಂಸ್ಕೃತ ಪಾಕಗ್ರಂಥಗಳಲ್ಲಿ ಉಲ್ಲೇಖಿತವಾಗಿದ್ದು ಕರ್ನಾಟಕದಲ್ಲಿ ಅದು ಬಳಕೆಯಲ್ಲಿತ್ತು.

**ರಂಭಾಕುಸುಮ ಪಾಕ :** ಸಂಸ್ಕೃತದಲ್ಲಿ 'ರಂಭಾ' ಎಂದರೆ ಬಾಳೆ. ಬಾಳೆದಿಂಡಿನ ಪಲ್ಯ ಇಲ್ಲವೇ ಕೋಸಂಬರಿ, ಕರಾವಳಿ, ಮಲೆನಾಡುಗಳಲ್ಲಿ ಬಳಕೆಯಲ್ಲಿವೆ. ಆದರೆ ಮಂಗರಸನು ಅದರ ವಿವಿಧ ಪ್ರಕಾರಗಳಿಗೆ ಕದಂಬರಂಭಾ, ಮಿಶ್ರರಂಭಾ ಕುಸುಮಪಾಕ (ಬಾಳೆ ಗೊನೆಯ ಹೂ). ಅಮೃತರಂಭಾ ಎಂಬ ಸುಂದರ ಹೆಸರುಗಳನ್ನು ಕೊಟ್ಟು, ಪರಿಶ್ರಮ ಪೂರ್ವಕವಾಗಿ ಹತ್ತೆಂಟು ಬಗೆಯ ಸಾಂಬಾರ ಪದಾರ್ಥಗಳನ್ನು ಸೇರಿಸಿ ತಯಾರಿಸುವ ಬಗೆ ಹೇಳಿದ್ದಾನೆ. ಇದರಿಂದಾಗಿ ಬಾಳೆದಿಂಡು ಅಥವಾ ಹೂಗಳು ತೀರ ಸಾಮಾನ್ಯ ವ್ಯಂಜನ ಪದಾರ್ಥಗಳಾಗಿರದೇ, ಭೋಜನ ಸುಖರತರ ಎಲೆಯನ್ನೂ ಅಲಂಕರಿಸುತ್ತಿದ್ದವು ಎಂದು ನಂಬಲು ಅಡ್ಡಿಯಿಲ್ಲ!

ಕಸರಿ, ಕೋಸಂಬರಿ, ಪಚ್ಚಡಿಗಳ ರೂಪದಲ್ಲಿ ಹಸಿ ತರಕಾರಿಗಳ ಧಾರಾಳ ಉಪಯೋಗ ಆಗುತ್ತಿತ್ತು.

**ಬೆಳ್ಳುಳ್ಳಿಯ ಪಾಯಸ :** ಜೈನಕರ್ತೃ ಮಂಗರಸನು ಬೆಳ್ಳುಳ್ಳಿಯ ಪಾಯಸದ ವಿವರಗಳನ್ನು ಕೊಟ್ಟಿರುವದು ಅದರ ಜನಪ್ರಿಯತೆಯನ್ನು ತೋರಿಸುತ್ತದೆ. ದೊಡ್ಡ ಬೆಳ್ಳುಳ್ಳಿಗಳನ್ನು ಸುಲಿದು ತೊಳೆಗಳನ್ನು ಹೋಳುಮಾಡಿ, ಬಟ್ಟೆಯಲ್ಲಿ ಪೊಟ್ಟಣಕಟ್ಟಿ ಜೋಳದ ಅಂಬಲಿಯಲ್ಲಿ ಹಾಕಿ ಬೇಯಿಸಿ ತೆಗೆದು, ತೊಳೆದಾಗ ಅದರ ವಾಸನೆ ಹೋಗುತ್ತಿತ್ತು. ನಂತರ ಸಕ್ಕರೆ, ಅಟ್ಟಿಸಿದ ಹಾಲು ಮತ್ತಿತರ ಸುವಾಸನಾದ್ರವ್ಯಗಳನ್ನು ಸೇರಿಸಿದಾಗ, ರುಚಿಕಟ್ಟಾದ ಪಾಯಸ ಸಿದ್ಧವಾಗುತ್ತಿತ್ತು. ಈ ಪಾಯಸ, ಒಣಕೆಮ್ಮು ನಿಲ್ಲಿಸಲು ಸಹಾಯಮಾಡುತ್ತದೆಂದು 'ಶಿವತತ್ವರತ್ನಾಕರ'ದಲ್ಲಿ ಹೇಳಿದೆ.

ಲಿಂಬೇಹಣ್ಣಿನ ಜಾತಿಗೆ ಸೇರಿದ ಸಕ್ಕರೆ ಲಿಂಬೆ. ನಾರಂಗ ತೊಳೆ ಅಥವಾ ಕಿತ್ತಳೆ, ಮಾದಳ ಹಣ್ಣುಗಳ ಕೇಸರಗಳನ್ನು ಬೇರ್ಪಡಿಸಿ, ಸುಣ್ಣದ ನೀರಿನಲ್ಲಿ ಕುದಿಸಿ ಹುಳಿಅಂಶ ತೆಗೆದು ಪಾಯಸ ಮಾಡುತ್ತಿದ್ದರು.

**ಜನಸಾಮಾನ್ಯರ ಆಹಾರ :** ಹಿಂದಿನ ಜನರೆಲ್ಲ ಬಗೆಬಗೆಯ ರುಚಿಕಟ್ಟಾದ ಆಹಾರವನ್ನು ಮೂರೂ ಹೊತ್ತು ಸೇವಿಸಿ ಸುಖವಾಗಿ ಬದುಕುತ್ತಿದ್ದರು, ಎಂದು ನಂಬಬೇಕಾಗಿಲ್ಲ! ಸಮಾಜದ ಸಾಕಷ್ಟು ದೊಡ್ಡ ವರ್ಗ, ಬಡತನದ ಅಂಚಿನಲ್ಲಿ ಕಳೆಯುತ್ತಿತ್ತು.

ಜೋಳ, ರಾಗಿ, ಸೆಜ್ಜೆಗಳ ರೊಟ್ಟಿ ಅಥವಾ ಅಂಬಲಿ, ನುಚ್ಚು, ಗುಗ್ಗರಿ, ಸೊಪ್ಪು, ಎಣ್ಣೆಯ ತೊಟ್ಟುಗಳಿಂದ ಹೊಟ್ಟೆಯನ್ನು ತುಂಬಿಸಿಕೊಳ್ಳುವವರಿದ್ದರು. ಗಂಜಿಯ, ಅಂಬಲಿಯ ತೌಡು, ನುರುಗು, ಅವಲು, ಅಕ್ಕಚ್ಚು, ಹಾಡದೆಣ್ಣೆಯ ಹೊಟ್ಟುಗಳ ಉಲ್ಲೇಖ, 'ಪ್ರಭುಲಿಂಗ

ಲೀಲೆ'ಯಲ್ಲಿ ಬರುತ್ತದೆ. ಗಂಜಿ, ಗೊಡ್ಡುಹುಳಿ, ಎಣ್ಣೆ, ಉಪ್ಪಿನಕಾಯಿಗಳಿಂದ ದಿನಕಳೆಯುತ್ತಿರುವವರನ್ನು ಪುರಂದರದಾಸರು ಕಂಡಿದ್ದರು. 'ಕಾಸು ಕಟ್ಟಿಟ್ಟು ಕೇಸಕ್ಕಿ ಉಂಬುವವನ, ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ ಗುಗ್ಗರಿ-ಅನ್ನ ತಿಂದ ಕೃಪಣ ಪ್ರಾಣಿ!'ಯನ್ನು ಕಂಡು ಮರುಗಿದ್ದರು. ಹಾಲು, ಹಾಲಕೆನೆ, ಸಕ್ಕರೆ, ಕಿಚ್ಚಡಿಗಳ ವ್ರತ ಕೈಕೊಂಡವರಿದ್ದರೂ ಅಂಬಲಿಯ ನೇಮದವರನ್ನು ಯಾರನ್ನೂ ಕಾಣೆ! ಎಂದು ಅಂದಿನ ಆಷಾಢಭೂತಿತನವನ್ನು ಬಸವಣ್ಣನವರು ಗೇಲಿ ಮಾಡಿದ್ದರು.

ಬಿದಿರಲಕ್ಕಿ, ಗಡ್ಡೆಗೆಣಸು, ಹಕ್ಕಿ-ಪಿಕ್ಕಿ-ಕೆಂಬಳಿಲು, ಮೂಷಕಾದಿಗಳನ್ನು ತಿಂದು ಬದುಕುವ ಜನ ಅಂದೂ ಇದ್ದರು. ಇಂದೂ ಇದ್ದಾರೆ. ಅಂತರವಿಷ್ಟೆ, ಅಂದು ಅನ್ನದೇವರ ಕುರಿತು ಗೌರವ ತೋರುವ ಜನ ಇದ್ದರು. ಆಗಾಗ ಅನ್ನ ಸಂತರ್ಪಣೆ ಮಾಡಿ ದೀನ - ದಲಿತರಿಗೆ ಉಣ ಬಡಿಸುವ ಜನ ಸಾಕಷ್ಟು ಇದ್ದರು. ಶಾಶ್ವತವಾದ ಅನ್ನದಾನ, ಕುಡಿಯುವ ನೀರಿನ ಅರವಟ್ಟಿಗೆ, ವ್ಯವಸ್ಥೆ ಮಾಡಿದವರು ಅಸಂಖ್ಯರಿದ್ದರು. ಇದನ್ನು ನಾಡಿನಾದ್ಯಂತ ಹರಡಿಕೊಂಡ ಶಾಸನಗಳು ದೃಢೀಕರಿಸುತ್ತವೆ. ಮ್ಲೇಂಛರಾದಿಯಾಗಿ ಎಲ್ಲ ದಾರಿ ಹೋಕರಿಗೆ ಅನ್ನ-ವ್ಯಂಜನಗಳನ್ನು ಇಕ್ಕುವ ಅನ್ನ-ಛತ್ರಗಳು, ಹೊನ್ನಾವರ - ಕೇರಳ ದಾರಿಯಲ್ಲಿ ಇದ್ದುದನ್ನು ಇಬ್ನಿ ಬತೂತನು ಗಮನಿಸಿದ್ದ.

ಸಹಸ್ರಾರು ವರ್ಷಗಳಿಂದ ಬೆಳೆಸಿಕೊಂಡು ಬಂದು ಈಗ ಮಾಯಾವಾಗುತ್ತಿರುವ ಹಲವಾರು ಸಾಂಸ್ಕೃತಿಕ ಪ್ರಕಾರಗಳಲ್ಲಿ ಆಹಾರವೂ ಒಂದು. ಸಿದ್ಧ ಆಹಾರವನ್ನು ಕೊಂಡು ತಿನ್ನುವ ಇಂದಿನ ದಿನಗಳಲ್ಲಿಯೂ, ಹಿಂದೊಮ್ಮೆ ಮಿಠಾಯಿ ಅಂಗಡಿಗಳಿದ್ದಂತೆ, ಬೇಕಾದ ವ್ಯಂಜನಾದಿಗಳನ್ನು ಆಗಿಂದಾಗ, ತಯಾರಿಸಿ ಉಣಬಡಿಸುವ 'ಧಾಮು'ಗಳು ೧೨ನೇ ಶತಮಾನದಲ್ಲಿ ಇದ್ದವು, ಎಂದು ನೆನಪಿಡಬೇಕಾಗಿದೆ. ವೈದ್ಯರು ಒತ್ತಿಹೇಳುವ ಸಮತೋಲ ಆಹಾರ, ನಾರಿನ (Fibrous) ಅಂಶವಿದ್ದ ಆಹಾರವನ್ನು ನಮ್ಮವರು ರೂಢಿಸಿಕೊಂಡು ಶತಮಾನಗಳೇ ಕಳೆದಿದ್ದವು, ಎಂಬ ವಿಚಾರಗಳನ್ನು ಆಗೀಗ ನೆನಪಿಸಿಕೊಳ್ಳಬೇಕಾಗಿದೆ.

## ಆಧಾರ ಸೂಚಿ

೧. ಮಹಾಕವಿ ಶ್ರೀ ತ್ರಿವಿಕ್ರಮಭಟ್ಟ ವಿರಚಿತ **ನಳಚಂಪು** (ಸಂಸ್ಕೃತ) ಸಂಪಾದಕರು : ಶ್ರೀ ಕೈಲಾಶಪತಿ ತ್ರಿಪಾಠೀ ಚೌಖಂಬಾ ಪ್ರಕಟನೆ ವಾರಾಣಸಿ ಮೂರನೆಯ ಮುದ್ರಣ (೧೯೭೭).

೨. ಪಂಪ ಮಹಾಕವಿಯ **ಆದಿಪುರಾಣಂ** ಕನ್ನಡಸಾಹಿತ್ಯ ಪರಿಷತ್ತು ಬೆಂಗಳೂರು ೧೯೭೭.

೩. ಪಂಪ ಮಹಾಕವಿಯ **ಪಂಪಭಾರತ** ಕನ್ನಡಸಾಹಿತ್ಯ ಪರಿಷತ್ತು ಬೆಂಗಳೂರು ೧೯೭೭.

೪. Handiqui K.K. Yastilaka and Indian Culture : Sholapur 1949

೫. ಮಂಗರಸ ವಿರಚಿತ **ಸೂಪಶಾಸ್ತ್ರ** (ಸಂ. ಎಸ್. ಎನ್. ಕೃಷ್ಣಜೋಯಿಸ್ ಮೈಸೂರು ೧೯೬೯)

★★★

# ೪. ಪುರುಷರ ಕೇಶಾಲಂಕಾರ

ಹದಿನೈದನೆಯ ಶತಮಾನದಲ್ಲಿ ಭಾರತವನ್ನೆಲ್ಲ ಸುತ್ತಾಡಿದ ಇಟಾಲಿಯ ಪ್ರವಾಸಿ ನಿಕೊಲೊ-ದ-ಕೊಂಟಿ, ಅಂದಿನ ಕನ್ನಡಿಗರ ಕೇಶಾಲಂಕಾರದ ವೈವಿಧ್ಯತೆಯನ್ನು ಕಂಡು ವಿಸ್ಮಯಪಟ್ಟಿದ್ದ "ಇಟಾಲಿಯಂತೆ ಇಲ್ಲಿಯೂ ಕ್ಷೌರಿಕರಿದ್ದರೂ ಹೆಚ್ಚಿನ ಪ್ರಜೆಗಳು ಸ್ತ್ರೀಯರಂತೆ ಉದ್ದ ಕೂದಲುಗಳನ್ನು ಬೆಳೆಸುತ್ತಾರೆ. ಕೇಶರಾಶಿಯನ್ನು ಸಿಂಗರಿಸುವ ವಿಧಗಳನ್ನು ನೋಡಿಯೇ ಅರಿಯಬೇಕು...... ಕೇಶಗಳ ಅಭಾವವಿರುವವರು ಕೂಡ, ಕಾಡಿಗೆ ಯಂಥ ಕಪ್ಪು ಚವರಿ ಧರಿಸಿ ಆನಂದಿಸುತ್ತಾರೆ. ಅಚ್ಚ ಕರಿಕೂದಲು ಭೂಷಣವೆಂದು ಪರಿಗಣಿಸಲಾಗುತ್ತದೆ" ಎಂದು ಬರೆದಿದ್ದಾನೆ.[೧] ಇನ್ನೊಬ್ಬ ವಿದೇಶೀ ಪ್ರವಾಸಿ ಚೌ-ಜ- ಕುಆ, ಕನ್ನಡ ಸೈನಿಕರು ಕಾದಾಡುವಾಗ ಕೇಶರಾಶಿಯನ್ನು ಬಟ್ಟೆಯಿಂದ ಗಟ್ಟಿಯಾಗಿ ಬಿಗಿದು ಕಟ್ಟಿ ಕೊಳ್ಳುತ್ತಾರೆಂದು ಗಮನಿಸಿದ್ದ. ಸೋಮದೇವ ಸೂರಿಯ ಯಶಸ್ತಿಲಕ ಚಂಪೂಕಾವ್ಯದಲ್ಲಿ, ಕರ್ನಾಟಕದ ಸೈನಿಕರು ಹಣೆಪಟ್ಟಿಯಿಂದ ಕೂದಲಗಂಟನ್ನು ಕಟ್ಟುತ್ತಿದ್ದ ಉಲ್ಲೇಖ ಬರುತ್ತದೆ[೨] ಕಂಠೀರವ ನರಸರಾಜ ವಿಜಯದಲ್ಲಿ ದಕ್ಷಿಣದಲ್ಲಿ ಅರಸನ ಸೈನ್ಯ ಸೋತಾಗ ಅದು ಮುಂಡೆ ಬಿಚ್ಚಿ ಶರಣಾಗತವಾಯಿತೆಂದು ನಮೂದಿಸಲಾಗಿದೆ.[೩] ಗಂಡಸರು ಮುಡಿಕಟ್ಟಿ ಹೂ ಮುಡಿಯುವದು ಸಾಮಾನ್ಯವಾಗಿತ್ತು.

ಚರಿತ್ರೆ ಮತ್ತು ಸಾಹಿತ್ಯ ಕೃತಿಗಳಲ್ಲಿ ಲಭ್ಯವಿರುವ ಮಾಹಿತಿಗೆ ಅನುಗುಣವಾಗಿ ಪುರುಷರ ಕೇಶಾಲಂಕಾರದ ದೃಶ್ಯಗಳು, ಶಿಲ್ಪ ಮತ್ತು ಚಿತ್ರಗಳಲ್ಲಿ ಕಾಣಸಿಗುವದು ಇಂದಿನ ಪೀಳಿಗೆಯ ಭಾಗ್ಯವೆಂದೇ ಪರಿಗಣಿಸಬೇಕು. ಕಿರಿಯುಡುಗೆಯನ್ನು ಧರಿಸಿದ ವ್ಯಕ್ತಿ, ಮಣೆಯೊಂದರಲ್ಲಿ ಆರೂಢನಾಗಿ, ಕೈಗನ್ನಡಿಯ ನೆರವಿನಿಂದ, ತಲೆಗೂದಲು ಸರಿಪಡಿಸಿಕೊಳ್ಳುತ್ತಿರುವದು ಮನೋಜ್ಞವಾಗಿದೆ(1). ಕನ್ನಡಿಯಲ್ಲಿ ತನ್ನ ಶಿರೋಲಂಕಾರವನ್ನು ಪರೀಕ್ಷಿಸುತ್ತಿರುವ ಅರಸನು ಸೇವಕರ ಮೇಲೆ ಕೋಪಗೊಂಡಂತಿದೆ(2). ಎತ್ತರದ ಕಾಲುಮಣೆಯ ಮೇಲೆ ಆಸೀನನಾದ ರಸಿಕನೋರ್ವನು ತನ್ನ ಸಕಲ ರೂಪ-ಲಾವಣ್ಯವನ್ನು ಬಹಿರ್‌ವಕ್ರ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಾನೆ (3). ಇನ್ನೂ ಮೀಸೆ ಮೂಡದ ಸಿರಿವಂತನ ಪುತ್ರನು, ಸೇವಕನು ಹಿಡಿದ ಕನ್ನಡಿಯಲ್ಲಿ ಮುಖ ನೋಡುತ್ತ ತನ್ನ ಪ್ರೇಯಸಿಯನ್ನು ಮೆಚ್ಚಿಸಬಹುದೇ! ಎಂದು ಪರೀಕ್ಷಿಸಿಕೊಳ್ಳುವಂತಿದೆ(4). ಉಚ್ಚ ಅಧಿಪತಿಯೊಬ್ಬನು ಕನ್ನಡಿ ಹಿಡಿದು ಅಲಂಕರಿಸಿಕೊಳ್ಳುತ್ತಲೆ ವೇಳೆಯ ಅಪವ್ಯಯವಾಗದಿರಲೆಂದು ನಾಯಕನೋರ್ವನಿಗೆ ಸಲಹೆ-ಸೂಚನೆ ಕೊಡುತ್ತಿದ್ದಾನೆ(5).

ವೃತ್ತಿಗೆಅನುಗುಣವಾಗಿ ವಿವಿಧ ಪ್ರಕಾರದ ಕೇಶಾಲಂಕಾರಗಳನ್ನು ಗುರುತಿಸಬಹುದು. ಬೇಟೆಗಾರರು ಕಾಡುಪ್ರಾಣಿಗಳಿಗೆ ತಮ್ಮ ಬರವಿನ ಸುಳಿವು, ಸುಲಭದಲ್ಲಿ ಸಿಗದಿರಲೆಂದು ಕೇಶರಾಶಿಯನ್ನು ಹೂ ಮತ್ತು ಪರ್ಣಗಳಿಂದ ಮುಚ್ಚಿಕೊಳ್ಳುತ್ತಿದ್ದರು. ಬಲೆಹಾಕಿ ಹಕ್ಕಿಗಳನ್ನು ಹಿಡಿಯುವವರು. ಅವುಗಳ ಪಂಜಿನಲ್ಲಿ ಮುಡಿ ಸಿಗಬಾರದೆಂದು ಕೂದಲುಗಳನ್ನು ತಲೆಗೆ ಅಂಟಿಕೊಳ್ಳುವಂತೆ ಬಿಗಿದುಕೊಳ್ಳುತ್ತಿದ್ದರು. ಪೂಜಾರಿಗಳು, ಜ್ಯೋತಿಷಿಗಳು, ಕೆಲ ಬ್ರಾಹ್ಮಣ ವರ್ಗದವರು, ಹಿಂದಲೆಯಲ್ಲಿ ವರ್ತುಲಾಕಾರದಲ್ಲಿ ಕೂದಲು ಬೆಳಸಿ ನಡುವೆ ಉದ್ದದ ಜುಟ್ಟು ಬಿಟ್ಟುಕೊಳ್ಳುತ್ತಿದ್ದರು. ರಸಿಕರು ಅದಕ್ಕೆ ಹೂಮಾಲೆ ಸಿಗಿಸಿಕೊಳ್ಳುತ್ತಿದ್ದರು. ಜಟ್ಟಿಗಳು ತಲೆಯನ್ನು ನುಣ್ಣಗೆ ಬೋಳಿಸುತ್ತಿದ್ದರು. ಇಲ್ಲವೇ ಕೂದಲು ಎದುರಾಳಿಯ ಕೈಗೆ ಸಿಗದಂತೆ ಮುನ್ನೆಚ್ಚರಿಕೆ ವಹಿಸುತ್ತಿದ್ದರು. ಕೇವಲ ಶಿರೋಲಂಕಾರದಿಂದಲೇ ಹಿಂದಿನವರ ವೃತ್ತಿಯನ್ನು ಅರಿಯಲು ಸಾಧ್ಯವಿತ್ತು.

ಇಂದಿನ ನಾರಿಯರು ತಲೆಕೂದಲಲ್ಲಿ ಕತ್ತರಿ ಆಡಿಸಿ ಪುರುಷರನ್ನು ಅನುಕರಿಸಿ ಬಾಬ್ ಕಟ್, ಕ್ರಾಪ್‌ಕಟ್, ಬಾಯಕಟ್‌ಗಳನ್ನು ಹೊಂದಿದರೆ, ನಮ್ಮ ಪೂರ್ವಜರು ಉದ್ದಕೂದಲು ಬೆಳೆಯಲು ಪ್ರೋತ್ಸಾಹಿಸಿ ಹೆಂಗಳೆಯರ ಮೇಲ್ಪಂಕ್ತಿಯನ್ನು ತಾವು ಅನುಸರಿಸುತ್ತಿದ್ದರೆಂದು ತೋರುತ್ತದೆ! ಇದಕ್ಕಾಗಿ ಅವರು ವಹಿಸುತ್ತಿದ್ದ ಶ್ರಮಕ್ಕೆ ಕೊನೆಮೊದಲು ಇರುತ್ತಿರಲಿಲ್ಲ. ಅಂದಿನವರದು, ಅವಸರದ ಜೀವನವಲ್ಲವಾದ್ದರಿಂದ ವಿರಾಮವಾಗಿ ಕೇಶಸಂಗೋಪನ ಕಾರ್ಯಕ್ರಮವನ್ನು ಕೈಕೊಳ್ಳುತ್ತಿದ್ದರು. ಮಲಗುವ ಮೊದಲು ಮಂಡೆಯನ್ನು ಬಿಚ್ಚಿ ಕೂದಲಲ್ಲಿ ಸಿಗಿಸಿದ ಅಕ್ಕಡ, ಆಭರಣಗಳನ್ನು ತೆಗೆದಿಡುತ್ತಿದ್ದರು. ಬೆಳಿಗ್ಗೆ ಪ್ರಾತರ್ವಿಧಿ ಮುಗಿಸಿ ಎಣ್ಣೆಸ್ನಾನ ಸಾಗಿಸುತ್ತಿದ್ದರು. ಆರೋಗ್ಯಕರ ಕೂದಲು ಬೆಳವಣಿಗೆಗೆ ನೆಲ್ಲಿಕಾಯಿ ಲೇಪ ಹಚ್ಚುತ್ತಿದ್ದರು. ಜಿಡ್ಡು ಕಳೆಯಲು ಗೋದಿಯ ಹಿಟ್ಟು ಮತ್ತು ಮದನ ಬೇರಿನ ಹಿಟ್ಟು ಸೇರಿಸಿದ ಗಂಜಿಯನ್ನು ಬಳಸುತ್ತಿದ್ದರು. ಶುದ್ಧವಾದ ನೀರಿನಿಂದ ಶುಭ್ರವಾಗಿ ಕೇಶರಾಶಿಯನ್ನು ತೊಳೆಯುತ್ತಿದ್ದರು. ನಂತರ ಎಳೆಬಿಸಿಲಲ್ಲಿ ಕೂದಲು ಒಣಗಿಸಿಕೊಳ್ಳುತ್ತಿದ್ದರು. ಮಲ್ಲಿಗೆ ಜಾಜಿ, ಸಂಪಿಗೆ ಸುವಾಸನೆ ಹಾಕಿ ಮನೆಯಲ್ಲೇ ತಯಾರಿಸಿದ ಕಮ್ಮೆಣ್ಣೆಯನ್ನು ಯಥೇಷ್ಟವಾಗಿ ಕೂದಲಿಗೆ ಹಚ್ಚುತ್ತಿದ್ದರು. ನಂತರ ಕೊರಡು, ಕೋಡು ಇಲ್ಲವೇ ಹಸ್ತಿದಂತದ ಬಾಚಣಿಗೆಯಿಂದ ಕೂದಲನ್ನು ಹಿಕ್ಕಿಕೊಳ್ಳುತ್ತಿದ್ದರು. ಕೂದಲಿಗೆ ಅಗ್ಗಿಷ್ಟಿಕೆಯ ಹೊಗೆಯಿಂದ ಧೂಪ ಸಂಸ್ಕಾರ ಮಾಡುವ ಪದ್ಧತಿ ಜನಪ್ರಿಯವಾಗಿತ್ತು. ಇಷ್ಟು ಮಾಡಿದರೆ ಕೇಶಾಲಂಕಾರದ ಪೂರ್ವತಯಾರಿ ಮುಗಿದಂತೆ.

ಕೇಶರಾಶಿಯನ್ನು ಹರಿವಿಕೊಂಡು ಅಲೆದಾಡುವದು ಅವಮಾನಕರವೆಂದು ಪರಿಗಣಿಸಲಾಗುತ್ತಿದ್ದುದರಿಂದ ವಿವಿಧ ರೀತಿಯಲ್ಲಿ ಮುಡಿಗಳನ್ನು ಕಟ್ಟಿಕೊಳ್ಳುತ್ತಿದ್ದರು. ಬಾಹುಗಳಿಂದ ಬಲಿಷ್ಠರಾದವರು, ಹೆಚ್ಚಾಗಿ ಬಲಮುಡಿಯಲ್ಲಿ ವಿಶ್ವಾಸವಿಡುತ್ತಿದ್ದರು(6). ಕಿರಿಯ ನಿಲುವಿನವರು, ಎತ್ತರವಾಗಿ ಕಾಣುವದಕ್ಕಾಗಿ ನೆತ್ತಿಯಮೇಲೆ ಗೋಪುರದಂತಹ ಗಂಟು ಹಾಕಿಕೊಳ್ಳುತ್ತಿದ್ದರು (7). ಎಡ-ಬಲಗಳಲ್ಲಿ ತಾರತಮ್ಯ ಸಲ್ಲ! ಎಂದು ನಂಬಿದವರು ಎಡಕ್ಕೆ (8) ಹಾಗೂ ಬಲಕ್ಕೆ ಮುಡಿಯನ್ನು ಕಟ್ಟಿ ಕೊಳ್ಳುತ್ತಿದ್ದರು. ಅಲ್ಪಕೂದಲು ಇದ್ದರೂ ಕೃತಕ

ಕೂದಲಲ್ಲಿ ವಿಶ್ವಾಸವಿಡದವರು ಕಿರುಮುಡಿಗೆ ಶರಣುಹೋಗುತ್ತಿದ್ದರು. ವಿಪುಲವಾದ ಕೇಶಗಳ ಪುಣ್ಯವಂತರು ತಲೆಯ ಮೇಲ್ಭಾಗದಲ್ಲಿ ಗಂಟುಹಾಕಲಾಗದೇ ಒದ್ದಾಡುವವರು, ಬೆನ್‌ಮುಡಿ ಬಳಸಲೇಬೇಕಾಗಿತ್ತು. ಮೈತುಂಬ ಕೆಲಸವಿದ್ದವರು ದಿನ ಇಡೀ ಮುಡಿಬಿಚ್ಚಿಕೊಳ್ಳದಿರಲೆಂದು ಹೆಗ್ಗಂಟು ಹಾಕಿಕೊಳ್ಳುತ್ತಿದ್ದರು. ವೈರಿಗಳ ಹೃದಯದಲ್ಲಿ ನಡುಕ ಹುಟ್ಟಿಸಬೇಕೆಂದವರು ಕಲಿಗಂಟು ಬಿಗಿಯಲು ಮರೆಯುತ್ತಿರಲಿಲ್ಲ. ಮುಡಿಯು ಸದಾಕಾಲ ಸ್ವಸ್ಥಾನದಲ್ಲಿ ಇರಬೇಕೆನ್ನುವವರು ರೇಶಿಮೆದಾರ ಪಟ್ಟಿ (ರಿಬ್ಬನ್)ಗಳನ್ನು ಧಾರಾಳವಾಗಿ ಬಳಸುತ್ತಿದ್ದರು(ಚಿತ್ರ 9). ಕೆಲವು ಕೇಶಾಲಂಕಾರಗಳನ್ನು ನೋಡಿದಾಗ ತೂಗುಬಿಟ್ಟ ಬಳಲ್ಮುಡಿ ಕೃತಕವೆಂದು ಅನಿಸದೆ ಇರದು. ಇದಕ್ಕಾಗಿ ನಿಕೊಲೊ ಡಿ ಕೊಂಟಿ ಗಮನಿಸಿದ ಮುಳ್ಳು, ಡಬ್ಬಣ ಗಳಂತಹ ಸಾಮಗ್ರಿಗಳನ್ನು ಧಾರಾಳವಾಗಿ ಬಳಸುತ್ತಿದ್ದರು, ಎಂದು ಬೇರೆ ಹೇಳಬೇಕೆಂದಿಲ್ಲ.

ಹೂಗಳು ಹೆಣ್ಣಿಗಷ್ಟೆ ಮೀಸಲು! ಎಂದು ನಂಬಿದವರು ಶತಮಾನಗಳ ಹಿಂದಿನ ವೀರಗಲ್ಲುಗಳನ್ನು ನೋಡಿದಾಗ, ತಮ್ಮದು ತಪ್ಪುಗ್ರಹಿಕೆ, ಎಂದು ಕೊಳ್ಳದೇ ಇರರು. ಅದೆಷ್ಟೋ ಶಿಲ್ಪಗಳಲ್ಲಿ ಕೇವಲ ವ್ಯಕ್ತಿಗಳನ್ನು ನೋಡಿದಾಗ, ಅವರ ಲಿಂಗವನ್ನು ನಿರ್ಧರಿಸುವದು ಕಷ್ಟಕ್ಕಿಟ್ಟು ಕೊಳ್ಳುತ್ತದೆ. ಪುಣ್ಯಕ್ಕೆ ಹೆಚ್ಚಿನ ಸ್ಮಾರಕಗಳಲ್ಲಿ ಮೃತರ ಕುರಿತಾದ ವಿವರಗಳು, ಹೆಸರುಗಳು ಇರುವದರಿಂದ ಪುರುಷ-ಶಿಲ್ಪಗಳನ್ನು ಪ್ರತ್ಯೇಕಿಸಬಹುದಾಗಿದೆ. ಅರಸರಾದಿಯಾಗಿ ಹೂವಿನ ಅಲಂಕಾರಗಳನ್ನು ಬಳಸುತ್ತಿದ್ದುದನ್ನು ಹದಿನೇಳನೆಯ ಶತಮಾನದಲ್ಲಿ ಕೆಳದಿ ರಾಜ್ಯಕ್ಕೆ ಭೇಟಿ ನೀಡಿದ ಬ್ರಿಟಿಶ್ ಪ್ರವಾಸಿ ಪೀಟರ್ ಮಂಡಿ ಗಮನಿಸಿದ್ದ. ಶಿರಕ್ಕೆ ಸುತ್ತಿದ ದಾರ ಅಥವಾ ಬಟ್ಟೆಗೆ ಹೂವನ್ನು ಸಿಕ್ಕಿಸುವದು ಸಾಮಾನ್ಯವಾಗಿತ್ತು. ಈ ಹೂಗಳು ಕರವೀರ ಕೇದಿಗೆ ದಾಸವಾಳದಂಥ ದೊಡ್ಡವು (10,11) ಇಲ್ಲವೇ ಮಲ್ಲಿಗೆ, ಜಾಜಿಯಂತಹ ನಾಜೂಕಿನವೂ ಇರಬಹುದು, ಧನಿಕರು ಚಿನ್ನದ ಪಿನ್ ಬಳಸಿ ಹೂ ಮುಡಿಯುತ್ತಿದ್ದರು. (12) ಕೆಲವು ಶಿಲ್ಪಗಳಲ್ಲಿ ಮೊಲ್ಲೆ ಹೂವಿನ ದಂಡೆ ಬಲಕಿವಿಯಿಂದ ಎಡಕಿವಿಯವರೆಗೆ ನೇತಾಡುವಂತೆ ಮುಡಿದಿದ್ದನ್ನು ಗಮನಿಸಬಹುದು. ಯುವ ಜನರು ಜಾಜಿ, ಕದಂಬ ಹೂಗಳನ್ನು ತುರುಬಿಗೆ ಸೇರಿಸುವದು ಸಾಮಾನ್ಯವಾಗಿತ್ತು. ಅರಸನಾದವನು ಸಂಪಿಗೆ, ಮಲ್ಲಿಗೆ, ಮಾಲತಿ, ಕರವೀರ, ಮರಗ, ಇರವಂತಿಗೆಗಳಂತಹ ಹೂಗಳನ್ನು ಬಟ್ಟೆ ಬರೆಗೆ ಅನುಸಾರವಾಗಿ ಧರಿಸಬೇಕೆಂದು ಮಾನಸೋಲ್ಲಾಸ ಹೇಳುತ್ತದೆ. ಅಂದಿನವರಿಗೆ ಮ್ಯಾಚಿಂಗ್ ಅಥವಾ ಹೊಂದಾಣಿಕೆಯ ಕಲ್ಪನೆ ಸ್ಪಷ್ಟವಾಗಿತ್ತು. ಬೆಳದಿಂಗಳ ವಿಹಾರಕ್ಕೆ ಹೊರಟವರು ಶುಭ್ರ ಬಿಳಿ ಬಟ್ಟೆತೊಟ್ಟು ಬಿಳಿ ಚಂದನಧರಿಸಿ, ಮಲ್ಲಿಗೆ ದಂಡೆ ಮುಡಿದುಕೊಳ್ಳುತ್ತಿದ್ದರು. ಇದರಂತೆ ನೀಲಾಂಬರ ಉಟ್ಟಾಗ ಕಸ್ತೂರಿ ತಿಲಕ ಇಟ್ಟು ಕನ್ನೈದಿಲೆ ಹೂವನ್ನೆ ಮುಡಿಯುತ್ತಿದ್ದರು.

ಕೃತಕವಾಗಿ ಕೂದಲಗಳನ್ನು ಗುಂಗುರವಾಗಿ ಮಾಡಿಕೊಳ್ಳುವ ಕಲೆಯನ್ನು ಅಂದಿನವರು ಅವಗತ ಮಾಡಿಕೊಂಡಿದ್ದರು. ಸುರ್ಕುಂ ಗುರುಳು, ಸುಳಿಗುರುಳು, ಉರುಳು ಕುರುಳು ಎಂಬ ಪದಗಳು ಕಾವ್ಯಗಳಲ್ಲಿ ಬರುತ್ತವೆ. ಇವನ್ನು ಶಿಲ್ಪಗಳಲ್ಲಿ ಗುರುತಿಸಬಹುದಾಗಿದೆ. ಸುವರ್ಣದ ಎಳೆಗಳನ್ನು ಧನಿಕರು ಅಲಂಕಾರಕ್ಕಾಗಿ ಬಳಸಿ ಮುಡಿಯನ್ನು ಸುತ್ತಿಕೊಂಡು ದಾರದ

ಅಂಚುಗಳನ್ನು ಗಾಳಿಯಲ್ಲಿ ಹಾರಲು ಬಿಡುತ್ತಿದ್ದರು(13,14,15). ರಬ್ಬಾದ ಬಣ್ಣ ಹಾಕಿದ ರೇಶ್ಮೆ ಬಟ್ಟೆಯನ್ನು ತಲೆಗೆ ಮತ್ತು ಮುಡಿಗೆ ಸುತ್ತಿಕೊಳ್ಳುವ ಪದ್ಧತಿ ಪ್ರಚಲಿತವಿತ್ತು. ಇಂದು ಈ ಪದ್ಧತಿ, ತಿರುಪತಿಗೋ, ಯಾತ್ರಾಸ್ಥಳಕ್ಕೋ ಹೋಗಿ ಮುಡಿಯನ್ನು ಅರ್ಪಿಸಿದವರಲ್ಲಿ ಮಾತ್ರ ಕಂಡು ಬರುತ್ತದೆಂದು ಸ್ಮರಿಸಿಕೊಳ್ಳಬಹುದು. ಕೆಲವರು ಒಂಟಿಕೋಡಿನಂತೆ ಮುಡಿಕಟ್ಟಿಕೊಳ್ಳುತ್ತಿದ್ದರೆಂದು ಯಶಸ್ತಿಲಕದಿಂದ ತಿಳಿಯುತ್ತದೆ. ಇಂಥ ಮುಡಿಯನ್ನು ಹಕ್ಕಿಯ ಅಂಕಕ್ಕೆ ಆಮಂತ್ರಿಸುವ ಗ್ರಾಮೀಣ ತರುಣನೊಬ್ಬನು ಹೊಂದಿದ್ದನ್ನು ಶಿಲ್ಪದಲ್ಲಿ ಗುರುತಿಸಬಹುದು(16). ಒಂದು ವೀರಗಲ್ಲಿನಲ್ಲಿ ಕೂದಲನ್ನು ಬಳೆಯೊಂದರ ನೆರವಿನಿಂದ ಶಿರದ 'ಶಿಖಿ' ಭಾಗದಲ್ಲಿ ನಿಲ್ಲಿಸಲಾಗಿದೆ(17). ಗಂಡಸರೂ ಜಡೆ ಹೆಣೆದುಕೊಳ್ಳುವ ಪದ್ಧತಿ ಜಾರಿಯಲ್ಲಿತ್ತು. ರಟ್ಟಿಹಳ್ಳಿಯ ವೀರನೊಬ್ಬ ನೀಳವಾದ ಜಡೆಯೊಂದನ್ನು ಬಿಟ್ಟಿದ್ದಾನೆ(18).

ಮದುವೆ, ಮುಂಜಿ ಇನ್ನಿತರ ಸಮಾರಂಭಗಳಿಗೆ ಹೋಗುವ ಇಂದಿನ ಮಹಿಳೆಯರು ಬ್ಯೂಟಿ ಪಾರ್ಲರ್‌ದಲ್ಲಿ ಕೇಶಾಲಂಕಾರ ಪರಿಣತರಿಂದ ವಿಶಿಷ್ಟ ರೀತಿಯಲ್ಲಿ ಕೇಶಕರ್ತನ ಮಾಡಿಸಿಕೊಳ್ಳುವಂತೆ ಅಂದಿನ ಪುರುಷರೂ ಈ ವಿಧಾನಕ್ಕೆ ಮಾರು ಹೋಗಿದ್ದರೆಂದು ಅನಿಸುತ್ತದೆ. ಒರ್ವನ ಟೆನಿಸ್ ಚೆಂಡಿನಂತೆ ಒಬ್ಬಾತ ಮುಡಿಯನ್ನು ಹೆಣೆದುಕೊಂಡರೆ(19) ಪಾವಟಣಿಗೆಯಂತೆ ಹಂತ ಹಂತಗಳಲ್ಲಿ ಇನ್ನೊಬ್ಬಾತ ಹೊಂದಿದ್ದಾನೆ (20). ಯುವಕನೋರ್ವನು ಕಥಕ್ಕಳಿ ಕಲಾಕಾರನಂತೆ ಸುರುಳಿಯಾದ ಮುಡಿ ಹೊತ್ತಿದ್ದಾನೆ. ಉದ್ದ ಕೂದಲನ್ನು ಹಗ್ಗದಂತೆ ಹುರಿಹಾಕಿಯೋ ಜಡೆಹೆಣೆದೋ ಈ ರೀತಿ ಅಲಂಕರಿಸುತ್ತಿರಬೇಕು (21).

ಉದ್ದ ಕೂದಲು ಬೆಳೆಸುತ್ತಿದ್ದರಿಂದ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗಿ ಬರುತ್ತಿತ್ತು. ಮೊದಲನೆಯದು, ಸತತ ಹೊರಹೊಮ್ಮುವ ಬೆವರಿನ ನಾತ. ಎರಡನೆಯದು,ಬೆವರಿನ ಜೊತೆ ಧೂಳು ಸೇರಿ ಉಂಟಾಗುತ್ತಿದ್ದ ಕೊಳೆ. ಇದನ್ನು ಹೋಗಲಾಡಿಸಲು ದಿನಂಪ್ರತಿ ಸ್ನಾನಮಾಡಿದರೂ ವಾರಕ್ಕೊಮ್ಮೆಯಾದರೂ ಅಭ್ಯಂಜನ ಸ್ನಾನ ಹಾಕಿಸಿಕೊಳ್ಳಲೇ ಬೇಕಿತ್ತು. ಶಿಲ್ಪ ಒಂದರಲ್ಲಿ ಕಾಲುಮಣೆಯೊಂದರ ಮೇಲೆ ಆಸೀನನಾದ ಗೃಹಸ್ಥನಿಗೆ ಈರ್ವರು ನೀರೆರೆಯುತ್ತಿದ್ದಾರೆ (22). ಇದನ್ನು ಸುಖ ನಿಮಿಷಗಳೆಂದು ಪರಿಗಣಿಸುತ್ತಿದ್ದರೋ ಇಲ್ಲವೇ ಶಿಕ್ಷೆ ಎಂದು ಕೊಳ್ಳುತ್ತಿದ್ದರೋ, ಎಂಬುದು ಮಾತ್ರ ತಿಳಿಯದು! ಉದ್ದ ಮತ್ತು ದಪ್ಪ ಕೂದಲಲ್ಲಿ ಹೇನುಗಳು ಅನಾಮಂತ್ರಿತವಾಗಿ ಬಂದು ಸೇರಿಕೊಂಡು ಬಿಡುತ್ತವೆ. ಅಂಥವರು ಮನೆಯ ಹೆಂಗಸರ ನೆರವು ಪಡೆಯಲೇ ಬೇಕಾಗುತ್ತದೆ. ಶಿಲ್ಪ ಒಂದರಲ್ಲಿ ಕಾಲ್ಮಣೆಯಲ್ಲಿ ಕುಳಿತ ಹೆಂಡತಿ, ಪುರುಷನ ತಲೆಯಿಂದ ಹೇನು ಹೆಕ್ಕುತ್ತಿರುವಾಗ ಅವನು ಮಗುವನ್ನು ಎತ್ತಿಕೊಂಡಿದ್ದಾನೆ(23). ಇನ್ನೊಂದು ಶಿಲ್ಪದಲ್ಲಿ ಪುರುಷನು ವಿರಾಮವಾಗಿ ಮಂಚ ಒಂದರ ಮೇಲೆ ಪವಡಿಸಿದ್ದಾನೆ. ದಿಂಬಿನ ಮೇಲೆ ತಲೆ ಇಟ್ಟು ಕೇಶರಾಶಿಯನ್ನು ಕೆಳಕ್ಕೆ ಇಳಿ ಬಿಟ್ಟಿದ್ದಾನೆ. ಪತ್ನಿ ಮಣೆಯ ಮೇಲೆ ಕುಳಿತು ಅತ್ಯಂತ ದಕ್ಷತೆಯಿಂದ ಹೇನು ಒರೆಯುತ್ತಿದ್ದಾಳೆ. (24) ನಾಲ್ಕು ಶತಮಾನಗಳ ಹಿಂದಿನ ಇಂಥ ಸಾಮಾಜಿಕ ಜೀವನ ಚಿತ್ರಿಸುವ ಶಿಲ್ಪಗಳು ಅತಿ

















1. ಪುರುಷರ ಅಲಂಕಾರಕ್ಕೂ ಕೈಗನ್ನಡಿ
2. ಪ್ರತಿಷ್ಠಿತನು ಕನ್ನಡಿ ವೀಕ್ಷಣೆಯಲ್ಲಿದ್ದಾಗ
3. ಸೇನಾಪತಿ ತನ್ನ ಮೀಸೆಯನ್ನು ಮೆಚ್ಚುವಾಗ
4. ಕನ್ನಡಿ ಹೊತ್ತ ಸೇವಕ
5. ಶೃಂಗಾರ ಪ್ರತಿ ಅರಸ ಮತ್ತು ಕನ್ನಡಿ



9. ಬಲಹೂಮುಡಿ.



10. ಬಲಹೂಮುಡಿ.



12. ತುರುಬಿನ ಮುಡಿ



11. ಕೇದಿಗೆ ಮುಡಿ.



13. ರಿಬ್ಬನ್ ಸುತ್ತಿದ ಮುಡಿ.



14. ಪಟ್ಟಿ ಕಟ್ಟಿದ ಮುಡಿ.



15. ವಸ್ತ್ರ ಆಚ್ಛಾದಿತ ಮುಡಿ.



16. ಕೋಡಿನ ಕೇಶಾಲಂಕಾರ



17. ರಿಂಗ್ ಸೇರಿಸಿದ ಮುಡಿ



18. ಗಡ್ಡ ಮೀಸೆಗಳೊಂದಿಗೆ ಹೆಣೆದ ಜಡೆ

ವಿರಳ. ಸ್ತ್ರೀ-ಪುರುಷರ ಸಮಾನತೆ ಇಂದಿನವರ ಕನಸಾಗಿದ್ದರೆ, ಅಂದಿನವರು ಅದನ್ನು ಬಟ್ಟೆ-ಬರೆ-ಅಲಂಕಾರಗಳಲ್ಲಿ, ವಿರಾಮ-ವಿಹಾರದಲ್ಲಿ ನನಸಾಗಿ ಮಾಡಿಯೇ ಬಾಳಿದರು.

## ಅಡಿ ಟಿಪ್ಪಣಿ


೧) ನಾಗೇಗೌಡ ಎಚ್. ಎಲ್. (ಸಂ) ಪ್ರವಾಸಿಕಂಡ ಇಂಡಿಯಾ ಮೈಸೂರು ೧೯೬೬ ಸಂಪುಟ ೨ ಪುಟ : ೧೩೬-೧೩೭

೨) ಹಂಡಿಕಿ ಕೆ.ಕೆ. ಯಶಸ್ತಿಲಕ ಎಂಡ್ ಇಂಡಿಯನ್ ಕಲ್ಚರ್ : ಶೋಲಾಪುರ ೧೯೪೭. ಪು. ೫೯.

೩) ಶಾಮಶಾಸ್ತ್ರಿ ಆರ್. (ಸಂ) ಗೋವಿಂದವೈದ್ಯವಿರಚಿತ ಕಂಠೀರವ ನರಸರಾಜ ವಿಜಯಂ ೨ನೇ ಮುದ್ರಣ ೧೯೨೧ ಸಂಧಿ ೧೫ ಪದ್ಯ ೯೫, ಅದೇ ಸಂಧಿ ೨೫ ಪದ್ಯ ೧೩೫

೪) ಶೇಷಯ್ಯಂಗಾರ್ ಎಚ್ (ಸಂ) ಚಾವುಂಡರಾಯನ ಲೋಕೋಪಕಾರಂ ಮದ್ರಾಸ್ ೧೯೫೦ ಸಪ್ತಮಾಧಿಕಾರಂ ಇದರಲ್ಲಿ ಬಗೆಬಗೆಯ ಸುವಾಸಿತ ತೈಲಗಳನ್ನು ತಯಾರಿಸುವ ಕ್ರಮವನ್ನು ವಿವರಿಸಲಾಗಿದೆ ಪದ್ಯ ೧೧-೨೮

೫) ಕನ್ನಡ ಸಾಹಿತ್ಯ ಪರಿಷತ್ ಪಂಪನ ಆದಿಪುರಾಣಂ ಬೆಂಗಳೂರು ೧೯೨೭. ಪಂಚಮಾಶ್ವಾಸ ಪದ್ಯ- ೨೩; ಕೇಶಸಂಸ್ಕಾರಕ್ಕೆ ಕಾಳಾಗರು ಧೂಪವನ್ನು ಉಪಯೋಗಿಸುತ್ತಿದ್ದರು.

೬) ಅದೇ ಸಪ್ತಮಾಶ್ವಾಸಂ :

೭) ಪ್ರವಾಸಿಕಂಡ ಇಂಡಿಯಾ ಸಂಪುಟ ನಾಲ್ಕು ಮೈಸೂರು ೧೯೭೩ ಪು. ೩೩೩-೩೪

೮) ಚಾಮರಸರ ಪ್ರಭುಲಿಂಗಲೀಲೆ ಅಧ್ಯಾಯ ೫ ಪದ್ಯ ೪, ರಾಘವಾಂಕನ ಸೋಮನಾಥ ಚಾರಿತ್ರ ಅಧ್ಯಾಯ ೨ ಪದ್ಯ ೧೭ ಚಂದ್ರಪ್ರಭ ಪುರಾಣ ಅಧ್ಯಾಯ ೮ ಪುದ್ಯ ೪೪

೯) ಶ್ರೀಗೊಂದೇಕರ್ ಜಿ.ಕೆ. (ಸಂ) ಸೋಮೇಶ್ವರಾಸ್ ಮಾನಸೋಲ್ಲಾಸ ಬಡೋದಾ - ೧೯೫೯ ಸಂಪುಟ ೨ ಪದ್ಯಗಳು ೧೦೪-೪೮ ಮಾಲ್ಯಭೋಗ

೧೦) ಚಂದ್ರಪ್ರಭಪುರಾಣಂ : ಅಧ್ಯಾಯ ೮ ಪದ್ಯ ೪೪

೧೧) ಆದಿಪುರಾಣಂ ಆಶ್ವಾಸ ೧೧ ಪದ್ಯ ೧೪೭




## ೫. ವಿಜಯನಗರ ಕಾಲೀನ ಕನ್ನಡಿತಿಯರ ಸೀರೆಗಳು

ಕೊರಳು ನೋಯಿಸಿಕೊಂಡು ಲೇಪಾಕ್ಷಿಯ ಭಿತ್ತಿ ಚಿತ್ರಗಳನ್ನು ವೀಕ್ಷಿಸುತ್ತಿದ್ದಂತೆ, ಅಂದಿನ ಕನ್ನಡ ಕಲಾಕಾರರ ಚಿತ್ರ ನೈಪುಣ್ಯದ ಬಗ್ಗೆ ಅಭಿಮಾನ ಉಕ್ಕಿ ಹರಿಯುತ್ತದೆ. ರಾಮಾಯಣ, ಮಹಾಭಾರತ ಶಿವಪುರಾಣಗಳ ಸನ್ನಿವೇಶಗಳನ್ನು ಚಿತ್ರಿಸುವಾಗ, ಸಹಜವಾಗಿಯೇ ತನಗೆ ಪರಿಚಿತವಿದ್ದ ಅಂದಿನ ಹೆಣ್ಣು ಮಕ್ಕಳು ಉಡುತ್ತಿದ್ದ ಬಗೆಬಗೆಯ ಬಣ್ಣಗಳ, ಚಿತ್ರ, ಆಕೃತಿ ವಿನ್ಯಾಸಗಳ ಸೀರೆಗಳ ಪ್ರತಿಕೃತಿಯನ್ನು ಅವರು ಹೊಂದಿಸಿದ್ದಾರೆ. ಉಮೆಯನ್ನು ವಿವಾಹಕ್ಕೆ ಅಣಿಗೊಳಿಸುವವರು, ವಧುವಿನ ಅಲಂಕಾರಗಳಲ್ಲಿ ನೆರವಾಗುವ ಸ್ತ್ರೀಯರು, ಪತಿಯೊಂದಿಗೆ ದೇವದರ್ಶನಕ್ಕೆ ಹೊರಟವರು, ಶಿವನಿಗೆ ಹಣ್ಣು, ಹೂಕಾಯಿ, ಅರ್ಪಿಸುತ್ತಿರುವವರು, ಆಶೀರ್ವಾದವನ್ನು ಕೋರುತ್ತಿರುವವರು, ಭಿತ್ತಿ ಚಿತ್ರಗಳಲ್ಲಿದ್ದಾರೆ. ಅವನ್ನು ನೋಡುತ್ತಿದ್ದಂತೆ, ಸೀರೆಯ ಚರಿತ್ರೆಯ ಪುಟಗಳು ನೆನಪಿಗೆ ಬರಲಾರಂಭಿಸುತ್ತವೆ.

ಶತಮಾನಗಳಿಂದ ಕರ್ನಾಟಕದ ನಾರು, ಹತ್ತಿ, ರೇಷ್ಮೆಯ ಸೀರೆಗಳು ನಾಡಿನ ಹೆಂಗಳೆಯರ ಕಲಾಪ್ರಜ್ಞೆಯನ್ನು ಮೆರೆಸುವದರ ಜೊತೆಗೆ ಹೊರನಾಡುಗಳಲ್ಲಿಯೂ ಹೆಸರುಗಳಿಸಿದ್ದು ನೆನಪಾಗುತ್ತದೆ. ಇಷ್ಟು ಸಾಲದೆಂಬಂತೆ ಭಾರತದ ಬೇರೆ ಬೇರೆ ರಾಜ್ಯಗಳಿಂದಲೂ ಬಗೆಬಗೆಯ ಸೀರೆಗಳು ಆಯಾತವಾಗುತ್ತಿದ್ದವೆಂಬುದಕ್ಕೆ ರಟ್ಟ ನಾಲ್ಮಡಿ ಕಾರ್ತವೀರ್ಯನ ೧೨೦೪ರ ಶಾಸನವೊಂದು ಸಾಕ್ಷಿಯಾಗಿದೆ. "ಹೊರಗಣೆಂಬಂದ ಸೀರೆ" ಗಳಲ್ಲದೇ "ಚಿನ್ನಗೆಯಿಕ್ಕಿದ ಚಿನ್ನಗೆಯಿಕ್ಕದ ಚೀರಗಳ ದೂಸಿಗವಸರ"ಗಳನ್ನು ವೇಣುಗ್ರಾಮ ಅಥವಾ ಈಗಿನ ಬೆಳಗಾಂವದಲ್ಲಿ ಆಗಿನ Supermaketದ ಕೊಡುಕೊಳಿಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಹೆಸರಿಸುತ್ತದೆ.[೧] ಉತ್ಕಟ ಕನ್ನಡಾಭಿಮಾನಿ, ಅಂಡಯ್ಯ ಕವಿ ಸುಮಾರು ಇದೇ ಕಾಲದಲ್ಲಿ ತುಂಬ ಹೆಸರುವಾಸಿಯಾಗಿದ್ದ ದೇವಗಿರಿ, ಹೂಲಿ, ಮಗರಿ, ಕಾಡಿಗೆ ನೀರಿನ ಸೀರೆ.[೨] ಗಳಿಂದ ತನ್ನ ನಾಡಿನ ಸೀರೆ ಮಳಿಗೆಗಳು ನಳನಳಿಸುತ್ತಿದ್ದವೆಂದು ಉದ್ಗರಿಸಿದ್ದಾನೆ. ಮಾರ್ಕೊಪೋಲೋ, ದಕ್ಷಿಣದ ಜೇಡರ ಬಲೆಯಷ್ಟು ನಾಜೂಕಾದ ಸೀರೆಗಳನ್ನು ಕಂಡು ಅಚ್ಚರಿಪಟ್ಟಿದ್ದ. ಬಾಹ್ಮನಿ ಚರಿತ್ರಕಾರ ಇಸಾಮಿಯು, ಬೀದರ್, ಗುಲ್ಬರ್ಗ ಪ್ರದೇಶದಲ್ಲಿ ತಯಾರಾಗುತ್ತಿದ್ದ ಬಟ್ಟೆ, ಪ್ರಪಂಚದ ಯಾವುದೇ ರಾಜ-ರಾಣಿಯರು ಸಂಭ್ರಮದಿಂದ ತೊಡುವಂತಹ ದಾಗಿತ್ತು! ಎಂದು ಅಭಿಮಾನದಿಂದ ಬರೆದಿದ್ದಾನೆ.

ಹೊರಗಿನ ನಾಡುಗಳ ಬಟ್ಟೆ ಅಥವಾ ಈಗಿನ 'ಫಾರಿನ್" ಬಟ್ಟೆಯ ಹುಚ್ಚು ಕೂಡ ತುಂಬ ಪ್ರಾಚೀನವಾದದ್ದೇ! ಚೀನ, ಮಹಾಚೀನ, ಸಿಂಹಳ ದ್ವೀಪದ ರೇಷ್ಮೆ, ರಾಷ್ಟ್ರಕೂಟರ ಕಾಲದಿಂದಲೂ ಇಲ್ಲಿ ಜನಪ್ರಿಯವಾಗಿದ್ದರೆ, ಕಲ್ಯಾಣದ ಚಾಲುಕ್ಯರ ಕಾಲದಲ್ಲೂ ಅದು ಮುಂದುವರಿಯಿತು. ಜೊತೆಗೆ ಪೊದ್ದಲಪುರ, ಚೀರಪಲ್ಲಿ, ನಾಗಪಟ್ಟಣ, ತೊಂಡಮಂಡಲ, ಚೋಳದೇಶ, (ಎಲ್ಲವೂ ಈಗಿನ ತಮಿಳುನಾಡು) ಆನಹಿಲವಾಡ (ಗುಜರಾಥ), ಮೂಲಸ್ಥಾನ (ಮುಲ್ತಾನ್) ವಂಗ, ಕಳಿಂಗಗಳಿಂದಲೂ ಚೀರ ಅಥವಾ ಸೀರೆಗಳನ್ನು ಕಲ್ಯಾಣದ ಚಾಲುಕ್ಯರ ಓಲಗದ ಓರಣ ಪ್ರಿಯರು ಧರಿಸುತ್ತಿದ್ದದ್ದು, ಸೋಮೇಶ್ವರನ ಮಾನಸೋಲ್ಲಾಸದಿಂದ ತಿಳಿದುಬರುತ್ತದೆ.[೩] ಬಸವ ಪುರಾಣದಲ್ಲಿ (೧೪ನೇ ಶತಮಾನ) ಕಟ್ಟಬಣ್ಣದ ಬಲ್ಲಾಳ ಪಟ್ಟೆ, ಭೂಸಲೆ ಮೇಘವರ್ಣದ ಪಟ್ಟೆ, ಗುಜ್ಜರಾಷ್ಟ್ರ ಪಟ್ಟೆ, ವಾರಣಾಸಿಯ ದಸರಿಯ ಉಲ್ಲೇಖ ಬರುತ್ತದೆ.[೪] ಅಂದರೆ ಗುಜರಾತದ ಪಟೋಲಾ, ಬನಾರಸದ ರೇಷ್ಮೆಯ ಸೀರೆಗಳ ಚರಿತ್ರೆ ಅರಿಯಬಯಸುವವರಿಗೆ ಕನ್ನಡ ಕಾವ್ಯಗಳಲ್ಲಿ ಆಧಾರ ಸಿಗುತ್ತದೆ! ಬಲ್ಲಾಳ, ಭೋಸಲೆ ಎಂದು ಅಳರಸರ ಹೆಸರುಗಳನ್ನು ಪ್ರಸಿದ್ಧ ರೇಷ್ಮೆ ಬಟ್ಟೆ ಪ್ರಕಾರಗಳಿಗೆ ಇಡುತ್ತಿದ್ದಿರಲು ಸಾಕು!

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಲೇಪಾಕ್ಷಿಯಲ್ಲಿರುವ ಪಾಪನಾಶೇಶ್ವರ ದೇವಾಲಯದ ಒಳಹೊರಗೆ ವಿಜಯನಗರ ಕಾಲದ ಕನ್ನಡ ಶಾಸನಗಳಿವೆ. ನಂದಿಲಕ್ಕಿ ಶೆಟ್ಟಿ (ನಂದಿಲಕ್ಷ್ಮಿ ಶೆಟ್ಟಿ) ಮತ್ತು ಮುದ್ದಮ್ಮ ಅವರ ಮೂವರು ಪುತ್ರರಲ್ಲಿ ಹಿರಿಯವನಾದ ವಿರೂಪಣ್ಣನು, ವಿಜಯನಗರದ ಅಳರಸು ಅಚ್ಯುತ ದೇವರಾಯನ (ಕ್ರಿ.ಶ. ೧೫೩೦-೪೨) ಕಾಲದಲ್ಲಿ ಪ್ರತೀಹಾರಿಯಾಗಿ ತನ್ನ ಕಾರ್ಯದಕ್ಷತೆ, ಹಾಗೂ ಸ್ವಾಮಿನಿಷ್ಠೆಗಳಿಂದ ಪೆನುಗೊಂಡೆ ಮತ್ತು ಚಂದ್ರಗಿರಿ ಪ್ರಾಂತಗಳ ಆಡಳಿತಾಧಿಕಾರಿಯ ಹುದ್ದೆಗೇರಿದ. ಇದರಿಂದಾಗಿ ಅವನಿಗೆ ಈ ಭವ್ಯ ದೇವಾಲಯದ ನಿರ್ಮಾಣ ಹಾಗೂ ವಿಸ್ತಾರಕ್ಕಾಗಿ ಭಕ್ತರಿಂದ, ಪ್ರಜೆಗಳಿಂದ ಹಣವನ್ನು ಶೇಖರಿಸುವದು ಸಾಧ್ಯವಾಯಿತು; ಸುಲಭವಾಯಿತು. ತನ್ನ ಸೋದರ ವೀರಣ್ಣನಾಯಕನ ಸಹಾಯದಿಂದ ಈ ದೇವಾಲಯವನ್ನು ವಿರೂಪಣ್ಣನು ಹಿಗ್ಗಿಸಿದನೆಂದು ಕ್ರಿ.ಶ. ೧೫೩೫ರ ಶಾಸನವು ಸಾರುತ್ತದೆ. ಈ ದೇವಾಲಯದ ಮುಚ್ಚಿಗೆಯ ಚಪ್ಪಡಿ ಕಲ್ಲುಗಳಿಗೆ ಗಾರೆಯನ್ನು ಮೆತ್ತಿ ಒಳಮೈಯನ್ನು ಭಿತ್ತಿ ಚಿತ್ರಗಳಿಗಾಗಿ ಬಳಸಲಾಗಿದೆ. ನಾಲ್ಕು ಶತಮಾನಗಳ ಸುದೀರ್ಘ ಅಲಕ್ಷ, ಬಿರುಬಿಸಿಲು, ಮಳೆ, ಕಾಯಂ ತೇವುಗಳಿಂದಾಗಿ, ಭಿತ್ತಿ ಚಿತ್ರಗಳು ಬಣ್ಣಗೇಡಿಯಾಗಿದ್ದರೂ, ಅಂದಿನವರ ಸೀರೆಯ ಸೊಬಗಿನ ಮಾದರಿಗಳನ್ನು ಅರ್ಥೈಸಲು ಸಾಕಷ್ಟು ಸಹಾಯಕಾರಿಯಾಗಿವೆ.

ಚಿತ್ರಗಳಲ್ಲಿ ಸ್ತ್ರೀಯರಿಗೇ ಸಿಂಹಪಾಲು! ಒಮ್ಮೆ ನೋಡಿದರೆ ಸಾಲದು, ಪದೇ ಪದೇ ನೋಡಬೇಕೆನ್ನಿಸುವ ಲಾವಣ್ಯವತಿಯರು. ಅವರೆಲ್ಲ ಸುಂದರ ಕೃಶಾಂಗಿಯರು. ಒಬ್ಬಳಿಗೂ ಹೆಚ್ಚಿನ ಒಂದು ಗುಂಜಿಯ ಕೊಬ್ಬಾಗಲಿ, ಬೊಜ್ಜು ಆಗಲಿ ಇಲ್ಲ. ಸೀರೆಯಂಥ ಸರ್ವ ಸಾಧಾರಣ ಉಡಿಗೆಯನ್ನು ಎಷ್ಟು ಕಲಾತ್ಮಕವಾಗಿ ಧರಿಸಬಹುದೆಂಬುದಕ್ಕೆ ಉತ್ತಮ ನಿದರ್ಶನಗಳನ್ನು ಕೂಡ ಮಾಡಿದ್ದಾರೆ! ಆ ಯುಗದಲ್ಲಿ ರವಕೆ, ಕಂಚುಳಿಕೆ, ಕುಪ್ಪಸಗಳಾಗಲಿ,

ಅಂಗದಟ್ಟ ಅಥವಾ 'ಅಂಗವಟ್ಟ'ವೆಂದು ಕರೆಯಲ್ಪಡುತ್ತಿದ್ದ ಪೆಟಿಕೋಟ್ ಅಥವಾ ಲಂಗವಾಗಲಿ ಸಾಕಷ್ಟು ಪರಿಚಿತವಿದ್ದವು. ಆದರೆ ಈ ಲೇಪಾಕ್ಷಿಯ ಲಲನೆಯರಿಗೆ ಅವುಗಳ ಅವಶ್ಯಕತೆ ಇದ್ದಂತಿಲ್ಲ. ಸೀರೆಯೊಂದನ್ನೆ ಅತ್ಯಂತ ಮಾಟವಾಗಿ ಹೆಣ್ಣುತನವನ್ನು ಅನವಶ್ಯವಾಗಿ ಪ್ರದರ್ಶಿಸದೇ, ದೇಹದ ಆಕರ್ಷಕತೆಯನ್ನು ಹೆಚ್ಚಿಸುವ ಕಲೆಯನ್ನು ತಮ್ಮದನ್ನಾಗಿಸಿದ್ದಾರೆ! ಸೀರೆಯ ನಿರಿಗೆಗಳನ್ನು ಪಾದಗಳವರೆಗೆ ಇಳಿಬಿಟ್ಟು, ಅವು ಹೊತ್ತ ನಕ್ಷೆ, ಕುಸುರಿನ ಕೆಲಸಗಳು ಸುಂದರವಾಗಿ ಗೋಚರಿಸುವಂತೆ ಉಟ್ಟಿದ್ದಾರೆ. ವಕ್ಷಸ್ಥಳವನ್ನು ಹಾಯ್ದುಹೋದ ಸೆರಗನ್ನು ಓರಣವಾಗಿ ಹೊದೆದ ರೀತಿ ಒಂದೆಡೆ ಅಪೂರ್ವವಾಗಿದೆ.

ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ.[೫] ಮಾಯೆಗೆ ಸೀರೆಯುಡಿಸಿದ ರೀತಿ ಇಲ್ಲಿ ರೂಪುಗೊಂಡಿದೆ. :

ಪರಿವಿಡಿಯ ನಿರಿವಿಡಿದು ನಾಭಿಯ ಸರಿಸದಲಿ
ಪಸರಿಸುತೆ ಜಘನತೆ ಪರುಠವಿಸಿ ನಸುದೋರುವಂತೆ........

ಕ್ರಮವಾಗಿ ನಿರಿಗೆಗಳನ್ನು ಹೊಂದಿಸಿ ಹೊಕ್ಕುಳ ಬಳಿ ಜೋಡಿಸಿ ತೊಡೆಗಳತ್ತ ಪಸರಿಸುವಂತೆ ಎಚ್ಚರಿಕೆ ವಹಿಸಿ ಅಂಗವಟ್ಟ (ಲಂಗ)ದ ಸುತ್ತ ಸಮವಾಗಿ ಕಾಣಿಸುವಂತೆ ಸೀರೆಯುಡುತ್ತಿದ್ದರು. ಆದರೆ ಲೇಪಾಕ್ಷಿ ಲಲನೆಯರಿಗೆ ಲಂಗದ ಬಂಧನವಿಲ್ಲ!

ಲೇಪಾಕ್ಷಿಯ ಅಳಿದುಳಿದ ಸೀರೆಗಳ ಮಾದರಿಗಳನ್ನು ಹತ್ತಾರು ಬಗೆಯಲ್ಲಿ ವರ್ಗೀಕರಿಸಬಹುದು. ಚಳಿಗಾಳಿಗಳಿಂದ ಸಂರಕ್ಷಿಸಿಕೊಳ್ಳಬಹುದಾದಂಥ ಉರುಟು ಸೀರೆಗಳು. ಇವು ಕನ್ನಡ ನಾಡಿನಲ್ಲಿ ಎಲ್ಲ ವರ್ಗದವರೂ ಉಡುವಂಥವುಗಳಾಗಿದ್ದವು. ಉಳ್ಳಾಳದ ರಾಣಿಯ ಸೀರೆ ಹಾಗೂ ಮೈಮೇಲೆ ಹೊದ್ದ ಬಟ್ಟೆಗಳು ಇಂಥವೆ! ಎಂದು ಇಟಾಲಿಯನ್ ಪ್ರವಾಸಿ ಪೀಟ್ರೊಡೆಲ್ಲಾ ಪಾಲೆ ಗಮನಿಸಿದ್ದ.[೬] ಇದಕ್ಕಿಂತ ನವಿರಾದದ್ದು ಈಗಿನ ಅರವತ್ತು ನಂಬರ ಗಿರಣಿ ನೂಲಿನವು. ತೀರ ಜಿನುಗಾದ ನೂಲಿನ ಪಾರದರ್ಶಕ ಸೀರೆಗಳೂ ಇದ್ದು, ತೊಟ್ಟ ಆಭರಣಗಳನ್ನು ಸೀರೆಯಾಚೆಯಿಂದ ನೋಡಬಹುದಾಗಿತ್ತು. ಶುಭ್ರ ಬಿಳಿಯ ಇಲ್ಲವೇ ತಿಳಬಣ್ಣಗಳ ಮೈಯುಳ್ಳ ಸೀರೆಗಳಿಗೆ ರಬ್ಬಾದ ಅಂಚುಗಳು ಇರುವದನ್ನು ಕೆಲವರು ಉಟ್ಟಿದ್ದಾರೆ. ಇವಕ್ಕೆ ಹಳದಿ ಕೆಂಪು, ಹಸಿರು ಬಣ್ಣಗಳನ್ನು ಬಳಸಲಾಗಿದೆ. ತಿರುಗಿ ಇವೇ ಮಾದರಿಯ ಸೀರೆಗಳನ್ನು ತೀರ ಇತ್ತೀಚೆಗೆ ಕೆಲವು ಮಾಡೆಲ್‌ಗಳು ಪ್ರದರ್ಶಿಸಿದ್ದನ್ನು ವಿಶೇಷವಾಗಿ ಉಲ್ಲೇಖಿಸಬೇಕು!

ತಳಿರ್‌ಗಾವಿಯ, ಹೊಂಬಣ್ಣದ, ಚೆಂಗಣಗಿಲೆ, ಮಾಣಿಕದ ಹೊಳಪಿನ, ಪೊಂಬರಹದ ಕಿತ್ತಳೆ ಕಾವಿಯ ಸೀರೆಗಳನ್ನು ದೇವಪ್ಪ ಕವಿಯ ರಾಮ ವಿಜಯ ಕಾವ್ಯದಲ್ಲಿ ಕಾಣಬಹುದು.[೭] "ಮಿಸುಪ ಕೆಂಪಿನ ಪದ್ಮರಾಗದ। ರಸದ ರೇಖೆಯ ದಡಿಗಳಲ್ಲಿ ಚಿತ್ರಿಸಿದ ಕುಸುಮಗಳ " ರಚನೆಯ ಸೆರಗಿನ ಸೀರೆಯನ್ನು ಚಾಮರಸ ವರ್ಣಿಸಿರುವ.[೮] ಚಂದ್ರಗಾವಿ ಸೀರೆಯ ಉಲ್ಲೇಖ ಕಾವ್ಯಗಳಲ್ಲಿ ಬರುತ್ತದೆ. ಇಂಥ ಸೀರೆಯೊಂದನ್ನು ಲೇಪಾಕ್ಷಿಯಲ್ಲಿ ಗುರುತಿಸಬಹುದು. ಗೀರು



ಚೌಕುಳಿ ಸೀರೆ



ಗೀರು ಸೀರೆ



ಪಾರದರ್ಶಕ ಸೀರೆ

ಸೀರೆಗಳ ಸೊಗಸೇ ಬೇರೆ(28). ಅವನ್ನು ಒಂಟಿ ಇಲ್ಲವೇ ಜೋಡಿಯಾಗಿ ಸೀರೆಯುದ್ದಕ್ಕೂ ಹರಡುವಂತೆ ನೋಡಿಕೊಳ್ಳುತ್ತಿದ್ದರು. ಕೆಲವೊಮ್ಮೆ ಸಮಾನಾಂತರ ರೇಖೆಗಳಿರುತ್ತಿದ್ದವು. ಕೂದಲೆಳೆಯಷ್ಟು ಸಪುರ, ಓಂ ಪುಡಿಯಷ್ಟು ಮಧ್ಯಮ, ಬೆರಳ ಸೇವೆಗಯಷ್ಟು ದಪ್ಪ! ಗೆರೆಗಳಿಗೆ ಕಪ್ಪು, ಕೆಂಪು, ನೀಲಿಗಳಂಥ ರಬ್ಬಾದ ಬಣ್ಣಗಳನ್ನು ಬಳಸುವದೇ ಹೆಚ್ಚು. ಕೆಲವೊಮ್ಮೆ ಕಡುಪಾದ ರೇಖೆಯ ಇಕ್ಕೆಲದಲ್ಲಿ ತಿಳಿವರ್ಣ ರೇಖೆಗಳನ್ನು ಬಳಸಿ ಕಣ್ಣಿಗೆ ಆಕರ್ಷಕವಾಗಿ ಕಾಣುವಂತೆ ಮಾಡುವದೂ ಉಂಟು. ಚಚ್ಚೌಕ, ಕಾಟಕೋನ, ಚೌಕೋನಗಳನ್ನು ಅದೆಷ್ಟು ಪರಿಯಲ್ಲಿ ರಚಿಸಿದ್ದಾರೆಂದು ಹೇಳಲಿಕ್ಕಿಲ್ಲ! ಚೌಕೋನಗಳಲ್ಲಿ ಹೂಗೊಂಚಲು ಕುಸುರಿನ ಕೆಲಸಗಳನ್ನು ಸೇರಿಸಿದಾಗ ಅವುಗಳ ಅಂದ-ಚೆಂದ ಶಿಖರಕ್ಕೇರುತ್ತದೆ. ಇದರಂತೆ ಸೀರೆಗಳ ಆಕರ್ಷಣೆ ಹೆಚ್ಚಿಸಲು ವರ್ತುಲಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಹತ್ತಾರು ಚಕ್ರಗಳು, ನೂರಾರು ಪಠಾಣಿಗಳು, ಸಾವಿರಾರು ಗೋಲಕಗಳು, ಲಕ್ಷಾಂತರ ಬಿಂದುಗಳನ್ನು ಸೀರೆಯುದ್ದಕ್ಕೂ ಹರಿಸಿದ್ದಾರೆ(29). ಕೆಲವೆಡೆ ನೋಡುಗರಿಗೆ ಆಹ್ಲಾದಕಾರಿ ಅನುಭವವಾಗುವುದಕ್ಕಾಗಿ ರೇಖೆ, ಚೌಕೋನ, ವರ್ತುಲಗಳನ್ನು ಸಂಯುಕ್ತವಾಗಿಯೇ ಬಳಸಲಾಗಿದೆ. 'ಬರಹ'ದ ಸೀರೆಗಳ ಉಲ್ಲೇಖ ಕಾವ್ಯಗಳಲ್ಲಿ ಬರುತ್ತದೆ. ವರ್ತುಲಗಳನ್ನು ಓಡಿಸಿ, ಮಣಿಸಿ, ತಿರುವಿ ಮುದುಡಿ ಮಾಡಿ, ಸುಂದರ ಹೂ-ಬಳ್ಳಿಗಳನ್ನು ರಚಿಸುವ ಕಲೆ ಅಂದಿನವರಿಗೆ ಕೈಗೂಡಿತ್ತೆಂದು ಈ ಭಿತ್ತಿಚಿತ್ರಗಳನ್ನು ಪರೀಕ್ಷಿಸುವಾಗ ಅರಿವಾಗುವದು.

ಇಂಥ ಸುಂದರ ಚಿತ್ತಾರಗಳ ಸೀರೆಗಳನ್ನು ಹೇಗೆ ಸಿದ್ಧಮಾಡುತ್ತಿದ್ದರು? ಎಂದು ನಿರ್ಧರಿಸುವದು ಬಿಕ್ಕಟ್ಟಿನ ಕೆಲಸ! ನೇಯುವಾಗಲೇ ಹಾಸು-ಹೊಕ್ಕುಗಳಲ್ಲಿ ವಿವಿಧ ವರ್ಣಗಳ ನೂಲು, ಜರಿಗಳನ್ನು ಬಳಸಿ ಚಮತ್ಕಾರಿಕ ಡಿಝೈನ್‌ಗಳನ್ನು ನಿರ್ಮಿಸುತ್ತಿದ್ದಿರಬಹುದು. ತೊರವೆ ರಾಮಾಯಣದಲ್ಲಿ ಸೀರೆಗಳಿಗೆ ಪಲ್ಲವಾವಳಿ, ಮಕರ, ಭೃಂಗ, ಆನೆ, ಸಿಂಹ, ನವಿಲು, ಹಂಸಾವಳಿ, ಸುವರ್ಣಫಳಿ ಅಥವಾ ಚಿನ್ನದ ಜರಿಯ ಚಿತ್ರಗಳು, ಸಣ್ಣ ರತ್ನ, ಹರಳು, ಮುತ್ತ ಕೋದ ಸೆರಗುಗಳ ಉಲ್ಲೇಖ ಬರುತ್ತದೆ. [*೬] ಅದರಂತೆ ಮಾನಸೋಲ್ಲಾಸದ ಕಾಲಕ್ಕಾಗಲೇ ಯಂತ್ರಗಳಿಂದ ಬಣ್ಣ ಹಾಕುವ ಕಲೆ ಕರಗತವಾಗಿದ್ದು ನಾನಾವರ್ಣ ರೇಖೆ, ಪಂಚವರ್ಣದ ಅಂಚುಗಳು, ಸೂಕ್ಷ್ಮ ರೇಷೆ, ಬಿಂದು. ಚಕ್ರವರ್ತುಳಗಳ ವಿವಿಧಾಕೃತಿಗಳು ಚಿರಪರಿಚಿತವಾಗಿದ್ದವು. [*೧೦] ಬರಹದ ಸೀರೆಗಳೆಂದರೆ ಏಕವರ್ಣಿಯ ಸೀರೆಗಳ ಮೇಲೆ ವಿವಿಧ ಅಚ್ಚುಗಳನ್ನು ಒತ್ತಿ ಮಾಡಿದ ಚೀಟಿನವು. ಇದಕ್ಕೆ 'ಕಲಂಕಾರಿ' ಎಂದು ಆ ಬಳಿಕದ ಉರ್ದು ಶಬ್ದ ಜಾರಿಗೆ ಬಂದಿತು. ಆಂಧ್ರ ಒಂದರಲ್ಲಿ ಮಾತ್ರ ಈ ಒಂದು ಕಾಲಕ್ಕೆ ವೈಭವದಿಂದ ಮೆರೆದ ಅಚ್ಚಿನ ಅಥವಾ ಕುಂಚಗಳನ್ನು ಬಣ್ಣದಲ್ಲಿ ಅದ್ದಿ ಸೀರೆಯುದ್ದಕ್ಕೂ ವಿವಿಧ ನಕ್ಷೆಗಳನ್ನು ಬಿಡಿಸುವ ಕಲೆಯ 'ಬರಹ'ದ ಬಟ್ಟೆ ಉಳಿದುಕೊಂಡಿದೆ. ಜರತಾರಿಯ ಚಿತ್ತಾರವಂತೂ ಕಬಾಯಿ, ಕುಲಾವಿ, ಶಾಲು, ಸೀರೆಗಳ ಮೇಲೆ ಭರ್ಜರಿಯಾಗಿ ಕಂಗೊಳಿಸುತ್ತಿತ್ತು. ಅತ್ಯಾಧುನಿಕ ಸೀರೆಯ ತಯಾರಕರು ಲೇಪಾಕ್ಷಿಯ ಚಿತ್ತಾರಗಳನ್ನು ಬಳಸುವಷ್ಟು ನಿತ್ಯನೂತನವಾಗಿವೆ. ಅಳವಾದ ಅಧ್ಯಯನಕ್ಕೆ ಯೋಗ್ಯವಾಗಿವೆ. ನಿರಿಗೆಗಳಿಗೆ ಗೊಂಡೆ ಹಚ್ಚಿದ ಸೀರೆಗಳಿರುತ್ತದ್ದವೆಂದು ರಾಮ

ವಿಜಯ ಕಾವ್ಯ ತಿಳಿಸಿದರೆ ಚೌಕುಡಿ ಸೀರೆಯ ಕೊನೆಗೆ 'ಫ್ರಿಲ್'ಗಳನ್ನು ಹಚ್ಚಿದ್ದು ಲೇಪಾಕ್ಷಿ ಸೀರೆಯಲ್ಲಿ ನೋಡಬಹುದು. ಡ್ರೆಸ್, ಚೂಡಿದಾರಗಳ ಯುಗದಲ್ಲಿ ಹಳೇಕಾಲದ ಉಡಿಗೆ ಎನಿಸಿಕೊಂಡ ಸೀರೆಯೇ ಎಷ್ಟೊಂದು ಫ್ಯಾಶನೆಬಲ್ ಕಾಣಲು ಸಾಧ್ಯ! ಎಂದು ಲೇಪಾಕ್ಷಿ ಲಲನೆಯರು ತೋರಿಸಿಕೊಟ್ಟಿದ್ದಾರೆ. !

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **Epigraphia Indica,** Vol. XIII, p. 18, 1024 A.D.
*೨. ಆಂಡಯ್ಯ ಕವಿ ವಿರಚಿತ **ಕಬ್ಬಿಗರ ಕಾವಂ,** ಕನ್ನಡ ಸಾಹಿತ್ಯ ಪರಿಷತ್ತು, ಪ್ರಕಟನೆ ೧೯೭೭.
*೩. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸೋಮೇಶ್ವರ ವಿರಚಿತ **ಮಾನಸೋಲ್ಲಾಸ** (ಕನ್ನಡ ಅನುವಾದ) ಪ್ರಧಾನ ಸಂಪಾದಕರು ಡಾ|| ಎಂ. ಎಂ. ಕಲಬುರ್ಗಿ ಧಾರವಾಡ. ಪ್ರಥಮ ಸಂಪುಟ ೧೯೯೮ (ಮಾನ) ವಸ್ತ್ರೋಪಭೋಗ ಪದ್ಯ ೧೦೧೭ - ೧೦೩೦ ಪು. ೩೦೩.
*೪. ಭೀಮಕವಿಯ ಬಸವ ಪುರಾಣ (ಸಂ., ಆರ್. ಸಿ. ಹಿರೇಮಠ, ಧಾರವಾಡ ೧೯೫೮ ಅಧ್ಯಾಯ ೭, ಕಾಂಡ ೩.)
*೫. ಚಾಮರಸನ **ಪ್ರಭುಲಿಂಗ ಲೀಲೆ,** ಕನ್ನಡ ಸಾಹಿತ್ಯ ಪರಿಷಿತ್ತು ಪ್ರಕಟನೆ, ಅಧ್ಯಾಯ ೪, ಪದ್ಯ ೨೧.
*೬. **ಪ್ರವಾಸಿ ಕಂಡ ಇಂಡಿಯ,** ಸಂಪುಟ (ಸಂ. ಎಚ್. ಎಲ್. ನಾಗೇಗೌಡ), ಪುಟ ೨೬೫.
*೭. ದೇವಪ್ಪ ಕವಿ ವಿರಚಿತ **ರಾಮವಿಜಯಕಾವ್ಯ,** ಕ.ಸಾಪ. ೧೯೭೭, ಅಧ್ಯಾಯ ೮, ಪದ್ಯ ೬೫.
*೮. **ಪ್ರಭು ಲಿಂಗ ಲೀಲೆ,** ಅಧ್ಯಾಯ ೪, ಪದ್ಯ ೩೦
*೯. ಕುಮಾರವಾಲ್ಮೀಕಿ ವಿರಚಿತ **ತೊರವೆ ರಾಮಾಯಣ,** ೮ನೇ ಸಂಧಿ ಪದ್ಯ - ೧೫ - ೨೦.
*೧೦. **ಮಾನಸೋಲ್ಲಾಸ** - ೧, ಉಪರೋಕ್ತ ಪದ್ಯ - ೧೦೨೩, ಪು. ೩೦೪.



# ೬. ಕನ್ನಡಿಗರೇ ಮರೆತ ಟೋಪಿ : ಕುಲಾವಿ

ವಿಜಯನಗರ ಸಾಮ್ರಾಜ್ಯದ ಕಾಲ, (ಕ್ರಿ. ಶ. ೧೩೩೬-೧೫೬೫), ಸಾಹಿತ್ಯ, ಶಿಲ್ಪ, ವಾಸ್ತು, ಚಿತ್ರಕಲೆಗಳಲ್ಲಿ ವೈಶಿಷ್ಟ್ಯವನ್ನು ತೋರಿದಂತೆ ವೇಷಭೂಷಣಗಳಲ್ಲೂ ವೈಶಿಷ್ಟ್ಯವನ್ನು ಮೆರೆದಿದೆ. ಮುಸ್ಲಿಂ ಪ್ರಭಾವ ಬಲವಾಗಿ ನೆಲೆಯೂರುತ್ತಿದ್ದರೂ, ಅದರ ಅಂಶಗಳನ್ನು ಹೀರಿಕೊಂಡೂ ತನ್ನತನವನ್ನು ಎತ್ತಿ ಹಿಡಿದದ್ದು ಗಂಡಸರ ಉಡಿಗೆತೊಡಿಗೆಗಳ ಮಟ್ಟಿಗೆ ಗಮನಾರ್ಹವಾದ ಅಂಶವಾಗಿದೆ. ಇವುಗಳಲ್ಲಿ ಪುರುಷರ ಉದ್ದವಾದ ನಿಲುವಂಗಿ (ಕಬಾಯಿ), ನಡುವಿಗೆ ಓರಣವಾಗಿ ಸುತ್ತಿಕೊಳ್ಳುವ ಚಿತ್ತಾರದ 'ಸೀರೆ'ಗಳು ಹಾಗೂ ಎತ್ತರದ ಟೋಪಿ ಕುಲಾಯಿ ಅಥವಾ ಕುಲಾವಿ ಮುಖ್ಯವಾದವು. ಟೋಪಿಯ ಶ್ರೇಷ್ಠ ಹಾಗೂ ಮೊದಲ ಅವತಾರವಾಗಿದ್ದ, ಹೊಲಿದ ಪ್ರಪ್ರಥಮ ಶಿರೋಭೂಷಣವೇ ಕುಲಾವಿ. ಕುಲಾಯಿ, ಕೊಲಾಯ್, ಕಲ್ಲಿ ಎಂದೆಲ್ಲ ವಿದೇಶಿ ಪ್ರವಾಸಿಗರು ಗುರುತಿಸಿದಂತೆ, ಚರಿತ್ರೆ ಹಾಗೂ ಕಾವ್ಯಗಳಲ್ಲೂ ಕುಲಾವಿಯ ಉಲ್ಲೇಖ ಕಂಡುಬರುತ್ತದೆ. 'ಕೊಲಾ' ಅರಬ್ಬಿ ಶಬ್ದದಿಂದ. 'ಕುಲಾವಿ' ಬಂದಿದೆ. ಕುಲಾವಿ ಧರಿಸಿದ ಕೃಷ್ಣ ದೇವರಾಯನ ಕಂಚಿನ ಪ್ರತಿಮೆ, ಚರಿತ್ರೆಯ ಅಭ್ಯಾಸಿಗಳಿಗೆ ಸುಪರಿಚಿತ. ವಿಜಯನಗರ ಕಾಲದಲ್ಲಿ ಕಟ್ಟಲ್ಪಟ್ಟ ಹಲವಾರು ದೇವಾಲಯಗಳಲ್ಲಿಯ ಶಿಲಾಪ್ರತಿಮೆಗಳಲ್ಲಿ ಕುಲಾಯಿಯನ್ನು ಗುರುತಿಸಬಹುದು. ಆದರೆ ನಿಜಕ್ಕೂ ಅವುಗಳ ಅಂದ-ಚೆಂದ, ವರ್ಣವಿನ್ಯಾಸ, ಕಲಾತ್ಮಕತೆ ಹಾಗೂ ಕುಸುರಿ ಕೆಲಸದ ವೈವಿಧ್ಯದ ಸ್ಪಷ್ಟ ಕಲ್ಪನೆ ಬರಬೇಕಿದ್ದರೆ, ಸದ್ಯಕ್ಕೆ ಆಂಧ್ರಪ್ರದೇಶಕ್ಕೆ ಸೇರಿಹೋಗಿರುವ ಹಿಂದುಪುರ ಬಳಿಯ (ಅನಂತಪುರ ಜಿಲ್ಲೆ) ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯ ಸಂಕೀರ್ಣದಲ್ಲಿರುವ ಭಿತ್ತಿ ಚಿತ್ರಗಳನ್ನು ಕೂಲಂಕಷವಾಗಿ ಅಭ್ಯಸಿಸಲೇಬೇಕು.

ತೊಟ್ಟವರ ವ್ಯಕ್ತಿತ್ವಕ್ಕೆ ಭವ್ಯತೆ ನೀಡುತ್ತಿದ್ದ ಕುಲಾವಿ, ಆರೆಂಟು ಅಂಗುಲ ಎತ್ತರವಾಗಿದ್ದು., ಸುತ್ತಳತೆ ಹದಿನೈದು ಅಂಗುಲದವರೆಗೆ ಇರುತ್ತಿತ್ತು.[೧] ಅದಾಗಲೇ ವಿದೇಶಗಳೊಡನೆ ಅಯಾತ-ನಿರ್ಯಾತಗಳು ಬಲುದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದು ವಿದೇಶಿ ಬಟ್ಟೆ, ಪ್ರಾಮುಖ್ಯತೆ ಪಡೆದಿತ್ತು. ಕುಲಾವಿಯ ತಯಾರಿಕೆಗೆ ಬೇಕಾದ ದಪ್ಪ ವೆಲ್ವೆಟ್, ಸ್ಯಾಟಿನ್, ಟಫೆಟಾ, ರೇಶ್ಮೆಯ ಬಟ್ಟೆ-ಪರ್ಶಿಯ, ಡಮಾಸ್ಕಸ್, ಅಲೆಕ್ಸಾಂಡ್ರಿಯ, ಈಜಿಪ್ಟ್, ಚೀನಗಳಿಂದ ಬರುತ್ತಿತ್ತು. ಇವನ್ನೆಲ್ಲ ಜಾಗ್ರತೆಯಾಗಿ ತಲೆಯ ಅಳತೆಗೆ ಹೊಂದುವಂತೆ ಹೊಲಿದು, ಬಳಿಕ ಕಸೂತಿಯಿಂದ ಅಲಂಕರಿಸಬೇಕಾಗಿದ್ದರಿಂದ ಸಿಂಪಿಗ ವರ್ಗ, ತುಂಬ ಪ್ರತಿಷ್ಠೆ

ಹೊಂದಿ, ಅತ್ಯಂತ ಬೇಡಿಕೆಯಲ್ಲಿದ್ದ ವರ್ಗವಾಗಿದ್ದರೆ ಆಶ್ಚರ್ಯವಿಲ್ಲ! ಧರಿಸುವವರ ಸ್ಥಾನ-ಮಾನ, ಅಭಿರುಚಿಗಳಿಗೆ ತಕ್ಕಂತೆ ಕುಲಾವಿಗಳು ಸಿದ್ಧವಾಗಲಾರಂಭಿಸಿದವು. ಧನಿಕರು, ಅಧಿಕಾರಿಗಳು, ಅರಸುವರ್ಗದವರು ಬೇರೆ ಬೇರೆ ಸಂದರ್ಭಗಳಿಗೆ ಹೊಂದುವಂತೆ, ತಮ್ಮ ಇತರ ಅಲಂಕಾರಗಳಿಗೆ 'ಮ್ಯಾಚ್' ಆಗುವಂತೆ ಕುಲಾವಿಗಳನ್ನು ಧರಿಸುತ್ತಿದ್ದಿರಬೇಕು. ಕೃಷ್ಣದೇವರಾಯನ ಖಾಸಗಿ ಸಂಗ್ರಹದಲ್ಲಿ ಅದೆಷ್ಟು ರತ್ನ ಖಚಿತ ಕುಲಾವಿಗಳಿದ್ದವೆಂದು ಊಹಿಸುವದೂ ಕಷ್ಟ! ಆತನು ಅಪ್ತೇಷ್ಟರಿಗೆ ಆಗಾಗ ಕೊಡ ಮಾಡುತ್ತಿದ್ದ ಉಡುಗೊರೆಗಳಲ್ಲಿ ಸುವಾಸನಾ ದ್ರವ್ಯಗಳೊಂದಿಗೆ, ಕಬಾಯಿ, ಪೀತಾಂಬರ, 'ಕುಲ್ಲಾಯಿ'ಗಳೂ ಸೇರ್ಪಡೆಯಾಗುತ್ತಿದ್ದವೆಂಬುದು ಶ್ರೀಕೃಷ್ಣದೇವರಾಯನ ದಿನಚರಿಯಿಂದ ತಿಳಿದುಬರುತ್ತದೆ.

ಜನಸಾಮಾನ್ಯರು ವಿವಿಧ ಬಣ್ಣಗಳ ಬಟ್ಟೆಯ ಕುಲಾವಿಗಳಲ್ಲಿ ಹೂ, ಬಳ್ಳಿಗಳನ್ನು ಹೆಣೆಸಿಕೊಂಡರೆ, ಪ್ರತಿಷ್ಠಿತರು, ಬೆಳ್ಳಿಬಂಗಾರದ ಜರಿಯ ಕುಸುರಿ ಕೆಲಸ ಮಾಡಿಸುತ್ತಿದ್ದರು. ಜೊತೆಗೆ ಬೆಲೆ ಬಾಳುವ ಮುತ್ತುರತ್ನ ಹರಳುಗಳನ್ನೂ ಕೆಚ್ಚಿಸುತ್ತಿದ್ದರು. ಲೇಪಾಕ್ಷಿ ದೇವಾಲಯದ ಮುಖಮಂಟಪದ ದ್ವಿತೀಯ ಅಂಕಣದಲ್ಲಿ ಆ ದೇವಸ್ಥಾನದ ನಿರ್ಮಾಣ ಹಾಗೂ ವಿಸ್ತರಣೆಗೆ ಕಾರಣರಾದಂಥ ಸೋದರರನ್ನು ಚಿತ್ರಿಸಲಾಗಿದೆ. ಈರ್ವರೂ ಭಯ-ಭಕ್ತಿಯಿಂದ ತಮ್ಮ ಇಷ್ಟದೇವತೆಯನ್ನು ವಂದಿಸುತ್ತಿದ್ದಾರೆ. ನಾಲವತ್ತರ ಗಡಿಗೆ ಬಂದಿರಬಹುದಾದ ವಿರೂಪಣ್ಣ ದೃಢಕಾಯನಾಗಿ, ಗೌರವರ್ಣದವನಾಗಿದ್ದರೆ, ತಮ್ಮನಾದ ವೀರಣ್ಣನು ಸುಮಾರು ಮೂವತ್ತೈದರ ಪ್ರಾಯದ, ಕೃಶಾಂಗನಿದ್ದರೂ ಶೌರ್ಯದ ಮೀಸೆ ಹೊತ್ತ ಶ್ಯಾಮಾಂಗನಾಗಿದ್ದಾನೆ. ಇಬ್ಬರೂ ಎತ್ತರದ ಕುಲಾವಿಗಳನ್ನು ಧರಿಸಿದ್ದಾರೆ. ವಿರೂಪಣ್ಣನ ಕುಲಾವಿ ನೇರಿಳೆ ಬಣ್ಣದಿದ್ದು ಚೆಂಡುಮಲ್ಲಿಗೆಯಂಥ ಸುಂದರ ಹೂಗಳ ಕಸೂತಿ ಟೋಪಿಯ ಉದ್ದಕ್ಕೂ ಕಂಡುಬರುತ್ತಿದೆ. ಜೋಡಿ ರಿಬ್ಬನ್‌ಗಳಂಥ ಚುಂಗನ್ನು ಗಾಳಿಯಲ್ಲಿ ಹಾರಿಬಿಡಲಾಗಿದೆ. ವೀರಣ್ಣನ ಕುಲಾವಿಗೆ ಹಸಿರು ಬಣ್ಣದ ಬಳ್ಳಿಗಳು ಒಂದರ ಮೇಲೊಂದು ಹಾದು ಹೋದಂತೆ ಅಲಂಕರಿಸಲಾಗಿದೆ. ನಡುನಡುವೆ ಹೂಗಳನ್ನು ರಚಿಸಲಾಗಿದೆ.

ಲೇಪಾಕ್ಷಿ ದೇವಾಲಯದ ಹೆಚ್ಚಿನ ಚಿತ್ರಗಳು, ರಾಮಾಯಣ, ಮಹಾಭಾರತ ಹಾಗೂ ಮುಖ್ಯತಃ ಶಿವಪುರಾಣದ ಪ್ರಸಂಗಗಳನ್ನು ಪ್ರತಿನಿಧಿಸಿದರೂ, ದೇವದರ್ಶಕ್ಕೆ ನೆರೆದ ಭಕ್ತಾದಿಗಳು ಸಮಕಾಲೀನ ವ್ಯಕ್ತಿಗಳೇ ಆಗಿದ್ದಾರೆ. ಅವರನ್ನೆಲ್ಲ ಸಮಕಾಲೀನ ಉಡುಪಿನಲ್ಲಿಯೇ ಚಿತ್ರಿಸಲಾಗಿದ್ದರಿಂದ ನಾಲ್ಕೈದು ಶತಕಗಳಷ್ಟು ಹಿಂದಿನ ಕನ್ನಡಿಗರ ಉಡಿಗೆ-ತೊಡಿಗೆಗಳನ್ನು ಸುಲಭವಾಗಿ ಕಂಡುಕೊಳ್ಳಬಹುದಾಗಿದೆ. ಕುಲಾವಿ ಎಂಬುದು ಕೇವಲ ರಾಜ ಮಹಾರಾಜರಿಗೆ ಹಾಗೂ ಉನ್ನತ ಪ್ರತಿಷ್ಠಿತರಿಗೆ ಮೀಸಲಾಗಿತ್ತು ಎಂದು ಹಲವು ಇತಿಹಾಸಕಾರರು ನಂಬಿದಂತಿದೆ. ಆದರೆ ಕುಲಾವಿ, ಸಾಮಾನ್ಯ ತಲೆಯುಡಿಗೆಯಾಗಿದ್ದು ತಂತಮ್ಮ ಸ್ಥಾನ ಮಾನ ಪ್ರತಿಷ್ಠೆಗೆ ಹೊಂದುವಂತೆ ಅದನ್ನು ಹೊಲಿಸಿಕೊಳ್ಳುವ ಜೊತೆಯಲ್ಲಿ ಇನ್ನೂ ಕೆಲವು ಭಕ್ತಾದಿಗಳೂ ಕುಲಾವಿಗಳನ್ನು ಧರಿಸಿರುವದು ಕಂಡುಬರುತ್ತದೆ.



1. ರಿಬ್ಬನ್ ಟೇಪಿನ ಕುಲಾವಿ



2. ಕಿನ್ ಕಾಪಿನ ಕುಲಾವಿ



3. ಹೂಬಳ್ಳಿ ನಕ್ಷೆಯ ಕುಲಾವಿ



4. ವೆಲ್‌ವಟ್ ಕುಲಾವಿ



5. ಕುಸುರಿನ ಕೆಲಸದ್ದು



6. ಮಣಿ ಮುತ್ತು ಕೋದ ಕುಲಾವಿ

ರಸಿಕನೋರ್ವನು ಗಡ್ಡಮೀಸೆ, ಬೆಳೆಸಿ, ಲೋಲಾಕಿನಂಥ ಒಡವೆ ಧರಿಸಿ, ವರ್ತುಳಗಳನ್ನೇ ಚಿತ್ರಿಸಿದ ಕುಲಾವಿ ಧರಿಸಿದ್ದಾನೆ. ಇನ್ನೊಬ್ಬನು ಮುತ್ತಿನ ಹಾರಗಳನ್ನು ಧರಿಸಿ ಹೂ-ಬಳ್ಳಿ ಹಾಕಿಸಿದ ಕುಲಾವಿ ತೊಟ್ಟಿದ್ದಾನೆ. ಕೆಲವುಗಳ ಮೇಲೆ ಮುತ್ತು ಹರಳುಗಳ ಅಲಂಕಾರವನ್ನು ಗುರುತಿಸಬಹುದು. ಕೆಲವರ ಕುಲಾವಿಗಳ ಕೆಳಗಡೆ ಬಿಳಿಯ ಬಟ್ಟೆಯನ್ನು ಧರಿಸಿದ್ದಿದೆ. ತಲೆಗೆ ಹಾಕಿದ ಎಣ್ಣೆಯಿಂದ ಈ ಬೆಲೆಯುಳ್ಳ ಟೋಪಿಗಳನ್ನು ರಕ್ಷಿಸಲು ಈ ಉಪಾಯವನ್ನು ಕೈಕೊಂಡಿರ ಬಹುದಾದ ಸಾಧ್ಯತೆ ಇದೆ.

ಗಂಡಸರಿಗಷ್ಟೇ ಈ ಕುಲಾವಿ ಮೀಸಲಾಗಿತ್ತು ಎಂದು ನಂಬಬೇಕಾಗಿಲ್ಲ. ಹಬ್ಬಹರಿದಿನಗಳಂಥ, ನಾಡಹಬ್ಬದಂಥ ಮೆರವಣಿಗೆಯ ವಿಶೇಷ ಪ್ರಸಂಗಗಳಲ್ಲಿ ಅರಮನೆಯ ಹೆಂಗಳೆಯರೂ, ಒಡವೆಗಳ ಭಾಗವಾಗಿ ಕುಲಾಯಿ ಧರಿಸುತ್ತಿದ್ದರು, ಎಂದು ಪ್ರತ್ಯಕ್ಷದರ್ಶಿ ಡುಮಿಂಗೋ ಪಾಯೇಸ್‌ನು ವರದಿಸಿದ್ದಾನೆ.[೬] ರಾಯಭಾರಿಗಳು, ಸೇನಾಪತಿಗಳು, ಮಾಂಡಲಿಕರು, ಅರಸನಿಂದ ಕುಲಾಯಿಗಳನ್ನು ಇಂಥ ಪ್ರಸಂಗಗಳಲ್ಲಿ ಉಡುಗೊರೆಯಾಗಿ ಪಡೆಯುತ್ತಿದ್ದರು. ಅನೇಕಾನೇಕ ದೇವಾಲಯಗಳಲ್ಲಿಯ ಶಿಲಾವಿಗ್ರಹಗಳಿಗೆ ದೇವ-ದೇವತೆಗಳಿಗೆ ಕುಲಾವಿಯಾಕಾರದ ಕಿರೀಟಗಳನ್ನು ಕಂಡರಿಸಿದ್ದನ್ನು ಹಾಗೂ ಲೇಪಾಕ್ಷಿಯ ಭಿತ್ತಿಚಿತ್ರಗಳಲ್ಲಿ ಕುಲಾವಿ ತೋರಿಸಿದ್ದನ್ನು ನೋಡಿದರೆ ಅದು ಆ ಕಾಲದ ಕರ್ನಾಟದ ರಾಷ್ಟ್ರೀಯ ತೊಡಿಗೆ (National Wear) ಆಗಿದ್ದು ಸ್ಪಷ್ಟ.

ವೇಗದ ಕುದುರೆಯ ಸವಾರಿಯ ಸಂದರ್ಭದಲ್ಲೂ ಕುಲಾವಿಯು ತಲೆಯಿಂದ ಬೀಳುತ್ತಿರಲಿಲ್ಲವೆಂಬ ಬಾರ್ಬೋಸಾನ ಉದ್ಗಾರ ನೋಡಿದರೆ ಅವು ಬಿಗಿಯಾಗಿ ಕೂಡ್ರುವಂತೆ ತಲೆಯಳತೆ ಕೊಟ್ಟೇ ಹೊಲಿಸುತ್ತಿದ್ದರಿಬೇಕೆಂಬ ಅಭಿಪ್ರಾಯಕ್ಕೆ ಬರುವಂತಾಗುತ್ತದೆ. ತೊರವೆ ರಾಮಾಯಣ, ಕುಲಾವಿಯನ್ನು ಹೆಸರಿಸಿದಂತೆ ದೇವಪ್ಪ ಕವಿಯ ರಾಮವಿಜಯ ಕಾವ್ಯವು (೧೫೪೦) 'ಸಿಂಗರಿಸಿದ ಜುಂಗಿನ ಕೊನೆಯ, ಬರೆಹದ ಛಂದ ಕುಲಾವಿಯ ದೊರೆಗಳ ನೆರವಿ'ಯನ್ನು ಉಲ್ಲೇಖಿಸುತ್ತದೆ.[೭] ಕುಲಾವಿಯ ತುದಿಗೆ ಗೊಂಡೆಗಳ ಸಿಂಗಾರವಿದ್ದು, ತುದಿಗೆ ಅದು ಬರಹದ ಅಥವಾ ಪ್ರಿಂಟೆಡ್ ಬಟ್ಟೆಯಿಂದ ಹೊಲಿಯಲ್ಪಟ್ಟಿತ್ತು, ಎಂದು ಅರ್ಥೈಸಬೇಕಾಗತ್ತದೆ. ಇದೇ ಶತಮಾನದ ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣವು ಬಿಜ್ಜಳನ ಆಸ್ಥಾನದ ಪಂಡಿತರು, 'ಮೇಲುಗುಲ್ಲಾಯಿ'ಗಳನ್ನು ಧರಿಸಿದ್ದರು ಎಂದು ಹೇಳುತ್ತದೆ.[೮]

ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರ ಕಾಲದಲ್ಲೆಲ್ಲ 'ಉಷ್ಣೀಷವು' ಸಾಮಾನ್ಯ ತಲೆಯುಡುಗೆಯಾಗಿತ್ತು. ತ್ರಿವಿಕ್ರಮಭಟ್ಟನ ನಲಚಂಪು 'ಮಹೋಷ್ಣಿಷ' ಅಥವಾ ರತ್ನಖಚಿತ, ಕಲಾಪತ್ತಿನ ಕೆಲಸವಿದ್ದ ದೊಡ್ಡರುಮಾಲನ್ನು ಹೆಸರಿಸಿದರೆ,[೬] ಭೂಲೋಕ ಮಲ್ಲನ ಮಾನಸೋಲ್ಲಾಸವು,[೭] ಬಗೆಬಗೆಯ ಉಷ್ಣೀಷಗಳು ಓಲಗದ ವೇಷಭೂಷಣಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದನ್ನು ಸೂಚಿಸುತ್ತಿದೆ. ಸ್ಥಾನಮಾನದಂತೆ, ರಸಿಕತೆಯ ಪ್ರತೀಕವಾಗಿ ಈ ಜರಿರುಮಾಲು ಅಥವಾ ಪೇಟ ಹಲವು ರೂಪಗಳಲ್ಲಿ ರಾಷ್ಟ್ರಾದ್ಯಂತ ವಿರಾಜಿಸುತ್ತಲೇ ಇತ್ತು-ಶತಶತಕಗಳ ಕಾಲ. ನಂತರ ಕುಲಾವಿಯ ಆಳ್ವಿಕೆ ಪ್ರಾರಂಭವಾಯಿತು! ವಿಜಯ ನಗರದ ಅಳಿಗಾಲದ ಬಳಿಕವೂ ಕುಲಾಯಿಯ ಪ್ರತಿಷ್ಠೆ ಮುಂದರಿದು ಬಂದಂತೆ ತೋರುತ್ತದೆ. ಗೋವಿಂದ

ವೈದ್ಯನ 'ಕಂಠೀರವ ನರಸರಾಜ ವಿಜಯ'ದ ಪ್ರಕಾರ, ಆ ದೊರೆಯು, ನವರಾತ್ರಿಯ ಸಂದರ್ಭದಲ್ಲಿ ಕುಲಾಯಿ' ಧರಿಸಿಯೇ ಮಂಗಳೋತ್ಸವದಲ್ಲಿ ಪಾಲುಗೊಳ್ಳುತ್ತಿದ್ದನಂತೆ.[೮] ಬೆಂಗಳೂರಿನ ಬೆಳವಣಿಗೆಗೆ ನೆಲೆಗಟ್ಟು ಹಾಕಿದ ಕಂಪೇಗೌಡನ ಕಾಲಕ್ಕೂ ಕುಲಾಯಿ ಮೆರೆಯುತ್ತಿತ್ತು ಎಂಬುದು ಅವನ ಪುತ್ಥಳಿಕೆಯಿಂದ ಅರಿತುಕೊಳ್ಳಬಹುದಾಗಿದೆ. ವಿಜಯನಗರದ ವೈಭವ ಕುಗ್ಗಿದಂತೆ ಕುಲಾವಿಯ ಎತ್ತರವೂ ಕಡಿಮೆಯಾಗುತ್ತ ಬಂದಿತ್ತು. ನಂತರದ ಶತಮಾನಗಳಲ್ಲಿ ಅದು ಜರಿಟೋಪಿಗೆ ಅವಕಾಶ ಮಾಡಿಕೊಟ್ಟಿತ್ತು. ಈ ಶತಕದ ನಾಲ್ಕನೆಯ ದಶಕದವರೆಗೂ ಕರ್ನಾಟಕದಲ್ಲಿ ಜರಿ ಕೆಲಸ ಮಾಡಿದ ವೆಲ್ವೆಟ್ ಟೋಪಿಗಳು ಉಳ್ಳವರ ಮಕ್ಕಳ ತಲೆಯ ಮೇಲೆ ರಾರಾಜಿಸುತ್ತಿದ್ದವು - ಗಾಂಧಿ ಟೋಪಿ ಜೋರಾದ ಪೈಪೋಟಿ ಇದ್ದರೂ ಸಹ! ಈಗ ಮಾತ್ರ ತಲೆಯ ಒಳಗನ್ನೇ ಪ್ರತಿಬಿಂಬಿಸುವ ತೆರದಲಿ ಅನಿಸುವಂತೆ ಬರಿದಲೆಯೇ ಸಾಮಾನ್ಯವಾಗಿದೆ!.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. Dames : The book of Duarte Barbosa Vol II P. 126

*೨. ಶ್ರೀಕೃಷ್ಣ ದೇವರಾಯನ ದಿನಚರಿ : (ಪ್ರ.ಸಂ) ಸೀತಾರಾಮಯ್ಯ ಎಮ್. ವಿ., ಬೆಂಗಳೂರು ೧೯೮೩ ...... ಕುಲಾಯಿ, ಕಬಾಯಿ ದಟ್ಟಿಯೀ ದೇಶದ ಹಾಗೆ ಉಡುಗೊರೆ, ಅಡಕೆಯಲೆ ಕೊಟ್ಟು ಕಳಹುವ ಕಟ್ಟಳೆಯಿಲ್ಲಿವೆಂದು. . . ಪುಟ. ೧೭ .

*೩. ರಾಬರ್ಟ್ ಸಿವೆಲ್ : ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ, (ಕನ್ನಡಕ್ಕೆ ಡಾ|| ಸದಾನಂದ ಕನವಳ್ಳಿ)ಹಂಪಿ, ೧೯೯೨, ಡೊಮಿಂಗೊಪ್ಯಾಸ್‌ನ ಕಥನ,

*೪. ದೇವಪ್ಪ ಕವಿ ವಿರಚಿತ ರಾಮವಿಜಯ ಕಾವ್ಯ : ( ಸಂ.) ಟಿ. ಕೇಶವ ಭಟ್., ಬೆಂಗಳೂರು ೧೯೬೯, ಸಂಧಿ ೪, - ಪದ್ಯ ೬೯

*೫. ವಿರೂಪಾಕ್ಷ ಪಂಡಿತಕೃತ ಚೆನ್ನಬಸವಪುರಾಣ (ಅಧ್ಯಾಯ ೭- ಪದ್ಯ ೮) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೭.

*೬. ಮಹಾಕವಿ ತ್ರಿವಿಕ್ರಮಭಟ್ಟ ವಿರಚಿತ ನಲಚಂಪೂ : ಅಥವಾ ದಮಯಂತೀ ಕಥಾ (ಸಂಸ್ಕೃತ) : (ಸಂ) ಕೈಲಾಸಪತಿ (ತ್ರಿಪಾಠೀ), ವಾರಾಣಾಸಿ ೧೯೭೭, ಅಧ್ಯಾಯ ೧ - ಪದ್ಯ - ೫೨

*೭. **Manasollasa of King Somesvara** Pt. II : (ಸಂ). ಶ್ರೀಗೋಂದೇಕರ್ ಜಿ.ಕೆ.ಬರೋಡ, ೧೯೫೯ ಅಧ್ಯಾಯ ೧೧, ವಿಂಶತಿ ೩, ಪದ್ಯ ೧೪

*೮. ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯ : (ಸಂ) ಶ್ಯಾಮಾಶಾಸ್ತ್ರಿ ಅರ್., ಮೈಸೂರು ೧೯೭೧ : 'ರಂಗುಮಾಣಿಕದ ಕುಲಾಯಿ ಭೂಪಾಲಗೆ ........ ಅಧ್ಯಾಯ೧೬' ಪದ್ಯ ೫೯ 'ಸಿರಪೇಷ್‌ತುರಾಯಿ ಕಲ್ಗಿಯನು ನರಸಿಜಮುಖಿ ಪಿಡಿದು ನಿಂತಿರ್ದಳು .....'ಅಧ್ಯಾಯ ೨೪, ಪದ್ಯ ೬೯.


★★★

# ೭. ಗಂಡಸರಿಗೂ ಸೀರೆ !

ಕರ್ನಾಟಕದ ಇತಿಹಾಸ, ಸಾಹಿತ್ಯ, ಶಿಲ್ಪ ಮತ್ತು ಭಿತ್ತಿ ಚಿತ್ರಗಳನ್ನು ಕೂಲಂಕಷವಾಗಿ ಅವಲೋಕಿಸಿದಾಗ ಪುರುಷರು ತಮ್ಮ ವ್ಯಕ್ತಿತ್ವ,ರೂಪಗಳಲ್ಲಿ ಹೆಚ್ಚಳ ಮಾಡಲು, ಇತರ ಅಲಂಕಾರಗಳೊಂದಿಗೆ ಸ್ತ್ರೀಯರೊಂದಿಗೆ ಸ್ಪರ್ಧಿಸಿ ಸೀರೆಗಳನ್ನು ಉಡುತ್ತಿದ್ದರೆಂಬ ಸತ್ಯದ ಅರಿವಾಗುವುದು.

'ಸೀರೆ' ಶಬ್ದ, 'ಚೀರ' ಸಂಸ್ಕೃತ ಪದದ ತದ್ಭವವಾಗಿದ್ದು, ಉಡಬಹುದಾದ ಉದ್ದಳತೆಯ ಯಾವುದೇ ಬಟ್ಟೆಯನ್ನು ಸೂಚಿಸುತ್ತದೆ. ಬೌದ್ಧಕಾಲದಿಂದ ಇಂದಿನವರೆಗೂ ಒಂದೇ ಬಟ್ಟೆ (ಸೀರೆ) ಉಡುವ ಪದ್ಧತಿ ಜಾರಿಯಲ್ಲಿದೆ. ತಾಳಗುಂದದ ಪ್ರಸಿದ್ಧ ಅಗ್ರಹಾರದಲ್ಲಿ ಹಲವು ವಿದ್ಯಾರ್ಥಿಗಳು ಓದುತ್ತಿದ್ದು ಅವರಿಗೆ ವರ್ಷ ವರ್ಷವೂ ಸೀರೆಗಳನ್ನು ಹಂಚುವ ಏರ್ಪಾಡು ಮಾಡಲಾಗಿತ್ತು.[೧] ಸೀರೆಗಳ ಅಂತರ್ ರಾಜ್ಯ ವ್ಯಾಪಾರದ ಮಳಿಗೆಗಳು ಬೆಳಗಾಂವಿಯಲ್ಲಿದ್ದು ಚಿನ್ನದ ಜರಿಯ ಕಲಾಬತ್ತಿನ ಕೆಲಸ ಮಾಡಿದ, ಮಾಡದ ಸೀರೆಗಳ 'ದೂಸಿಗವಸರ'ಗಳು ಹನ್ನೆರಡನೆಯ ಶತಮಾನದಲ್ಲಿ ಪ್ರಸಿದ್ಧವಿದ್ದವು.[೨] ಕಬ್ಬಿಗ ಆಂಡಯ್ಯನು ತನ್ನೂರಿನ ಅಂಗಡಿಗಳ ಅಂದದ ಸೀರೆಗಳನ್ನು ವರ್ಣಿಸಲು ಮರೆತಿಲ್ಲ.

"ಮಿಗೆ ಬೆಲೆಯೇರಿದ ಪೂಲಿಯ ಮಗರಿಯ ದೋರಿಯದ ಪರಿಯ ತಲವಟ್ಟಿಯ ಕಾಡಿಗೆ
ನೀರು ಬಟ್ಟೆಯ ಮಳಿಗೆಗಳಿಂ ಸೋಲಿಪುದು ಸೀರೆ ಪರದರ ಪಸರಂ"

ಪೂಲಿ, ಮಗರಿ, ತಲವಟ್ಟಿ, ಕಾಡಿಗೆ ನೀರು ಇವೆಲ್ಲ ಊರುಗಳಲ್ಲಿ ಚೆಂದದ ಸೀರೆಗಳನ್ನು ತಯಾರಿಸುತ್ತಿದ್ದರು, ಎಂದು ಅರಿವಾಗುವುದು.

ಬಸವ ಪುರಾಣದಲ್ಲಿ ಭೀಮಕವಿಯು ಬಗೆಬಗೆಯ ಸೀರೆಗಳನ್ನು ಉಲ್ಲೇಖಿಸುತ್ತಾನೆ.

ಕಟ್ಟುವಣ್ಣದ ಪಟ್ಟೆ, ಬಲ್ಲಾಳದಟ್ಟಿ
ಭೂಸಲೆ, ಮೇಘವಣ್ಣ ಪಟ್ಟೆ
ತವರಾಜಂ, ಮರಕತದ ಬಟ್ಟೆ
ಮಾಂದಳಿರ ಪಟ್ಟೆ, ಸಣ್ಮವಡಂಚೆಯಂ
ಪೊಂಬಟ್ಟೆ, ಸಿರಿಗಣೆ, ಗುಜ್ಜರಾಷ್ಟ್ರದ ಪಟ್ಟೆ
ವಾರಣಾಸಿಯ ದಸರಿ . . . . .[೩]



1. ಚೌಕುಡಿಯ ಸೀರೆ

2. ಕಿರಿ ಅಂಚಿನ ಸೀರೆ



3. ಬಿಂದುಗಳಿಂದ ಅಲಂಕೃತ

4. ವಿಪುಲ ನಿರಿಗೆಯ ಸೀರೆ



5. ಬಿಂದುಗಳ ಮಡಿಕೆಯ ಸೀರೆ

6. ಗೀರು ನಕ್ಷೆಯ ಸೀರೆ

7. ಮಾಡ್ ನಕ್ಷೆಯ ಸೀರೆ

ಕಟ್ಟು ಬಣ್ಣದ ಅಂದರೆ ಬಣ್ಣ ಹೋಗದ ಸೀರೆಯನ್ನು ಉಲ್ಲೇಖಿಸಿದ್ದರಿಂದ ನೀರಿಗೆ ಹಾಕಿದೊಡನೆ ಬಣ್ಣಗೇಡಿ ಯಾಗುವ ಸೀರೆಗಳೂ ಪ್ರಚಲಿತವಿದ್ದಿರಲೇಬೇಕು!

ಹೊಯ್ಸಳರ ನಾಡಿನಿಂದ ಬಂದದ್ದು ಬಲ್ಲಾಳ ದಟ್ಟಿಯಿರಬೇಕು. ಮಹಾರಾಷ್ಟ್ರದಿಂದ ಬಂದುದು ಭೋಸಲೆ (ಭೂಸಲೆ) ಬಟ್ಟೆ, ಸ್ಥಾನೀಯ ಸಿರಿಗಣೆಯದು ರೇಷ್ಮೆ ಯಾದರೆ, ಗುಜರಾಥ ಮತ್ತು ಕಳಿಂಗದವೂ ಇಲ್ಲಿ ಜನಪ್ರಿಯವಾಗಿದ್ದವು. ವಾರಣಾಸಿಯ ದಸರಿ ಅಥವಾ ಬನಾರಸ್ ಸಿಲ್ಕು ಅಂದಿನಿಂದ ಇಂದಿನವರೆಗೂ ಜನರ ಆದರ ಉಳಿಸಿಕೊಂಡಿದೆ. ಮಾನಸೋಲ್ಲಾಸ ಬರೆದ ಚಾಲುಕ್ಯ ದೊರೆ ಸೋಮೇಶ್ವರನು ತನ್ನ ಕಾಲದಲ್ಲಿ (೧೧೨೬-೧೧೩೮ ಕ್ರಿ. ಶ.) ಕರ್ನಾಟಕಕ್ಕೆ ಯಾವ ಯಾವ ಪ್ರದೇಶಗಳಿಂದ ಸೀರೆಗಳು ಬರುತ್ತಿದ್ದವು ಎಂಬುದನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಪೊದ್ದಲಪುರ, ಚೀರ ಪಲ್ಲಿ, ನಾಗಪಟ್ಟಣ, ತೊಂಡೆಮಂಡಲ, ಚೋಳ ದೇಶ, ವಂಗ, ಕಳಿಂಗ, ಸಿಂಹಳ, ಅನಹಿಲವಾಡ (ಗುಜರಾಥ), ಮೂಲಸ್ಥಾನ ಅಥವಾ ಮುಲ್ತಾನದವು ಪ್ರಮುಖವಾದವುಗಳು.[೪] ಶುಭ್ರ ಬಣ್ಣ, ಬೀದಿ ಬಿಳಿ (ಆಫ್‌ವೈಟ್?) ಗಳು ಹೆಚ್ಚು ಬೇಡಿಕೆಯ ಬಣ್ಣಗಳಾದರೂ ಮುಗಿಲು ಬಣ್ಣ, ಗಿಳಿ ಹಸಿರು, ಮಾವಿನ ತಳಿರು, ತಿಳಿ ಹಳದಿ, ಸುವರ್ಣ ವರ್ಣದ ಬಟ್ಟೆಗಳೂ ಗಂಡಸರಲ್ಲಿ ಪ್ರಿಯವಾಗಿದ್ದವು.

ಪ್ರಾಚೀನ ಕನ್ನಡ ಸಾಹಿತ್ಯ ಓದಿದವರಿಗೆ ಸೀರೆಗಳ ಸ್ವಾರಸ್ಯಕರ ವರ್ಣನೆಗಳು ಸಾಕಷ್ಟು ಪರಿಚಿತ. ಸಿದ್ಧರಾಮ ಚರಿತದಲ್ಲಿ ರಾಘವಾಂಕನು 'ಹೊಸ ದೇಸಿಕಾರತನ'ದಲ್ಲಿ ಶೋಭಿಸುವ ಹಸಿರು ಮಡಿಯ, ಬೆಳ್ಳಿಯ ಅಂಚಿನ, ಚಿನ್ನದ ನಕ್ಷೆಯ, ಚೀನಾಂಬರದ ಸಂಧ್ಯಾರಾಗದ ಹಂಸಶುಭ್ರವಾದ, ಧೂಳಿಯ ಬಣ್ಣದ ಸೀರೆಗಳ ಬಗ್ಗೆ ಹೇಳಿದ್ದಾನೆ.[೫] ಹರಿಹರನು ಸೀರೆಗಳ ಮೇಲಿರುವ ಲತಾವಳಿ, ಪುಷ್ಪಾವಳಿ, ಹಂಸಾವಳಿ, ಸಿಂಹಾವಳಿಗಳನ್ನು ಗಮನಿಸಿ ತನ್ನ ಪ್ರಾಣಿ ಪ್ರೇಮ ನಿಸರ್ಗ ಪ್ರೇಮವನ್ನು ಸೂರೆ ಮಾಡಿದ್ದಾನೆ.[೬] ಇದರಂತೆ ಚೌಕಡಿ, ವರ್ತುಳ, ಬಿಂದು, ಗೀರು, ರೇಖೆಗಳ ಬಗೆಬಗೆಯ ಆಕೃತಿಗಳಿಂದ ಸೀರೆಗಳನ್ನು ಅಲಂಕರಿಸುತ್ತಿದ್ದರು. ಆರ್ಥಿಕ ಸ್ಥಿತಿ -ಗತಿ, ಮತ್ತು ಕೈಕೊಂಡ ವೃತ್ತಿಗಳಿಗೆ ಅನುಗುಣವಾಗಿ ಸೀರೆಗಳನ್ನು ಉಡುತ್ತಿದ್ದರು. ಜನಸಾಮಾನ್ಯರು, ದಟ್ಟಿ, ಧೋತರ, ಪಂಚೆ, ಕಿರಿಪಂಚೆಗಳನ್ನು, ಅಂಗವಸ್ತ್ರಗಳನ್ನು ಕೊಳ್ಳುತ್ತಿದ್ದರು. ಸಿರಿವಂತರು, ರಾಜ-ಮಹಾರಾಜರು ನವಿರಾದ, ಕಲಾಪತ್ತಿನ ಕಸೂತಿಯಿದ್ದ ರೇಶ್ಮೆ ಸೀರೆಗಳನ್ನೇ ಕೊಳ್ಳುತ್ತಿದ್ದರು. ಅಲ್ಲದೇ ಋತುಮಾನಗಳಿಗೆ ಅನುಸಾರವಾಗಿ ಸೀರೆಗಳನ್ನು ಬದಲಾಯಿಸುತ್ತಿದ್ದರು. ವಸಂತ ಋತುವಿನಲ್ಲಿ ತೆಳುವಾದವುಗಳು, ಬೇಸಿಗೆಯಲ್ಲಿ ಶ್ವೇತವರ್ಣದವು, ಮಳೆಗಾಲದಲ್ಲಿ ರಬ್ಬಾದವುಗಳು ಶರದ್ ಋತುವಿನಲ್ಲಿ ಹೊಂಬಣ್ಣದವನ್ನು ಉಡುತ್ತಿದ್ದರು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಯಂತ್ರಗಳಿಂದ ಬಣ್ಣ ಹಾಕುವುದು, ಅಚ್ಚು ಹೊಡೆಯುವ ಉದ್ದಿಮೆಗಳು ಪ್ರಚಲಿತವಿದ್ದವು. ನೀರಿಗೆ ಹಾಕಿದಂತೆ ಹೆಚ್ಚೆಚ್ಚು ಕಾಂತಿಮಯವಾಗುವ ಬಟ್ಟೆಗಳ ಬಗ್ಗೆಯೂ ಹೇಳಲಾಗಿದೆ.[೬]

ಕರ್ನಾಟಕದ ಗಂಡಸರು ಸೀರೆಗಳನ್ನು ಉಟ್ಟು ರಸಿಕತೆಯಿಂದ ಮೆರೆಯುವುದನ್ನು ನೋಡಿ ಕಾಶ್ಮೀರದ ದೊರೆ ಹರ್ಷನು ತನ್ನ ರಾಜ್ಯದಲ್ಲಿಯೂ ಇಂಥ ಬಟ್ಟೆ ಬರೆಗಳನ್ನು ರೂಢಿಯಲ್ಲಿ ತಂದನೆಂದು ಕಲ್ಹಣನ ರಾಜ ತರಂಗಿಣಿ ಹೇಳುತ್ತದೆ.[೬]

ಶಿಲ್ಪಗಳಲ್ಲಿ, ವೀರಗಲ್ಲುಗಳಲ್ಲಿ, ಅಲ್ಲೊಂದು ಇಲ್ಲೊಂದು ಸೀರೆಯುಟ್ಟ ಪುರುಷರನ್ನು ಗುರುತಿಸಬಹುದು. ಶ್ರವಣಬೆಳ್ಗೊಳದ ಜೈನಮಠದಲ್ಲಿರುವ ಭಿತ್ತಿ ಚಿತ್ರಗಳಲ್ಲಿ, ಊರ ಜಾತ್ರೆಯಲ್ಲಿ ಸೀರೆಯ ಮಳಿಗೆಗಳನ್ನು ಬಿಂಬಿಸಲಾಗಿದೆ. ಅಂಗಡಿಯವನು ತೋರಿಸಿದ ಸೀರೆಯನ್ನು ಪುರುಷನೋರ್ವನು ಮೊಳ ಹಾಕಿ ಅಳೆಯುತ್ತಿದ್ದಾನೆ.. ಬಟ್ಟೆಯ ಉದ್ದಗಲಳತೆ ಕುರಿತು ಅಂದಿನ ಅಂಗಡಿಯವರೂ ಗಿರಾಕಿಗಳಿಗೆ ಮೋಸ ಮಾಡುತ್ತಿರಬೇಕು! ವಿಜಯನಗರದ ದೊರೆಯಾದ ಅಚ್ಯುತದೇವರಾಯನ ಕಾಲದಲ್ಲಿ (ಕ್ರಿ. ಶ. ೧೫೩೫) ಕಟ್ಟಿಸಿದ ಪಾಪನಾಶೇಶ್ವರ ದೇವಾಲಯದ ಭಿತ್ತಿ ಚಿತ್ರಗಳಲ್ಲಿ ಅಂದು ಪ್ರಚಲಿತವಿದ್ದ ಪುರುಷರ ಬಗೆ ಬಗೆಯ ಸೀರೆಗಳನ್ನು ನೋಡಬಹುದಾಗಿದೆ. ಮಹಾಮಂಟಪದ ಸೂರಿನ ಒಳಗೋಡೆಯ ಮೇಲೆ ಶಿವಪುರಾಣವನ್ನಾಧರಿಸಿದ ಅನೇಕಾನೇಕ ಚಿತ್ರಗಳನ್ನು ರಚಿಸಲಾಗಿದೆ. ಪಾರ್ವತಿ ಪರಿಣಯ, ಕಿರಾತಾರ್ಜುನೀಯ, ದಕ್ಷಿಣಾಮೂರ್ತಿ, ಶ್ರೀರಾಮಪಟ್ಟಾಭಿಷೇಕ, ಶೇಷಶಾಯಿ, ವಟಪತ್ರಶಾಯಿ ಕೃಷ್ಣನ ಚಿತ್ರ ಬಿಡಿಸಿ ಆ ಕಾಲದ ಪ್ರಚಲಿತ ವೇಷ ಭೂಷಣಗಳನ್ನು ಕಾಣಿಸಲಾಗಿದೆ. ಪೆನುಕೊಂಡೆಯ ನಂದಿಲಕ್ಕಿ ಶೆಟ್ಟಿಯ ಮಗ ವಿರೂಪಣ್ಣನು ಮಾಡಿದ ದಾನದಿಂದ ಈ ದೇವಾಲಯವನ್ನು ಕಟ್ಟಿಸಲಾಗಿದೆ, ಎಂದು ಅಲ್ಲಿರುವ ಶಾಸನವೊಂದು ಸಾರಿ ಹೇಳುತ್ತದೆ. ಅಂತೆಯೇ ವಿರೂಪಣ್ಣ ಮತ್ತು ಅವನ ಸೋದರ ವೀರಣ್ಣನ ಭಾವ ಚಿತ್ರಗಳಿಗೆ ಅದ್ಯತೆ ಕೊಡಲಾಗಿವೆ. ಇವನ ಸೋದರರು ಕೇಸರಿ ವರ್ಣದ ನಿಲುವಂಗಿ ತೊಟ್ಟು ಅದರ ಮೇಲೆ ಓರಣವಾಗಿ 'ಸೀರೆ'ಯನ್ನು ಸುತ್ತಿಕೊಂಡಿದ್ದಾರೆ. ವಿರೂಪಣ್ಣನ ರಬ್ಬಾದ ಚೌಕಡಿ ಸೀರೆಗೆ ನಾಶೀಪುಡಿ ಬಣ್ಣದ ಅಂಚು ಇದ್ದರೆ, ವೀರಣ್ಣನ ಕೆಂಪು ಚುಕ್ಕಿಯ ಸೀರೆಗೆ ಕಪ್ಪು ಹೂಬಳ್ಳಿಯ ಅಂಚನ್ನು ಹೊಂದಿಸಲಾಗಿದೆ. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ, ಇನ್ನಿತರ ಊರ ಪ್ರತಿಷ್ಠಿತರೂ ನಿಲುವಂಗಿಗಳ ಮೇಲೆ ಕಿರಿ ಸೀರೆಗಳನ್ನು ಪ್ರದರ್ಶಿಸಿದ್ದಾರೆ. ದೇವ, ದೇವತೆಗಳೂ ಇಂಥ ಸೀರೆಗಳಲ್ಲಿಯೇ ಚಿತ್ರಿತರಾಗಿದ್ದಾರೆ.

ಜನಸಾಮಾನ್ಯರು ನಿಲುವಂಗಿಯಲ್ಲದೇ ಸೀರೆಯನ್ನು ಪಂಚೆಯಂತೆ ಉಟ್ಟಿದ್ದಾರೆ. ಕೆಲವರು ಹಿಂಗಚ್ಚೆ ಹಾಕಿ ಉಟ್ಟರೆ, ಉಳಿದವರು ಮುಂಡು ಪಂಚೆಯಂತೆ ಉಟ್ಟಿದ್ದಾರೆ. ಮೈಗುಂಟುವಂತೆ ಉಟ್ಟವರು ಇದ್ದರೆ, ಸಡಿಲಾಗಿ ಸುತ್ತಿಕೊಂಡವರೂ ಇದ್ದಾರೆ. ಈ ಸೀರೆಗಳೆಲ್ಲ ಏಕವರ್ಣೀಯವಾಗಿರದೇ ವಿವಿಧ ಬಣ್ಣ-ನಕ್ಷೆಗಳಿಂದ ಕೂಡಿದ್ದಾಗಿವೆ. ಕೆಲವೊಂದು ಚಿತ್ರಗಳಲ್ಲಿ ಬೇರೊಂದು ಅಂಗವಸ್ತ್ರವನ್ನು ಸುತ್ತಿಕೊಂಡಂತೆ ಭಾಸವಾಗುತ್ತದೆ. ಕೆಲವರು ಕುಸುರಿನ ಕೆಲಸವಿದ್ದ ಶಾಲನ್ನು ಎಡಭುಜದ ಮೇಲಿಂದ ಇಳಿಬಿಟ್ಟಿದ್ದಾರೆ. ಅದೇ ಕಾಲದಲ್ಲಿ ರಚಿತವಾದ ಹಂಪೆಯ ವಿರೂಪಾಕ್ಷ ದೇವಾಲಯದ ಭಿತ್ತಿ ಚಿತ್ರಗಳಲ್ಲಿಯೂ ಇಂತಹವೇ ಪುರುಷರ ಸೀರೆಗಳನ್ನು ಗುರುತಿಸಬಹುದು.

## ಆಧಾರ ಸೂಚಿ

೧. ಎಪಿಗ್ರಾಫಿಯ ಕರ್ನಾಟಕ ಸಂಪುಟ ೭. ಶಿಕಾರಿಪುರ ಶಾಸನ ನಂ 185.

೨. **Epigraphia Indica** Vol XIII P. 21

೩. ಭೀಮ ಕವಿಯ ಬಸವ ಪುರಾಣ (ಸಂ.) ಆರ್.ಸಿ. ಹಿರೇಮಠ ಧಾರವಾಡ ೧೯೭೧ ಕಾಂಡ ೩, ಸಂಧಿ ೧೦

೪. **Manasollasa** of King Someshwar III Vol II Ed. Shrigondekar S.G. Baroda 1938, 1017-20

೫. ರಾಘವಾಂಕನ ಸಿದ್ಧರಾಮ ಚಾರಿತ್ರ ಸಾಹಿತ್ಯ ಪರಿಷತ್ತು ಬೆಂಗಳೂರು, ಅಧ್ಯಾಯ ೮, ಪದ್ಯ ೫೬.

೬. ಮಾನಸೋಲ್ಲಾಸ ಪೂರ್ವೋಕ್ತ ಪದ್ಯ ೧೦೨೭

೭. ಕಲ್ಹಣನ ರಾಜತರಂಗಿಣಿ (ಸಂ.) ಎಸ್.ಎ.ಸ್ಟೀನ್ (ಸಂಸ್ಕೃತ) ೩ನೇ ಮುದ್ರಣ. ನವದೆಹಲಿ ೧೯೬೦ ಅಧ್ಯಾಯ ೮ ಪದ್ಯ 925-30



# ೮. ಕನ್ನಡಿಗರ ಕನ್ನಡಿಗಳು

ತನ್ನ ಪಡಿನೆಳಲನ್ನು ನೀರಿನಲ್ಲಿ ಕಂಡಾಗಲೇ ಮಾನವನಿಗೆ ಮೊದಲ ಕನ್ನಡಿಯ ಆವಿಷ್ಕಾರದ ವಿಚಾರ ಹೊಳೆದಿರಬೇಕು. ಅವನು ಕಾಲಕಾಲಕ್ಕೆ ನುಣಪಾದ, ಹೊಳಪುಳ್ಳ ವಸ್ತುಗಳಲ್ಲಿ ತನ್ನ ಪ್ರತಿಬಿಂಬವನ್ನುಕಂಡು ಆನಂದಿಸಿದ. ವಿವಿಧ ಧಾತುಗಳೆಲ್ಲ ಬಳಕೆಯಲ್ಲಿ ಬಂದಾಗ ಕನ್ನಡಿಗನ ಅಲಂಕಾರಪ್ರಿಯತೆಗೆ ಗರಿ ಮೂಡಿದವು. ಪ್ರಾರಂಭದಲ್ಲಿ ಲೋಹದ ತುಂಡುಗಳನ್ನು ಉಜ್ಜಿ, ತೀಡಿ ಕನ್ನಡಿಗಳನ್ನು ಸಿದ್ಧಪಡಿಸುತ್ತಿದ್ದರು. ಅವುಗಳಿಗೆ ಬೇಡಿಕೆ ಹೆಚ್ಚಿದಂತೆ ಕ್ರಮೇಣ ಅದೊಂದು ಲಾಭದಾಯಕ ಉದ್ದಿಮೆಯಾಗಿ ಮಾರ್ಪಟ್ಟಿತು. ಇತರ ಧಾತುಗಳಿಂಗಿಂತ ಕಂಚನ್ನೇ ಹೆಚ್ಚಾಗಿ ಬಳಸಲಾರಂಭಿಸಿದರು. ದೇವ ದೇವತೆಗಳ ವಿಗ್ರಹಗಳನ್ನು, ಪೂಜಾ ಸಾಮುಗ್ರಿಗಳನ್ನು ಉತ್ಪಾದಿಸಲು, ಕಂಚನ್ನು ಬಳಸುವದು ಅದಾಗಲೇ ರೂಢಿಯಾಗಿದ್ದರಿಂದ, ಸ್ವಾಭಾವಿಕ ಹೊಳಪನ್ನು ಹೊಂದಿದ್ದ ಕಾರಣದಿಂದ, ಕಂಚಿನ ಕನ್ನಡಿಗಳು ಬಳಕೆಯಲ್ಲಿ ಬಂದವು. ಗಾಜಿನ ಅವಿಷ್ಕಾರವಾಗಿ ಕನ್ನಡಿಗಳ ನಿರ್ಮಾಣ ಪ್ರಾರಂಭವಾದಾಗ ರೋಮ್ ಮತ್ತು ಚೀನಗಳಿಂದ ಕನ್ನಡಿಗಳು ಭಾರತಕ್ಕೂ, ಕರ್ನಾಟಕ್ಕಕ್ಕೂ ಬರಲಾರಂಭಿಸಿದವು. ಕೆಲವು ಪ್ರಕಾರದ ಅಪರೂಪದ ಕನ್ನಡಿಗಳು ಇಲ್ಲಿಯೂ ಸಿದ್ಧವಾಗುತ್ತಿದ್ದುವು. ಕುಶಾನರ ಕಾಲದಲ್ಲಿ ಬಳಕೆಯಲ್ಲಿದ್ದ ಹಸ್ತಿದಂತದ ಹಿಡಿಕೆಯ ಕನ್ನಡಿಯೊಂದು ಇತ್ತೀಚೆಗೆ ಏಶಿಯಾ ಮಾಯನರ್ ಪ್ರದೇಶದಲ್ಲಿ ಉತ್ಖನನದಲ್ಲಿ ಸಿಕ್ಕಿದೆ (ಕ್ರಿ.ಶ.ಪೂ. ೧ನೇ ಶತಕ) ಕನ್ನಡಿಗರ ಕನ್ನಡಿಗೆ ಉಜ್ವಲ ಪರಂಪರೆ, ಇತಿಹಾಸಗಳಿವೆ.

ಸಾಹಿತ್ಯದಲ್ಲಿ ಮುಕರ, ಆದರ್ಶ, ದರ್ಪಣ, ದರ್ಶನಿಗಳೆಂಬ ವಿವಿಧ ಹೆಸರುಗಳಿಂದ ಕನ್ನಡಿಗಳನ್ನು ಗುರುತಿಸಲಾಗಿದೆ. ಬಸವಣ್ಣನವರ ವಚನವೊಂದು, "ದರ್ಪಣವು ಬೇರೆ ಕಂಚಲ್ಲ, ಬಟ್ಟಲು ಬೇರೆ ಕಂಚಲ್ಲ. ಭಾಂಡ ಒಂದೇ, ಭಾಜನ ಬೇರೆ. ಬೆಳಗೆ, ಕನ್ನಡಿ ಎನಿಸಿತಯ್ಯಾ" ಎಂದು ಸಾರುತ್ತದೆ. ಕಂಚಿನ ದರ್ಪಣಗಳಿಗೆ ವಿಶಿಷ್ಟವಾದ ಹೊಳಪನ್ನು ಕೊಟ್ಟು ಪ್ರತಿಬಿಂಬ ಸ್ಪಷ್ಟವಾಗಿ ಗೋಚರಿಸುವಂತೆ ಶ್ರಮ ವಹಿಸುತ್ತಿದ್ದರು. ಹಡಪದಲಿಂಗಮ್ಮನ ವಚನ, "ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ ಮನನಿರ್ಮಳವಾದದ್ದಲ್ಲದೇ ಆ ಮಹಾಘನವ ಕಾಣಬಾರದು." ಎಂದು ಹೇಳುತ್ತದೆ.[೧] ಮನಸ್ಸಿನ ಶುಭ್ರತೆಯನ್ನು ಕನ್ನಡಿಯ ಶುಭ್ರತೆಯೊಂದಿಗೆ ಹೇಗೆ ಕಾಪಾಡಿ ಕೊಳ್ಳಬೇಕೆಂದು ಪರಿಚಯಿಸುವದು ಅವಳ ಉದ್ದೇಶ. ಪ್ರಭುಲಿಂಗಲೀಲೆಯಲ್ಲಿ ಮಾಯಾದೇವಿ, ಮಧುಕೇಶ್ವರನ

ಪೂಜೆಗೆ ಹೊರಟಾಗ ಹಲವಾರು ದ್ರವ್ಯಗಳೊಂದಿಗೆ ಹೊಂಗನ್ನಡಿ (ಬಂಗಾರದ ಕನ್ನಡಿ)ಯನ್ನು ಹೊತ್ತ ಪರಿಚಾರಿಕೆಯರು ಅವಳೊಂದಿಗೆ ಹೊರಡುತ್ತಾರೆ.[೨] ಕನ್ನಡಿ ಹೊರಲು ಪ್ರತ್ಯೇಕವಾಗಿ ಕನ್ನೆಯರು ನೇಮಿಸಲ್ಪಡುತ್ತಿದ್ದರು. ದೇವಪ್ಪಕವಿಯ "ರಾಮವಿಜಯ" ಕಾವ್ಯದಲ್ಲಿ 'ಹೊಸಗನ್ನಡಿ'ಯ ಉಲ್ಲೇಖ ವಿವಾಹ ಸಂದರ್ಭದಲ್ಲಿ ಬರುತ್ತದೆ.[೩] ಶುಭಕಾರ್ಯಗಳಿಗೆಲ್ಲ ಹೊಸ ಹೊಸ ಕನ್ನಡಿಗಳನ್ನು ಖರೀದಿಸಲಾಗುತ್ತಿರಬೇಕು. ಕನ್ನಡಿಕಾಯಕದ ಶರಣರಿದ್ದರು.[೪] ವಚನಕಾರ್ತಿ ರೆಮ್ಮವ್ವೆ ಕನ್ನಡಿ ಕಾಯಕದವಳು. "ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೇ?"[೫] ಎಂದು ಆತ್ಮ ಶೋಧನ ವಚನವನ್ನು ರಚಿಸಿದ್ದಾಳೆ. ಉಳ್ಳವರು, ಮಗಳ ಮದುವೆಯ ಸಂದರ್ಭದಲ್ಲಿ ಕನ್ನಡಿಗಳ ಜೊತೆಗೆ, ಅದರ ಉಳಿಗದವರನ್ನೂ ಅಳಿಯನ ಮನೆಗೆ ಕಳಿಸುವ ಪರಿಪಾಠವಿತ್ತು.[೬] ಅವರಿಗೆ ಕನ್ನಡಿಯನ್ನು ವಿವಿಧ ಕೋನಗಳಲ್ಲಿ ಎತ್ತಿ ಹಿಡಿದು, ತನ್ನ ಮುಖ ಅದರಲ್ಲಿ ತಪ್ಪಿಯೂ ಗೋಚರಿಸದಂತೆ ಎಚ್ಚರ ವಹಿಸಲು, ಒಡತಿಗೆ ಅನುಕೂಲವಾಗಲು ತರಬೇತಿ ನೀಡಲಾಗುತ್ತಿತ್ತು.[೭] ಬಸವಪುರಾಣದಲ್ಲಿ ವೇಶ್ಯೆಯರು ನಿವಾಸಗಳಲ್ಲಿ ರಸಿಕರನ್ನು ರಂಜಿಸಲು, ಶಯನಗೃಹದಲ್ಲಿ 'ಮಲಗುಗನ್ನಡಿ'ಯನ್ನು ಹೊಂದಿಸಿ ಇಡುತ್ತಿದ್ದುದನ್ನು ಭೀಮಕವಿ ಉಲ್ಲೇಖಿಸಿದ್ದಾನೆ. ಶಿಕಾರಿಪುರದ ೧೧೭೪ನೇ ವರ್ಷದ ಶಾಸನವೊಂದರಿಂದ ದೇವಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಪಾತ್ರದ ಹೆಂಗಳೆಯರಿಗೆ (ಸೂಳೆಯರ್ಗೆ) 'ಕನ್ನಡಿವಣ' ಕೊಡಮಾಡಿದ ವಿಚಾರ ತಿಳಿದು ಬರುತ್ತದೆ.[೮] ವೀರಗಲ್ಲಿಗೂ ಕನ್ನಡಿ, ಕಲಶದ ಸೇವೆ ಸಂದಾಯವಾಗುತ್ತಿತ್ತು. "ರಾಮನಾಥ ಚರಿತ" ಕಾವ್ಯದಲ್ಲಿ ಕಡುಗಲಿ ರಾಮನಾಥನ ಹತ್ಯೆಯ ಗಾಳಿಸುದ್ದಿ ಕೇಳಿದ ಅವನ ಮಡದಿಯರು ಸತಿ ಹೋಗಲು ನಿಶ್ಚಯಿಸಿ ಗಂಧದ ಅಗ್ನಿಗೆ ಏರ್ಪಾಡು ಮಾಡುತ್ತಾರೆ ಆ ಸಮಯದಲ್ಲಿ ಅಲ್ಲಿಗೆ ಬಂದ ರಾಮನಾಥನು "ತನ್ನಳಿವುವ ಕೇಳುತ ಕೆಳದಿಯರಿಂದ ಕನ್ನಡಿ ನಿಂಬೆಹಣ್ಣುಗಳನ್ನು ಮನ್ನಿಸುತ್ತಲಿರ್ದ ನಿಜಸತಿಯರ ಮೊಗಗನ್ನಡಿಗಳ ಕಂಡನಲ್ಲಿ"[೯] ಎಂಬ ವರ್ಣನೆ ಬರುತ್ತದೆ. ಸತಿಯ ಸಿಂಗಾರ, ಮೆರವಣಿಗೆ ಎರಡರಲ್ಲೂ ಕನ್ನಡಿಗೆ ಆದ್ಯತೆಯಿತ್ತು(ಚಿತ್ರ 1). ಪ್ರವಾಸಕ್ಕೆ ಹೊರಟಾಗ ಸ್ತ್ರೀಯರಂತೆ ಪುರುಷರೂ ತಮ್ಮ ಅಲಂಕಾರ ಸಾಮಗ್ರಿಗಳೊಂದಿಗೆ ಕನ್ನಡಿಯನ್ನು ತಪ್ಪದೇ ಸೇರಿಸುತ್ತಿದ್ದರು.[೧೦]

ಕನ್ನಡ ಕವಿಗಳಂತೆ, ಕನ್ನಡ ಶಿಲ್ಪಿಗಳೂ ಕನ್ನಡಿಗಳ ಪ್ರಕಾರಗಳು ಮತ್ತು ಬಳಕೆಯ ವಿಧಾನಗಳನ್ನು ಭಾವೀ ಪೀಳಿಗೆಗಾಗಿ ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ. ಬೇಲೂರಿನ ಶಿಲಾಬಾಲಿಕೆಯರಲ್ಲಿ ದರ್ಪಣ ಸುಂದರಿಯ ವಿಗ್ರಹವನ್ನು ಮೆಚ್ಚದವರಿಲ್ಲ. ಸುಂದರ ಮೈಕಟ್ಟಿನ ಸಿಂಹ ಕಟಿಯ ತೋರಕೇಶರಾಶಿಯ, ಮೈತುಂಬ ಆಭರಣಗಳನ್ನು ಧರಿಸಿದ ಕನ್ನೆ. ಎಡಗೈಯಲ್ಲಿ ಹಿಡಿದ ಬಾಹ್ಯಗೋಲಾಕಾರದ ಕನ್ನಡಿಯಲ್ಲಿ ತನ್ನ ಕೊರಳ ಮುತ್ತಿನ ಹಾರ ಹೇಗೆ ಕಾಣುತ್ತದೆ, ಎಂದು ಪರೀಕ್ಷಿಸುತ್ತಿರುವಂತಿದೆ. ಕರ್ನಾಟಕದಂತೆ ಮಧ್ಯಭಾರತದ ಚಂದೇಲ ಅಳರಸರ ಶಿಲ್ಪಗಳಿಗೂ ಕನ್ನಡಿಯ ಪ್ರತಿಮೆ ಆಕರ್ಷಕವೆನಿಸಿರಬೇಕು. ಅಂತೆಯೇ ಖಜುರಾಹೋ ದೇವಸ್ಥಾನಗಳ ಮದನಿಕೆಗಳಲ್ಲಿ ಅಲಂಕಾರಪ್ರಿಯ ಸುರಸುಂದರಿಯರನ್ನು ಇಂದಿಗೂ ಕಾಣಬಹುದಾಗಿದೆ. ದುಬೆಲ್ಲಾ ಕಲಾ ಸಂಗ್ರಹಾಲಯದಲ್ಲೂ ಕನ್ನಡಿ ಹಿಡಿದ ಸುರ ಸುಂದರಿಯರ

ವಿಗ್ರಹಗಳಿವೆ. ಬಾದಾಮಿಯ ಗುಹಾಲಯದಲ್ಲಿ, ವರ್ತುಲಾಕಾರದ ಆಸನವೊಂದರಲ್ಲಿ ಆರೂಢಳಾಗಿ ಅಲ್ಪವಸನ ಧರಿಸಿದ ಯುವತಿಯೊಬ್ಬಳು ಎಡಗೈಯಲ್ಲಿ ಹಿಡಿದ ಕಿರುಗನ್ನಡಿಯ ಸಹಾಯದಿಂದ ಕುಂಕುಮವನ್ನು ಹಣೆಗಿಡುತ್ತಿದ್ದಾಳೆ(ಚಿತ್ರ 2,3,4). ಸುಗಂಧದ್ರವ್ಯ ಹೊತ್ತ ಸೇವಕಿ ಬಲಗಡೆಗೆ ನಿಂತರೆ, ಎಡಗಡೆಗೆ ನಿಂತಾಕೆ ಚಾಮರ ಬೀಸುತ್ತಿದ್ದಾಳೆ. ಮೂಡಬಿದುರೆಯ ಬಸದಿಯಲ್ಲಿ ಸಾಮಾನ್ಯ ಗೃಹಿಣಿಯೋರ್ವಳು, ಕನ್ನಡಿಯಿರುವ ಪುಟ್ಟ ಕುಂಕಮದ ಭರಣಿ ಹಿಡಿದು ಹಣೆಗಿಟ್ಟುಕೊಳ್ಳುವ ಶಿಲ್ಪವನ್ನು ಕಾಣಬಹುದು (ಚಿತ್ರ 5). ಇಂಥ ವಸ್ತುವುಳ್ಳ ಶಿಲ್ಪಗಳನ್ನು ಅನೇಕಾನೇಕ ದೇವಾಲಯಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕದಲ್ಲಿ ಭಿತ್ತಿಚಿತ್ರಗಳ ಸಂಪತ್ತು ಸಮೃದ್ಧವಾಗಿದ್ದಂತೆ, ಅವುಗಳಲ್ಲಿಯ ಕನ್ನಡಿಗಳ ವೈವಿಧ್ಯವನ್ನು ಗುರುತಿಸಬಹುದಾಗಿದೆ. ಕನ್ನಡಿತಿಯರು ವೀಳ್ಯ ಮೆಲ್ಲುವವರಾಗಿದ್ದು ಸದಾ ಕೆಂದುಟಿ ಹೊಂದಿರುತ್ತಿದ್ದರಿಂದ ಪಾಶ್ಚಾತ್ಯ ನಾರಿಯರಂತೆ ತುಟಿಗೆ ಬಣ್ಣ ಸವರಿಕೊಳ್ಳುವ ಪ್ರಮೇಯವೇ ಇರುತ್ತಿರುಲಿಲ್ಲ ಎಂದು ಸರ್ವ ಸಾಧಾರಣವಾಗಿ ನಂಬಲಾಗುತ್ತಿದೆ. ಆದರೆ ಶ್ರಣಬೆಳ್ಗೊಳದ ಜೈನ ಮಠದಲ್ಲಿರುವ ಭಿತ್ತಿ ಚಿತ್ರವೊಂದರಲ್ಲಿ ಅರಸಿಯೋರ್ವಳು ಕನ್ನಡಿ ಬಳಸಿ ತುಟಿಗೆ ಬಣ್ಣ ಸವರಿಕೊಳ್ಳುವ ಅಪರೂಪದ ಚಿತ್ರವಿದೆ (6). ಸೀಬಿಯ ನರಸಿಂಹಸ್ವಾಮಿ ದೇವಾಲಯದಲ್ಲಿ ವಿವಿಧ ಪ್ರಕಾರದಲ್ಲಿ ಕನ್ನಡಿಯನ್ನು ಬಳಸಿದ ಅನೇಕ ಭಿತ್ತಿ ಚಿತ್ರಗಳಿವೆ. ಗರತಿಯೋರ್ವಳು ಉಚ್ಚ ಅಸನದಲ್ಲಿ ಕಾಲು ಬಿಟ್ಟು ಸುಖವಾಗಿ ಕುಳಿತು ಬಲಗೈಯಲ್ಲಿ ಹಿಡಿದ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿದ್ದಾಗ, ಅವಳ ಹಿಂದೆ ನಿಂತ ಊಳಿಗದವಳು ಅವಳ ಕೂದಲು ಬಾಚಿ ಹೆರಳು ಹಾಕುವ ಸಿದ್ಧತೆ ನಡೆಸಿದ್ದಾಳೆ. ಇನ್ನೊಂದು ಅಂಕಣದಲ್ಲಿ ಪರಿಚಾರಕಿಯೋರ್ವಳು ಭಾರವಾದ ಕನ್ನಡಿಯೊಂದನ್ನು ಎರಡೂ ಕೈಗಳಲ್ಲಿ ಹಿಡಿದು, ಒಡತಿಗೆ ಅಲಂಕಾರ ಮಾಡಿಕೊಳ್ಳಲು ನೆರವು ನೀಡುತ್ತಿದ್ದಾಳೆ. ಸೀಬಿ ದೇವಾಲಯದ ಹೊರ ಗೋಪುರದ ಮುಚ್ಚಿಗೆಯಲ್ಲಿ ಹಲವಾರು ರತಿ ಕ್ರೀಡೆಯ ಚಿತ್ರಗಳಿವೆ. ಒಂದು ಚಿತ್ರದಲ್ಲಿ ರಸಿಕ ನೋರ್ವನು ಕ್ರೀಡೆಯಲ್ಲಿ ತೊಡಗಿದ್ದರೂ ಎಡಗೈಯಲ್ಲಿ ಕನ್ನಡಿ ಹಿಡಿದು, ದೃಶ್ಯವನ್ನು ವೀಕ್ಷಿಸಲು ಯತ್ನಿಸಿದ್ದಾನೆ! ಇನ್ನೊಂದು ಚಿತ್ರದಲ್ಲಿ ನಲ್ಲೆಯ ಅಸ್ತವ್ಯಸ್ತವಾದ ಕೂದಲನ್ನು ನಲ್ಲನು ಬಾಚಿ ಮುಡಿ ಕಟ್ಟುವ ಯತ್ನದಲ್ಲಿದ್ದಾಗ ಆಕೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಾಳೆ. ಇಂಥ ಅನೇಕ ಚಿತ್ರಗಳು ಅಲ್ಲಿ ಈ ಮೊದಲು ವಿರಾಜಿಸುತ್ತಿದ್ದಿರಬೇಕು. ಕಾಲಚಕ್ರದ ಸುಳಿಯಲ್ಲಿ ಸಿಕ್ಕು ಅವೆಲ್ಲ ನಶಿಸಿ ಹೋಗಿರಲು ಸಾಕು.

ಶಿಲ್ಪ ಚಿತ್ರಕಾರರಂತೆ ಕೊರಡನ್ನು ಕೊರೆದು ಸುಂದರವಾದ ತೇರು (ರಥ)ಗಳನ್ನು ನಿರ್ಮಿಸುವ ಗುಡಿಗಾರರಿಗೂ ಕನ್ನಡಿ, ಆಕರ್ಷಕವಾದ ವಸ್ತು. ಆದರೆ ಅವನ್ನು ಕಂಡು ಹಿಡಿದು ನೋಡಿ ಆನಂದಿಸಲು ಶ್ರಮಪಡಬೇಕು. ರಥಗಳ ಅಂಕಣಗಳು ತೀರ ಚಿಕ್ಕವಾಗಿದ್ದು ಕಣ್ಣಿನ ನೇರ ನೋಟದ ಸ್ತರಕ್ಕಿಂತ ತುಂಬ ಎತ್ತರದ ಮೇಲೆ ಇರುತ್ತವೆ. ಅಲ್ಲದೇ ಪ್ರತಿ ವರ್ಷ ಜಾತ್ರೆಯ ಸಮಯದಲ್ಲಿ ಅವಕ್ಕೆ ಎಣ್ಣೆ ಸವರುವದರಿಂದ, ಕಾಲಕ್ರಮೇಣ ಚಿತ್ರಗಳು ಕಪ್ಪಿಡುತ್ತವೆ. ಅಲ್ಲದೇ ಶಿಲ್ಪ, ಭಿತ್ತಿ ಚಿತ್ರಗಳಿಗಿರುವ ನಯ ನಾಜೂಕುಗಳ ಕೊರತೆ ಇಲ್ಲಿ ವಿಪುಲವಾಗಿರುತ್ತದೆ.

ತೀರ ಹಳೆಯದಾದ ತೇರನ್ನು ತ್ಯಜಿಸಿದಾಗ ಇಂಥ ಚಿತ್ರ ಕೊರೆದ ಕೊರಡುಗಳು ಬಿದ್ದಿರುತ್ತವೆ. ಅವನ್ನು ತೊಳೆದು ಸ್ವಚ್ಛಗೊಳಿಸಿದಾಗ ಮಾತ್ರ ಅವುಗಳ ಅಧ್ಯಯನ ಸಾಧ್ಯ. ರಾಮಾಯಣ, ಮಹಾಭಾರತಗಳ ಉಪಕಥೆಗಳ ಚಿತ್ರಪಟ್ಟಿಕೆಗಳ ಜೊತೆಗೆ, ಸಾಮಾಜಿಕ ಜನಜೀವನದ ದೃಶ್ಯಾವಳಿಗಳನ್ನು ಸೇರಿಸುವದು ಈ ಕಲಾಕಾರರ ವೈಶಿಷ್ಟ್ಯ. ಪ್ರಣಯಶಿಲ್ಪಗಳೂ ಸಾಕಷ್ಟು ಇರುತ್ತವೆ. ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದ ತೇರಿನ ಮೇಲೆ, ಅಲಂಕರಿಸಿಕೊಳ್ಳುತ್ತಿರುವ ಯುವತಿಗೆ ರಸಿಕನೋರ್ವನು ಕೀಟಲೆ ಕೊಡುವ ದೃಶ್ಯವಿದೆ. ಕನ್ನಡಿಗಳಿಗೆ ಹಿಡಿಕೆಯಿರುವದು ಸಾಮಾನ್ಯವಾದರೂ, ಈ ಕನ್ನಡಿಗೆ ದಾರಗಳ ಹಿಡಿಕೆಯ ಜೋಡಣೆಯಿದೆ. ಶ್ರೀರಂಗಪಟ್ಟಣದ ಶ್ರೀರಂಗ ದೇವಸ್ಥಾನದ ತೇರಿನಲ್ಲಿ ಎತ್ತರದ ಆಸನದಲ್ಲಿ ಕುಳಿತು ಕನ್ನಡಿಯನ್ನು ವೀಕ್ಷಿಸುತ್ತಿರುವ ವ್ಯಕ್ತಿಯ ಉಬ್ಬು ಚಿತ್ರವಿದೆ. ಉತ್ತರ ಕನ್ನಡ ಜಿಲ್ಲೆಯ ಗುಣವಂತೆಯ ತೇರೊಂದರಲ್ಲಿ ಕನ್ನಡಿಯಲ್ಲಿ ತನ್ನನ್ನು ತಾನು ನೋಡಿಕೊಳ್ಳುತ್ತ ಮೈಮರೆತಿರುವವಳ ಚಿತ್ರವಿದೆ.

ನಮ್ಮ ರಾಜ್ಯದ ಉದ್ದಗಲಕ್ಕೂ ಅನೇಕಾನೇಕ ಮಾಸ್ತಿ ಸ್ಮಾರಕಗಳು ಉಳಿದುಕೊಂಡು ಬಂದಿವೆ. ಸತಿಹೋದವರನ್ನು ದೈವತ್ವಕ್ಕೆ ಏರಿಸುತ್ತಿದ್ದ ಸಂಪ್ರದಾಯವೇ ಇವಕ್ಕೆ ಕಾರಣವೆನಿಸುತ್ತದೆ. ಈ ಸ್ಮಾರಕಗಳು ಪಾರ್ವತಿ ಇಲ್ಲವೇ ಲಕ್ಷ್ಮೀ (ಮಹಾಮಾಯೆ)ಯನ್ನು ಪ್ರತಿನಿಧಿಸುತ್ತವೆಂದು ದೃಢವಾಗಿ ನಂಬಿ, ದೇಗುಲಗಳನ್ನು ನಿಲ್ಲಿಸಿ ಪೂಜಿಸುವವರೂ ಇಲ್ಲದಿಲ್ಲ. ಈ ಸ್ಮಾರಕಗಳಿಂದಾಗಿ ಹಿಂದಿನ ಮುತ್ತೈದೆಯರು, ಮುಖ್ಯವಾಗಿ ಮಹಾಸತಿಯಾಗುವವರು. ವೀರಗಲ್ಲಿಗೆ ಕಲಶ-ಕನ್ನಡಿಗಳ ಪೂಜೆ ಸಲ್ಲಿಸಲು ದತ್ತಿಯನ್ನು ಕೂಡ ಮಾಡಿದಂತೆ, ಮಾಸ್ತಿ ಕಲ್ಲಿಗೂ ಕಾಲ ಕಾಲಕ್ಕೆ ಪೂಜೆ ಪುರಸ್ಕಾರ ಸಲ್ಲಿಸಲು ವಿಶೇಷ ವ್ಯವಸ್ಥೆ ಇದ್ದಿರಬೇಕು.

ಮುದ್ರಿತ ಪುಸ್ತಕಗಳು ಬಳಕೆಯಲ್ಲಿ ಬರುವ ಪೂರ್ವದಲ್ಲಿ ಕಲ್ಲಚ್ಚಿನ ಗ್ರಂಥಗಳು ಪ್ರಚಾರದಲ್ಲಿದ್ದವು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು 'ಸೌಗಂಧಿಕಾ ಪರಿಣಯ'ದಂತಹ ಸಚಿತ್ರ ಪುಸ್ತಕವನ್ನು ಪ್ರಕಟಿಸಿದರು. ಈ ಗ್ರಂಥ ಸುಚರಿತ ರಾಜನ ಕಥೆಗೆ ಪ್ರಾಶಸ್ತ್ಯ ಕೊಟ್ಟರೂ ಕಲಾಕಾರರು ಸಮಕಾಲೀನ ಸಾಮಾಜಿಕ ಜೀವನವನ್ನು ಕಡೆಗಾಣಿಸಿಲ್ಲ. ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದ ಕಿರುಕೈಗನ್ನಡಿಗಳ ಬದಲಾಗಿ ಬೃಹದಾಕಾರದ ಭವ್ಯ ಕನ್ನಡಿಗಳನ್ನು ಗೃಹಾಲಂಕಾರಗಳ ಸಾಧನಗಳಾಗಿ ಹೆಚ್ಚೆಚ್ಚು ಬಳಸಲಾರಂಭಿಸಿದರು. ಅಂತೆಯೇ ಈ ಕನ್ನಡಿಗಳನ್ನು ಸ್ಥಾಯಿಯಾಗಿ ಒಂದೇ ಸ್ಥಳಕ್ಕೆ ಸೀಮಿತಗೊಳಿಸುವದು ಅನಿವಾರ್ಯವಾಯಿತು. ಹಿತ್ತಾಳೆ, ತಾಮ್ರ, ಕಬ್ಬಿಣಗಳ ಚೌಕಟ್ಟನ್ನು ಇವಕ್ಕೆ ಬಳಸಲಾರಂಭಿಸಿದರು. ಇಂಥ ಕಲಾತ್ಮಕವಾಗಿ ರಚಿಸಲಾಗುತ್ತಿದ್ದ ಕನ್ನಡಿಯ ಸ್ಟ್ಯಾಂಡುಗಳು ಇಂದಿಗೂ ಅನೇಕ ವಸ್ತು ಸಂಗ್ರಹಾಲಯಗಳಲ್ಲಿ ಇವೆ. ಸಂಪೂರ್ಣ ಅಲಂಕೃತ ವ್ಯಕ್ತಿಯನ್ನು ಕಣ್ತುಂಬ ನೋಡಬಹುದಾದಂಥ ನಿಲವು ಗನ್ನಡಿಗಳು ಆಗಲೇ ಬಳಕೆಯಲ್ಲಿ ಬಂದಿದ್ದವು.

ಪುರುಷರು ತಮ್ಮ ಗಡ್ಡ ಮೀಸೆಗಳನ್ನು ನಾಪಿತರಿಂದ ಎಚ್ಚರಿಕೆಯಿಂದ ರೂಪಿಸಿಕೊಂಡರೂ ಅವರೂ ಹೆಂಗಳೆಯರಷ್ಟೇ ಕನ್ನಡಿಗಳಿಗೆ ಮಾರುಹೋಗಿದ್ದರು. ಸಂಸಾರದ ಆಕರ್ಷಣೆಗಳನ್ನು

ತ್ಯಜಿಸಿ ಕಾವಿಬಟ್ಟೆಯನ್ನು ತೊಡುವ ಓರ್ವ ಯೋಗಿಗೂ ಕನ್ನಡಿಯ ಮಾಯೆಯನ್ನು ಬಿಡುವದು ಸಾಧ್ಯವಾಗಲಿಲ್ಲ! ಅಂತೆಯೇ ಭಟಕಳದ ಇಂಥ 'ತ್ಯಾಗಿ'ಯು ಕಿರುಮಣೆಯ ಮೇಲೆ ಕುಳಿತು ಕೈಗನ್ನಡಿಯಲ್ಲಿ ಕಿವಿಯ ರುದ್ರಾಕ್ಷದ ಓಲೆಯನ್ನು ವೀಕ್ಷಿಸುತ್ತಿದ್ದಾನೆ. ಇನ್ನೊಂದು ಚಿತ್ರದಲ್ಲಿ ಅಧಿಕಾರಿಯಂತೆ ತೋರುವ ಒಬ್ಬಾತ, ಸೇವಕನಿಗೆ ನಿರ್ದೇಶನಗಳನ್ನು ಕೊಡುತ್ತಿರುವಾಗ ಹುಲುಸಾಗಿ ಬೆಳೆಸಿದ ತನ್ನ ಮೀಸೆಗಳನ್ನು ಕನ್ನಡಿಯನ್ನು ನೋಡಿಕೊಂಡು ಆನಂದಿಸುತ್ತಿದ್ದಾನೆ. ಸಿರಿವಂತರ ಮಕ್ಕಳಿಗೆ ಕನ್ನಡಿ ಬೇಕಾದಂತೆ ತಿರುಗಿಸಿ, ಎತ್ತಿ ಹಿಡಿದು ತೋರಿಸಲು ಪರಿಚಾರಕರು ಬೇಕಾಗುತ್ತಿದ್ದರು. ರಾಜರು ಓಲಗಕ್ಕೆ ಹೊರಡುವ ಮುನ್ನ ತಮ್ಮ



1. ಸತಿಯು ಸಿಂಗಾರಕ್ಕೆ



2. ಅಂತರ್ ವಕ್ರ ಕನ್ನಡಿ



5. ಬಹಿರ್‌ವಕ್ರ ಕನ್ನಡಿ



4. ಕುಂಕುಮದ ಬಟ್ಟಿಗೆ



3. ಶಿರೋಲಂಕಾರಕ್ಕೆ



6. ಚೆನ್ನತುಟಿಗೆ ಬಣ್ಣ ಲೇಪನ

ಎಲ್ಲ ಅಲಂಕಾರಗಳು ಸರಿಯಾಗಿವೆಯೇ? ಎಂದು 'ಆದರ್ಶ'ದಲ್ಲಿ ಕಂಡುಕೊಳ್ಳುತ್ತಿದ್ದಿರಬೇಕು! ಸೇವಕರು ಗಾಳಿ ಬೀಸುವಾಗ, ನರ್ತಕಿಯರು ನರ್ತಿಸುವಾಗ ಎತ್ತರದ ಕಾಲುಮಣೆಯ ಮೇಲೆ ಆರೂಢನಾದ ಉಚ್ಚ ಅಧಿಕಾರಿಯೋರ್ವನು ತನ್ನ ಸೌಂದರ್ಯವನ್ನು ಕನ್ನಡಿಯಲ್ಲಿ ನೋಡಿಕೊಳ್ಳುವದರಲ್ಲಿ ಮೈಮರೆತಿದ್ದಾನೆ.

ಕನ್ನಡಿಗ ಎಷ್ಟೇ ಬಡವನಾಗಿರಲಿ, ಸಿರಿವಂತನಿರಲಿ, ಕನ್ನಡಿಯೆಂಬ ಶೃಂಗಾರವಸ್ತು ಅವನ ಪ್ರತಿನಿತ್ಯ ಜೀವನದ ಅವಿಭಾಜ್ಯ ಅಂಗವಾಗಿತ್ತು. ಈ ಕಂಪ್ಯುಟರ್ ಯುಗದಲ್ಲಿ ಕನ್ನಡಿಗೆ ಯಾವ ಭವಿಷ್ಯ ಕಾದಿದೆಯೋ ಎನ್ನುವದು ತಿಳಿಯದು!

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **ಶಿವಶರಣೆಯರ ವಚನಗಳು** : ಸಂ ‖ ಆರ್. ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮, ಪು. ೨೩೧, ವ. ೯

*೨. ಕವಿ ಚಾಮರಸ ವಿರಚಿತ **ಪ್ರಭುಲಿಂಗಲೀಲೆ**, ಸಂ. ಎಮ್. ಎಸ್. ಸುಂಕಾಪುರ, (ಪೂರ್ವೋಕ್ತ) ೧೯೭೬, ಗತಿ ೪, ಪದ ೨೦.

*೩. ದೇವಪ್ಪ ಕವಿ ವಿರಚಿತ '**ರಾಮವಿಜಯ ಕಾವ್ಯ**', ಸಂ. ಪ್ರೊ‖ ಟಿ. ಕೇಶವಭಟ್ಟ, ಬೆಂಗಳೂರು, ೧೯೬೯, ಅಧ್ಯಾಯ ೮, ಪದ್ಯ ೬೧ (ರಾ.ವಿ).

*೪. ಲಕ್ಕಣ್ಣ ದಂಡೇಶನ '**ಶಿವತತ್ವ ಚಿಂತಾಮಣಿ**' ಕನ್ನಡಿ ಕಾಯಕದ ತಿಮ್ಮಣ್ಣನನ್ನು ಹೆಸರಿಸುತ್ತದೆ.

*೫. **ಶಿವಶರಣೆಯರ ವಚನಗಳು**, ಪು. ೪೦೫, ವ. ೨೩೫

*೬. ರಾ. ವಿ. ಅಧ್ಯಾಯ ೮, ಪದ್ಯ ೫೨-೫೪

*೭. ನಂಜುಂಡ ಕವಿ ವಿರಚಿತ **ರಾಮನಾಥ ಚರಿತ್ರ** ಸಂ‖ ಎಚ್. ದೇವೀರಪ್ಪ, ಮೈಸೂರು ೧೯೬೪, ಭಾಗ ೨, ಅಧ್ಯಾಯ ೬, ಸಂಧಿ ೨೪, ಪದ್ಯ ೧೬೨ (ರಾ.ನಾ.ಚ)

*೮. ಎಪಿಗ್ರಾಫಿಯ **ಕರ್ನಾಟಕ** VII, ಶಿಕಾರಿಪುರ ೨೯೫

*೯. ರಾ.ನಾ.ಚ. ಅಧ್ಯಾಯ ೫, ೪೫ನೇ ಸಂಧಿ, ಪದ್ಯ ೫೩.

*೧೦. '**ಪದ್ಮರಾಜ ಪುರಾಣಂ**' ಸಂ‖ ಆರ್. ಸಿ. ಹಿರೇಮಠ, ಧಾರವಾಡ, ೧೯೫೨, ಪದ್ಮರಸನು ವನವಿಹಾರಕ್ಕೆ ಹೊರಟಾಗ ಒಯ್ದ 'ಹಡಪ'ದಲ್ಲಿ ಹೊನ್ನಗಿಂಡಿ, ಮೊಗದುಕೂಲ, ಪನ್ನೀರಿನ ಕುಪ್ಪಿ, ಕಸ್ತೂರಿಯ ತಟ್ಟೆ, ಸಾದಿನ ಭರಣಿ, ಜವ್ವಾದಿಯ ವಂಕಿ, ಶ್ರೀಗಂಧದ ಶಿಂಪು, ಕರ್ಪೂರದ ನಾಳಿಯೊಂದಿಗೆ ಕನ್ನಡಿಯೂ ಇತ್ತು. ಅಧ್ಯಾಯ ೮, ಪದ್ಯ ೭.

★★★

# ೯. ಆಟೋಟಗಳು

ಈಜಾಟವು ವ್ಯಾಯಾಮದ ಭಾಗವಾಗಿದ್ದರೂ ಪಾಶ್ಚಾತ್ಯರ ಕ್ರಮಬದ್ಧ ಈಜುಗಾರಿಕೆ ಹಿಂದೆ ಪ್ರಚಲಿತವಿರಲಿಲ್ಲವೆಂದು ತೋರುತ್ತದೆ. ಜಲವಿಹಾರ ಅಥವಾ ನೀರಾಟ ಸಾಮಾನ್ಯವಾಗಿತ್ತು. ಅರಸರು, ಮಹಿಳೆಯರು ನೀರಾಟದಲ್ಲಿ ತೊಡಗಿದ್ದರ ವರ್ಣನೆ ಕಾವ್ಯಗಳಲ್ಲಿ ಬರುತ್ತದೆ. ಸೋಮೇಶ್ವರ ದೊರೆಯ 'ಮಾನಸೋಲ್ಲಾಸ' ಶಾಸ್ತ್ರ ಗ್ರಂಥದಲ್ಲಿ ಜಲಕ್ರೀಡೆಯ ವಿಧಾನಗಳನ್ನು ವಿವರಿಸಲಾಗಿದೆ. ಕಡುಬೇಸಿಗೆಯ ದಿನಗಳಲ್ಲಿ ಇಳಿಯುವ ವಿಶಾಲಬಾವಿ, ಪುಷ್ಕರಣಿ, ಕೆರೆ, ನದಿಗಳ ಪ್ರದೇಶದಲ್ಲಿ ನೀರಾಟದ ಏರ್ಪಾಡು ಆಗುತ್ತಿತ್ತು. ತಮಗಾಗಿಯೇ ಜಲಕ್ರೀಡೆ ಮೀಸಲಿದ್ದ ಸಮಯದಲ್ಲಿ ಮಹಿಳೆಯರು ಸಂಕೋಚವಿಲ್ಲದೇ ಬಗೆಬಗೆಯ ನೀರಾಟಗಳಲ್ಲಿ ತೊಡಗಿರುತ್ತಿದ್ದರು. ನೀರಲ್ಲಿ ಎಸೆದ ಚಿನ್ನದ ನಾಣ್ಯ, ಒಡವೆಗಳನ್ನು ಆಯ್ದು ತಂದು ಬಹುಮಾನ ಪಡೆಯುವ ಆಟ. ನೀರಲ್ಲಿ ಮುಟ್ಟಾಟ, ಮುಳುಗಿದವರು ಇತರರನ್ನು ಹುಡುಕಲು ಹಚ್ಚುವ ಆಟ ನಡೆಯುತ್ತಿದ್ದವು. ನೀರಲ್ಲಿ ಕಸರತ್ತು ಮಾಡುವ ಸಾಹಸಿಗಳು ಇದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕೃತಿಯೆನಿಸಿಕೊಂಡ 'ಸೌಗಂಧಿಕಾ ಪರಿಣಯ' ಎಂಬ ಕಲ್ಲಚ್ಚಿನ ಗ್ರಂಥದಲ್ಲಿ ಹೆಂಗಳೆಯರ ನೀರಾಟದ ಚಿತ್ರಗಳಿವೆ ( ಚಿತ್ರ 1,2,3,4,).

### ಮಲ್ಲಗಾಳಗ

ಪ್ರಾಚೀನ ಕನ್ನಡಿಗರು ಈಗಿನವರಿಗಿಂತ ಹೆಚ್ಚು ಕ್ರೀಡಾಪ್ರಿಯರಿದ್ದರೆಂದು ಶಾಸನಗಳಿಂದ ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಆ ಕಾಲದಲ್ಲಿ ಈ ಪ್ರದೇಶವನ್ನು ಸಂದರ್ಶಿಸಿದ ವಿದೇಶೀಯ ಪ್ರವಾಸಿಕರ ಕಥನಗಳಿಂದಲೂ ಈ ಮಾತು ದೃಢಪಡುತ್ತದೆ. ನಿಖರವಾದ ನಿಯಮಗಳ ಪ್ರಕಾರ ಈ ಆಟಕೂಟಗಳು ನಡೆಯುತ್ತಿದ್ದವು. 'ಮಾನಸೋಲ್ಲಾಸ' ಅನೇಕ ಆಟೋಟಗಳ ವಿವರಣೆಯನ್ನು ಕೊಡುತ್ತದೆ. ಅವುಗಳನ್ನು 'ವಿನೋದ' (pastime)ಗಳೆಂದು ಕರೆಯಲಾಗಿದೆ. ಹಲವಾರು ಬಗೆಯ ಸಂಘಟಿತ ಆಟಗಳು ಆಗಾಗ್ಗೆ ಊರ ಬಹಿರ್ವಲಯಗಳಲ್ಲಿ ನಡೆಯುತ್ತಿದ್ದವು. ಎಲ್ಲ ಹಂತಗಳ ಜನರೂ ಅವುಗಳಲ್ಲಿ ಆಸಕ್ತಿವಹಿಸಿದ್ದರು, ಎಂಬುದು ಹಲವಾರು ಆಕರಗಳಿಂದ ತಿಳಿದುಬರುತ್ತದೆ.




ಇಂದಿನಂತೆಯೇ ಹಿಂದಾದರೂ ಕುಸ್ತಿ (ಮಲ್ಲಯುದ್ಧ) ಅತ್ಯಂತ ಜನಪ್ರಿಯ ಆಟಗಳಲ್ಲಿ ಒಂದಾಗಿತ್ತು. 'ಮಾನಸೋಲ್ಲಾಸ'ದಲ್ಲಿ ಈ ಜಟ್ಟಿಗಳ ಬಗ್ಗೆ ವಿವರಗಳು ಧಾರಾಳವಾಗಿವೆ. ಅವರಲ್ಲಿ ಜ್ಯೇಷ್ಠಕ, ಅಂತರ್ ಜ್ಯೇಷ್ಠಕ ಮತ್ತು ಗೋವಲರೆಂಬ ಪ್ರಭೇದಗಳನ್ನು ಸೋಮೇಶ್ವರ ದೊರೆ ಹೇಳಿದ್ದಾನೆ. ಇವು ಈಗಿನ heavy middle ಮತ್ತು bantam weight ಗಳನ್ನು ಹೋಲುತ್ತವೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ಮಲ್ಲರ ತರಬೇತಿಗೆ ಎಷ್ಟು ಮಹತ್ವವಿತ್ತೆಂದರೆ ಮಲ್ಲರ ಉಸ್ತುವಾರಿಗಾಗಿ ಒಬ್ಬ 'ಮಲ್ಲಾಧ್ಯಕ್ಷ'ನೇ ಇದ್ದನು. ಸರಕಾರವೇ ಅವರ ಊಟ ತಿಂಡಿಗಳ ವ್ಯವಸ್ಥೆ ನೋಡಿಕೊಳ್ಳುತ್ತಿತ್ತು. 'ಅಖ್ಖಾಡಕ'ಗಳಲ್ಲಿ ಆಡುತ್ತಿದ್ದ ಕುಸ್ತಿಗಳು ಬಹು ಜನಪ್ರಿಯವಾಗಿದ್ದವು. ವಿಜಯನಗರದಲ್ಲಿ ಮಹಾನವಮಿಯ ಕಾಲಕ್ಕೆ ರಾಜ್ಯದ ಬೇರೆ ಬೇರೆ ಭಾಗಗಳಿಂದ ಸಾವಿರಾರು ಮಲ್ಲರು ಆಮಂತ್ರಿತರಾಗಿ ನೆರೆಯುತ್ತಿದ್ದರೆಂದು ಆ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿದ ನುನಿಝ್ ಎಂಬ ಪೋರ್ಚುಗೀಸ್ ಪ್ರವಾಸಿ ಬರೆಯುತ್ತಾನೆ. 'ಭರತೇಶ ವೈಭವ'ದಲ್ಲಿ ಬರುವ ಈ ಜಟ್ಟಿಗಳ ವರ್ಣನೆ ನೋಡಿ...

ಜಟ್ಟಿಗಳುಬ್ಬಿ ಭೋಯೆಂದಾಯ್ದು ಭುಜಗಳ
ತಟ್ಟಿಕೊಂಡೊಡೆಯ ಜೀಯೆಂದು।
ಥಟ್ಟ ಪಟ್ಟನೆ ತಿವಿದೊಬ್ಬ ರೊಬ್ಬರ ತೆಗೆದಿಟ್ಟಾಡಿ ಕೆಡೆದರತ್ತಿತ್ತ॥

**ಅಂಕಗಳು :**

ರಾಜಮನೆತನಗಳಲ್ಲೂ ಮಾಂಡಲಿಕರಲ್ಲೂ 'ಅಂಕವಿನೋದ' ಅಥವಾ ದ್ವಂದ್ವಗಳು (Duelling) ಬಳಕೆಯಲ್ಲಿದ್ದಂತೆ ತೋರುತ್ತದೆ. ಆದರೆ ಇಂಥವುಗಳಿಗೆ ಅರಸರ ಅಪ್ಪಣೆ ಪಡೆಯಬೇಕಾಗುತ್ತಿತ್ತು. ಅವುಗಳಿಗೆ ಮೇಲ್ವಿಚಾರಕರನ್ನು ಅರಸನೇ ನೇಮಿಸುತ್ತಿದ್ದ. ಮಲ್ಲಯುದ್ಧ ಮತ್ತು ದ್ವಂದ್ವಯುದ್ಧಗಳಲ್ಲಿ ಈ ಮೇಲ್ವಿಚಾರಕರೇ ಕಲಿಗಳಿಗೆ ಕೊಡಬೇಕಾದ ಬಹುಮಾನಗಳನ್ನು ನಿರ್ಧರಿಸುತ್ತಿದ್ದರು.

ಮಲ್ಲಯುದ್ಧದಲ್ಲಿ ಎರಡು ಪ್ರಕಾರಗಳಿದ್ದವು. ಮೊದಲನೆಯದು ಸೌಮ್ಯವಾದದ್ದು. ಎರಡನೆಯದು ಈಗಿನ 'ಬಾಕ್ಸಿಂಗ್'ನ್ನು ಹೋಲುತ್ತಿತ್ತು. ಎರಡನೆಯದರಲ್ಲಿ ಮೂಳೆ ಮುರಿಯುವುದು, ಮುಖವಿಕೃತಿ, ಹಲ್ಲು ಬಿದ್ದುಹೋಗುವುದು ತೀರ ಸಾಮಾನ್ಯವಾಗಿದ್ದವು. ಸ್ತ್ರೀಯರಲ್ಲೂ ಮಲ್ಲಕಾಳಗ ಪ್ರಚಲಿತವಾಗಿತ್ತು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಬಂದ ಡೋಮಿಂಗೋ ಪೇಯಸ್ ಎಂಬ ಪೋರ್ಚುಗೀಸ್ ಪ್ರವಾಸಿ ಸ್ತ್ರೀಮಲ್ಲರ ಬಗ್ಗೆ ಹೇಳಿ ಸ್ತ್ರೀಯರ ಕುಸ್ತಿಗೆಂದು ರಚಿತವಾದ ಕ್ರೀಡಾಂಗಣವನ್ನು ಉಲ್ಲೇಖಿಸಿದ್ದಾನೆ. ಕ್ರಿ. ಶ. ೧೪೪೬ರ ಶಾಸನವೊಂದರಲ್ಲಿ ಹರಿಯಕ್ಕನೆಂಬ ಮಹಿಳೆ ಜಟ್ಟಿಗಳೊಡನೆ ಕಾದಿ (ಮಡಿದಿರಬಹುದಾದ) ದ ಉಲ್ಲೇಖವಿದೆ.

**ಮೃಗಯಾವಿನೋದ :**

ಬೇಟೆಯಂತೂ ಬಹಳ ಜನಪ್ರಿಯವಾಗಿತ್ತು. ಕಾವ್ಯಗ್ರಂಥಗಳಲ್ಲೆಲ್ಲ ಮೃಗಯಾವಿನೋದದ ವರ್ಣನೆ ಇಲ್ಲದೆ ಇಲ್ಲ. ಗಜಬೇಟೆಕಾರನೆಂದು ಕೆಲ ಅರಸರು ಬಿರುದು ಪಡೆದಿದ್ದರು. ವಿಜಯನಗರ ಕಾಲದಲ್ಲಿ ಕಾಡು ಮೃಗಗಳ ಬೇಟೆಯೊಂದಿಗೆ ಹಕ್ಕಿಗಳ ಬೇಟೆಯೂ ಜನರ ಮೆಚ್ಚುಗೆಗೆ ಪಾತ್ರವಾಗಿತ್ತು. ಇಂಥ ಬೇಟೆಗಳಲ್ಲಿ, ಮಡಿದವರ ನೆನಪಿಗಾಗಿ ನಡಿಸಿದ ವೀರಗಲ್ಲುಗಳೂ ಅಲ್ಲಲ್ಲಿ ಸಿಕ್ಕಿವೆ. ಹಂದಿ ಬೇಟೆಗಾಗಿ ಹೋಗಿ ಮಡಿದ ಪೊಡಿಯಲ (ಕ್ರಿ. ಶ. ೧೧೮೪),ಹುಲಿಯೊಡನೆ ಕಾದಿ ಮಡಿದ ಕೇತನಾಯಕ (೧೨ನೇ ಶತಮಾನ) ಇವರು ಹೆಸರುಗಳು ಅಕ್ಷರಶಃ ಶಿಲಾಶಾಶ್ವತಗೊಳಿಸಲ್ಪಟ್ಟಿವೆ. ಆದರೆ ಮನುಷ್ಯರಷ್ಟೆ ಅಲ್ಲದೇ ನಾಯಿಯೂ ಇಂಥ ವಿಶೇಷ ಮನ್ನಣೆ ಪಡೆದ ಉದಾಹರಣೆಯಿದೆ. ರಾಷ್ಟ್ರಕೂಟರ ಮಾಂಡಲಿಕನಾದ ಕನ್ನರದೇವ ಚೋಳರ ಮೇಲೆ ದಂಡೆತ್ತಿ ಹೋದಾಗ ಆತನ ಸೇವಕ ಮನಾಲರ ಕಲಿತನದಿಂದ ಕಾದಿದ. ಕನ್ನರ ದೇವ ಅವನನ್ನು ಗೌರವಿಸಿ ಏನು ಬೇಕೋ ಬೇಡಿಕೋ ಎಂದಾಗ ಆತನು ಕಾಳಿಯೆಂಬ ಬೇಟೆನಾಯಿಯನ್ನು ಬೇಡಿ ಪಡೆಯುತ್ತಾನೆ! ಒಮ್ಮೆ ಬೇಟೆಗೆ ಹೋದಾಗ ಆ ನಾಯಿ ದೊಡ್ಡದೊಂದು ಕಾಡು ಹಂದಿಯೊಡನೆ ಕಾದಿ ಅದನ್ನು ಕೊಂದು ತಾನೂ ಸಾಯುತ್ತದೆ. ಮನಾಲರ ಅದಕ್ಕೊಂದು ವೀರಗಲ್ಲನ್ನು ನಡಿಸಿ ಅದರ ಪೂಜೆಯ ಖರ್ಚಿಗೆ ಹೊಲವನ್ನು ಕೊಟ್ಟು, ಪೂಜೆಗೆ ಗೊರವನನ್ನು ನೇಮಿಸಿದ. ವೀರಗಲ್ಲನ್ನು ಪೂಜಿಸದೇ ಹೊಲವನ್ನು ಭೋಗಿಸಿದರೆ ಆತ ಪಾಪಭಾಗಿಯಾಗುವನೆಂದು ಶಾಸನ ಹೇಳುತ್ತದೆ. ಹಂಪಿಯ ಮಹಾನವಮಿಯ ದಿಬ್ಬ, ಹಜಾರಿರಾಮನ ಗುಡಿ ಮತ್ತು ವಿಜಯವಿಠಲನ ಗುಡಿಯ ಕೆತ್ತನೆಗಳಲ್ಲಿ

ಬೇಟೆಯ ದೃಶ್ಯಗಳು ಹೇರಳವಾಗಿವೆ. ಇವುಗಳಲ್ಲಿ ಹಲವಷ್ಟು ಬಿಲ್ಲು ಹಿಡಿದ ಹೆಂಗಳೆಯರೂ ಕಾಣಿಸುತ್ತಾರೆ.

**ಸಾರ್ವಜನಿಕ ಆಟಗಳು :**

ರಾಜಮನೆತನದವರೂ ಜನಸಾಮಾನ್ಯರೂ ಊರ ಪ್ರಮುಖ ಕ್ರೀಡಾಂಗಣದಲ್ಲಿ ನೆರೆದು ಬಗೆಬಗೆಯ ಆಟಗಳಲ್ಲಿ ಅಂದಿನ ತರುಣರು ಪ್ರದರ್ಶಿಸಿದ್ದ ಕೈಚಳಕಗಳನ್ನು, ಶಕ್ತಿ ಸಾಮರ್ಥ್ಯಗಳನ್ನು ನೋಡಿ ಆನಂದಪಡುತ್ತಿದ್ದರು. ಆ ಕ್ರೀಡಾಪಟುಗಳೆಷ್ಟು ಪ್ರಕಾರದವರು? ಹರಿಕಾರರು (ಓಡುವವರು), ಖಂಡೆಯಕಾರರು (ಖಡ್ಗಧಾರಿಗಳು), ಸಬಳಿಗರು (ಈಟಿಧಾರಿಗಳು), ಸುರಿಗೆಕಾರರು (ಚೂರಿಗಾರರು) ಬಿಲ್ಲುಗಾರರು. ಈ ಮಾನವ ಸ್ಪರ್ಧೆಗಳಲ್ಲದೆ ಪ್ರಾಣಿಗಳ ಮೇಲಾಟಗಳೂ ಸಾಮಾನ್ಯವಾಗಿದ್ದವು.

ವಾಹ್ಯಾಳಿ (ಕ್ರೀಡಾಂಗಣ)ಗಳಲ್ಲಿ ತಗರಿನ ಕಾಳಗಗಳು, ಕೋಣಗಳ ಜೂಜಾಟಗಳು, ಗಜಾಶ್ವಗಳ ವಾಹಳಿಗಳು ಜರುಗುತ್ತಿದ್ದವು. ಅವು ಬಹುಮಟ್ಟಿಗೆ ರಕ್ತ ರಂಜಿತವಾಗಿರುತ್ತಿದ್ದವು. ಕೋಣಗಾಳಗ ಮತ್ತು ತಗರುಗಾಳಗದ ವರ್ಣನೆಯಿದು.

ಕೋಡುಗಳಿಗೆ ಸೂನಗಿಗಳ ಸೇರಿಸಿ।
ಜೋಡಿಸಿ ಪಣೆಗೆ ಕೊರಲಗ ॥
ಕೂಡೆ ಕಾದಿಸುವರು ಕೋಣಗಳನ್ನುಜೂ।
ದಾಡೆ ಪುಲಿಗಳೊಡನಲ್ಲಿ ॥
ಇತ್ತೆರಡೊಳು ಜೂದುಗಾರರು ಕವಳದ।
ತುತ್ತಿ ನಿಂಬೆಯ ಪಣ್ಪುಳಿಯನು ॥
ನೆತ್ತಿಗೊರಸು ಖೋಯೆಂದಾರಿ ತಗರಿನ।
ಮೊತ್ತವನಲ್ಲಿ ಕಾದಿಪರು ॥

ಕೋಣಗಳ ಕೋಡುಗಳಿಗೂ, ಹಣೆಗಳಿಗೂ ಖಡ್ಗಗಳನ್ನು ಕಟ್ಟಿ ಹುಲಿಗಳೊಡನೆ ಹೋರಾಡಲು ಬಿಡುವ ಜೂಜುಗಳು ಎಷ್ಟು ಭಯಂಕರವಾಗಿರಬಹುದು!

ಈಗ ಕರ್ನಾಟಕದ ಕೆಲವೇ ಭಾಗಗಳಲ್ಲಿ ಪ್ರಚಲಿತವಾಗಿರುವ ಕೋಳಿಯಂಕವೂ (ಕುಕ್ಕುಟವಿನೋದ) ಜನಪ್ರಿಯವಾಗಿತ್ತು. ಇಂದಿನ ಕಂಬಳ (ಕೋಣಗಳ ಓಟದ ಸ್ಪರ್ಧೆ), ಕೋಳಿಯಂಕಗಳು ಈ ಪುರಾತನ ಆಟಗಳ ಪರಂಪರೆಯನ್ನು ಮುಂದುವರೆಸುತ್ತಿವೆ.

ಈಗಿನ ಪೋಲೋ ಆಟವನ್ನು ಹೋಲುವ ಕುದುರೆಯ ಮೇಲಿನ ಚೆಂಡಾಟವೊಂದರ ವಿವರ 'ಮಾನಸೋಲ್ಲಾಸ'ದಲ್ಲಿ ಕಂಡುಬರುತ್ತದೆ. ಎಂಟು ಆಟಗಾರರ ಇಬ್ಬಣಗಳಲ್ಲಿ ಈ ಆಟ ನಡೆಯುತ್ತಿತ್ತು. ಈಗಿನ ಹಾಕಿ ಬ್ಯಾಟುಗಳನ್ನು ಹೋಲುವ ಕೋಲುಗಳನ್ನು ಹಿಡಿದು ಈ ಆಟವನ್ನು ಆಡುತ್ತಿದ್ದರು. ಪೋಲೋವಿನಲ್ಲಿ ಈಗಿನ ಒಂದೇ ಗೋಲುಕಂಬದ (Goal post) ಬದಲಾಗಿ ಆಗ ಎರಡು ಇರುತ್ತಿದ್ದವು.

ಶ್ರವಣಬೆಳಗೊಳದ ಶಾಸನವೊಂದರಲ್ಲಿ ಕುದುರೆಯನ್ನೇರಿ ಆಡುವ ಇನ್ನೊಂದು ಚೆಂಡಾಟದ ವರ್ಣನೆಯಿದೆ. ರಾಷ್ಟ್ರಕೂಟ ಇಂದ್ರರಾಜ ಈ ಆಟದಲ್ಲಿ ಪರಿಣತನಾಗಿದ್ದ. ಈ ಆಟಕ್ಕೆ ಸಂಬಂಧಿಸಿದ ಹಲವಾರು ಪದಪ್ರಯೋಗಗಳು (ಸುಕರ, ದುಷ್ಕರ, ಚಿತ್ರದುಷ್ಕರ) ಈ ಶಾಸನದಲ್ಲಿವೆ. ಸಾಮಾನ್ಯ ಚೆಂಡಾಟ ಎಳೆಯರಲ್ಲಿ ವಿಶೇಷವಾಗಿ ಪ್ರಚಲಿತವಿತ್ತು. ಕುಮಾರರಾಮನ ಸಾಂಗತ್ಯದಲ್ಲಿ ಈ ಆಟದ ಸೊಗಸಾದ ವರ್ಣನೆಯಿದೆ.

ಹೊತ್ತು ಹೋಗದು ಚೆಂಡಾಟಕೆ ಮನವೆಳ।
ಸಿತ್ತು ಮುಮ್ಮಟಿಸಿಂಗ ನೃಪನ ॥
ಮುತ್ತಿನ ಚೆಂಡ ಬೇಡುವುದಕ್ಕೆ ಬಂದೆನಿತ್ತಿತ್ತಣ ವಾರ್ತೆಯಲ್ಲಮ್ಮ ॥

ಇದು ಅವನ ತಾಯಿಗೆ ಸರಿಬೀಳುವುದಿಲ್ಲ. ಚೆಂಡಾಟ ರಾಜಪುತ್ರನಿಗೆ ಉಚಿತವಾದ ಆಟವಲ್ಲವೆಂದು ತಿಳಿಸಲು ಹರಿಯಲದೇವಿ ಯತ್ನಿಸುತ್ತಾಳೆ.

ಚೆಂಡು ಬೊಗರಿ, ಗುದಗುಸ, ದುಗುಡ, ಲಗ್ಗೆ ಹಿಡಿಗವ।
ಡೆಗಳಿವು ರಾಜಪುತ್ರರಿಗೆ।
ಬಗೆಯಲುಚಿತವೆ ? ಕೇಳಿದ ಬಗೆ ರಾಯರು।
ನಗರೇ ನಿನ್ನನಾ ಸಭೆಯೊಳಗೆ ॥

ಎಂದು ಪರಿಪರಿಯಿಂದ ಹೇಳಿದರೂ ಕೇಳದೇ ಪಟ್ಟುಹಿಡಿದು ಕುಮಾರರಾಮ ಚೆಂಡಾಟವಾಡುತ್ತಾನೆ.

ಚೆಂಡಾಟದ ಹೊರತಾಗಿ ಇನ್ನೂ ಹಲವಾರು ಆಟಗಳು ಅಂದಿನ ಕರ್ನಾಟಕ ಮಕ್ಕಳಲ್ಲಿ ಪ್ರಚಲಿತವಿದ್ದವು. ಕುಮಾರವ್ಯಾಸ ಭಾರತದಲ್ಲಿ ಬರುವ ಹಲವಾರು ಆಟಗಳು ಹೀಗಿವೆ.

ಆಳಿನೇರಿಕೆ, ಓಡಿಗವಡೆ, ಗುರಿ -।
ಯಾಳು ಚೆಂಡಿನ ಹೊಣಿಕೆ ಚಿಣಿಕೋ -।
ಲಾಳು, ಚಿನಿವೆಂಡಿನಲಿ ದಂಡೆಯು ಹಾರುಗುಪ್ಪೆಗಳ... ॥
ಗುಡುಗು, ಗುತ್ತಿಪ ಚೆಂಡು, ಗುಮ್ಮನೆ
ಬಡಿವ ಕತ್ತಲೆಗುದ್ದು, ಗಂಭದ।
ಗಡಣೆ, ಕಣ್ಮುಚ್ಚಾಟ, ಸವಗಲಿ
ಹಲ್ಲೆಯಾಟಗಳ ...॥*

ಕೆಡಹುಕುಟ್ಟು ಇತ್ಯಾದಿ ಆಟಗಳನ್ನು ಕೌರವ ಪಾಂಡವರು ಆಡುತ್ತಿದ್ದರಂತೆ.

ಈ ಆಟಗಳನ್ನು ಶ್ರೀ ಎನ್ಕೆಯವರು ತಮ್ಮ 'ಕುಮಾರವ್ಯಾಸ ಮತ್ತು ಕೃಷ್ಣಕಥೆ'ಯಲ್ಲಿ ಈ ರೀತಿ ವ್ಯಾಖ್ಯಾನ ಮಾಡಿದ್ದಾರೆ:

* ೧. ಆಳಿನೇರಿಕೆ -ಒಬ್ಬ ಆಳಿನ ಮೇಲೆ ಇನ್ನೊಬ್ಬನು ಏರಿಕೊಡುವುದು

೨. ಹಿಡಿಗವಡೆ ಕವಡೆಯಾಟ
೩. ಗುರಿಯಾಳು ಚೆಂಡಿನ ಹೊಣಿಕೆ ಒಬ್ಬರನ್ನೊಬ್ಬರು ಗುರಿಯಿಟ್ಟು ಚೆಂಡಿನಿಂದ ಹೊಡೆಯುವುದು.
೪. ಚಿಣಿಕೋಲಾಟ-ಗಿಲ್ಲಿದಾಂಡು ಆಟ
೫. ಚೆನಿವೆಂಡು -ಚಿಕ್ಕ ಚಿಕ್ಕ ಚೆಂಡುಗಳಿಂದ ಆಡುವುದು.
೬ ದಂಡೆಯ -ದಾಂಡ ಅಥವಾ ಸಾಮು ತೆಗೆಯುವುದು
೭. ಹಾರುಗುಪ್ಪೆ - ಸಾಲಾಗಿ ಮಳಲಿನ ರಾಶಿ ಹಾಕಿ ಜಿಗಿಯುತ್ತ ಓಡುವದು.
೮. ಗುತ್ತಿನ ಚೆಂಡು-ಒಂದು ಪಕ್ಷದವರು ಅಡಗಿಸಿಟ್ಟ ಚೆಂಡನ್ನು ಇನ್ನೊಂದು ಪಕ್ಷದವರು ಹುಡುಕುವುದು.
೯. ಗುಮ್ಮನೆ ಬಡಿವ ಕತ್ತಲೆಗುದ್ದು - ಒಬ್ಬರಿಗೊಬ್ಬರು ಒಂದೊಂದು ಕಂಭ ಹಿಡಿದು ಗುದ್ದಿ ಮರೆಯಾಗುವುದು.
೧೦.ಗುಡುಗು -ಈಗಿನ ಕಬಡ್ಡಿ ಆಟ.
೧೧. ಗಂಭದಗಡಣೆ -ಕಂಭ ಕಂಭದ ಆಟ. ಒಬ್ಬೊಬ್ಬರು ಒಂದೊಂದು ಕಂಭ ಹಿಡಿದು ನಿಂತ ಎಲ್ಲರೂ ಒಮ್ಮೆಗೇ ಓಡಿ ತಮ್ಮ ತಮ್ಮ ಕಂಭ ಹಿಡಿದು ನಿಲ್ಲುವದು. ಈಗಿನ ಮ್ಯೂಜಿಕಲ್ ಚೆಯರ್ ಹೋಲುತ್ತದೆ.
೧೨.ಹಲ್ಲೆಯಾಟ-ಕುಂಟು ಹಲಪೆಯಾಟ.
೧೩. ಕೆಡಹುಕುಟ್ಟ-ಇದು ಕುಸ್ತಿ ಗುದ್ದಾಟದ ತರಹ ಆಟವಿರಬೇಕು.

ಈ ಆಟಗಳು ಇಂದಿನ ಉತ್ತರ ಕರ್ನಾಟಕದಲ್ಲಿ ಕೂಡ ಇತ್ತೀಚಿನವರೆಗೆ ಜನಪ್ರಿಯವಾಗಿದ್ದವು.

ಕೋಲಾಟ ಹೆಣ್ಣುಮಕ್ಕಳ ಮೆಚ್ಚಿಗೆಯದಾಗಿತ್ತು. ಹಂಪಿಯ ಮಾದರಿಗಳಲ್ಲಿ ಕೋಲಾಟದ ವಿವಿಧ ವೈಖರಿಗಳನ್ನು ಕಾಣಬಹುದು. ತಾಳ, ವಾದ್ಯದಳಿಗೆ ಹೆಜ್ಜೆಹಾಕುತ್ತ 'ಕೋಲೆ, ಕೋಲೆ, ಕೋಲೆ' ಎಂದು ಹಾಡುತ್ತ ಕೋಲು ಬಡಿಯುತ್ತ ಹುಡುಗಿಯರು ಬೀದಿಬೀದಿಗಳಲ್ಲಿ ಹೋಗುತ್ತಿದ್ದರೆಂದು ಇಕ್ಕೇರಿಯನ್ನು ೧೭ನೆಯ ಶತಮಾನದಲ್ಲಿ ಸಂದರ್ಶಿಸಿದ ಪೆಟ್ರೊಡೆಲ್ಲಾವಾಲ್ಲೆ ಹೇಳುತ್ತಾನೆ. ಆತ ಬರೆದಂತೆ ಆಟ ಗೌರಿಹಬ್ಬದ ವೈಶಿಷ್ಟ್ಯವಾಗಿತ್ತು.

## ನರ್ತನ

ನೃತ್ಯವಂತೂ ತುಂಬ ಜನಪ್ರಿಯವಾಗಿತ್ತು. ಸಾಮ್ರಾಜ್ಯದ ಎಲ್ಲ ನರ್ತಕಿಯರೂ ಮಹಾನವಮಿಯ ಹೊತ್ತಿಗೆ ವಿಜಯನಗರದಲ್ಲಿ ನೆರೆಯುತ್ತಿದ್ದರೆಂದೂ ಒಂಭತ್ತು ದಿನಗಳಲ್ಲಿ ನರ್ತನಾದಿಗಳು ಎಡೆಬಿಡದೇ ನಡೆಯುತ್ತಿದ್ದವೆಂದೂ ಡೋಮಿಂಗೊ ಪೇಸನ ವೃತ್ತಾಂತದಿಂದ ತಿಳಿದುಬರುತ್ತದೆ. ಅರಮನೆಯ ಮಹಿಳೆಯರೂ ನರ್ತನ ಕಲಿಯುತ್ತಿದ್ದರು. ಅವರಿಗಾಗಿ ನಿರ್ಮಿತವಾದ ನರ್ತನ ಶಾಲೆಯಲ್ಲಿ ವಿವಿಧ ಭಂಗಿಗಳ ಆಕೃತಿಗಳನ್ನು ಬಿಡಿಸಿದ್ದು ಕಲಿಯುವವರಿಗೆ ಆದರಿಂದ ಅನುಕೂಲವಾಗುತ್ತಿತ್ತೆಂದು ಪೇಸ್ ಹೇಳಿದ್ದಾನೆ. ಅರಸನು ಈ ನರ್ತನಾದಿಗಳನ್ನು ವೀಕ್ಷಿಸುತ್ತಿದ್ದ ರಂಗವನ್ನೂ ಆತ ಉಲ್ಲೇಖಿಸಿದ್ದಾನೆ.

**ವ್ಯಾಯಾಮರಂಗ :**

ವಿವಿಧ ಆಟಗಳನ್ನೆಲ್ಲ ವಿಶಿಷ್ಟವಾಗಿ ನಿರ್ಮಿತವಾದ ಕ್ರೀಡಾರಂಗಗಳಲ್ಲಿ ಆಡುತ್ತಿದ್ದರು. ಪಂಪನು ಅದನ್ನು 'ವ್ಯಾಯಾಮರಂಗ'ವೆಂದು ಕರೆದಿದ್ದಾನೆ. ಬೇರೆ ಬೇರೆ ಆಟಗಳಿಗೆ ಬೇರೆ ಬೇರೆ ಕ್ರೀಡಾರಂಗಗಳಿರುತ್ತಿದ್ದವು. ಇದಕ್ಕೆ ವಾಹ್ಯಾಳಿ, ಖಲಕ, ಅಖ್ಖಾಡಕಗಳೆಂದು ಹೆಸರುಗಳಿದ್ದವು. ಕೌರವ-ಪಾಂಡವರ ಶಕ್ತಿ ಸಾಮರ್ಥ್ಯದ, ಕ್ರೀಡಾಕೌಶಲ್ಯಗಳ ಪ್ರದರ್ಶನಕ್ಕೆ ಏರ್ಪಟ್ಟ ಭೂಮಿಯ ವರ್ಣನೆ ನೋಡಿ. ಕುಮಾರವ್ಯಾಸನು ವರ್ಣಿಸಿದ್ದಾನೆ :

ರಾಯನಾಜ್ಞೆಯಲಿ ಇಭಪುರದ ಹೊರಗೆ
ಆಯತದ ಭೂಮಿಯಲಿವಾಸ್ತು ವಿಧೇಯದೊಳಗೆ
ಅಳವಡಿಸಿದರು ಹನ್ನೆರಡು ಯೋಜನವ।

ಪ್ರೇಕ್ಷಕ ಗಣಕ್ಕೂ ಈ ಆಟಕೂಟಗಳನ್ನು ನೋಡಲು ಉತ್ತಮ ವ್ಯವಸ್ಥೆ ಮಾಡುತ್ತಿದ್ದರು.

ತರವಿಡಿದು ರಚಿಸಿದರು ನೆಲೆಯುಪ್ಪರಿಗೆಗಳ ಹಂತಿಯಲಿ
ಅಂತಃಪುರದ ತತ್ಪಾರ್ಶ್ವದಲಿ ಭೂರಿಯ ಭದ್ರಭವನಿಕೆಯ
ಪುರಜನದ, ಪರಿಜನದ ನೆಲೆಯುಪ್ಪರಿಗೆಗಳು ಹೂಡಿದವು...

ಗ್ಯಾಲರಿಗಳು (ಉಪ್ಪರಿಗೆಯ ನೆಲೆ) ಪುರ ಜನರಿಗೆ ಕಾದಿರುತ್ತಿದ್ದವು.

**ಡೊಂಬರಾಟ :**

ನಮ್ಮವರ ಡೊಂಬರಾಟ ಜಗತ್ತಿನ ಆಶ್ಚರ್ಯವಾಗಿತ್ತು. ಬಗೆಬಗೆಯ ಕಸರತ್ತು ಮತ್ತು ಅಂಗಸಾಧನೆಗಳ ಜೊತೆಗೆ ಹಲವಾರು ಪ್ರಾಣಿಗಳನ್ನೂ ಪಳಗಿಸಿ ಡೊಂಬರು ತಮ್ಮ ಆಟಗಳನ್ನು ಪ್ರದರ್ಶಿಸುತ್ತ ಊರೂರು ತಿರುಗುತ್ತಿದ್ದರು. ಈಗಿನ ಡೊಂಬರಲ್ಲಿ ಎದ್ದು ಕಾಣುವ ದಾರಿದ್ರ್ಯ ಅವರಲ್ಲಿ ಇರಲಿಲ್ಲ. ಆಧುನಿಕ ಸರ್ಕಸ್ ಕಂಪನಿಗಳಂತಹ ಸಂಘಟನೆ ಅವರದಾಗಿತ್ತು. ಪ್ರೌಢ ದೇವರಾಯನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿದ ಇರಾಣದ ಪ್ರವಾಸಿ ಅಬ್ದುರ್ ರಝಾಕನು ಇಂಥ ಆಟಗಳನ್ನು ಕಂಡು ಆಶ್ಚರ್ಯಪಟ್ಟು ವಿವರವಾದ ವರ್ಣನೆಯನ್ನು ಬರೆದಿಟ್ಟಿದ್ದಾನೆ.

"ಈ ಡೊಂಬರು ಒಂದು ಗಜ ಉದ್ದ ಮತ್ತು ಅರ್ಧ ಅಗಲದ ಮೂರು ತೊಲೆ (Beam)ಗಳನ್ನು ಮೂರು ನಾಲ್ಕು ಗಜಗಳಷ್ಟು ಎತ್ತರದಲ್ಲಿ ಜೋಡಿಸಿದರು. ಅದರ ಮೇಲೆ ಅಷ್ಟೇ ಅಗಲಳತೆಯ ಇನ್ನೆರಡು ತೊಲೆಗಳನ್ನು ಇಡಲಾಯಿತು. ಎಲ್ಲಕ್ಕೂ ಮೇಲೆ ಚಿಕ್ಕದಾದ ಇನ್ನೊಂದು ತೊಲೆಯನ್ನು ಜೋಡಿಸಿದರು. ಹೀಗಾಗಿ ಮೊದಲಿನೆರಡು, ಕೊನೆಯ ತೊಲೆಗೆ ಆಧಾರವಾಗಿ ನಿಂತಿದ್ದವು. ತರಬೇತಿ ಹೊಂದಿದ ದೊಡ್ಡ ಆನೆಯೊಂದು ಬಂದು ಮೊದಲಿನೆರಡೂ ಹಂತಗಳನ್ನೇರಿ ತನ್ನ ಅಂಗಾಲಿಗಿಂತಲೂ ಕಿರಿಯದಾದ ಕೊನೆಯ ತೊಲೆಯನ್ನು ನಾಲ್ಕೂ

ಕಾಲುಗಳಿಂದ ಹತ್ತಿತ್ತು. ನಂತರ ಏರಲು ಆಧಾರವಾಗಿದ್ದ ತೊಲೆಗಳನ್ನು ತೆಗೆದರು. ಆ ಎತ್ತರದಲ್ಲಿ ಕುಳಿತು ಆನೆ ಕೆಳಗೆ ಕುಳಿತು ಹಾಡುತ್ತಿದ್ದವರ ಹಾಡಿಗೆ ಸರಿಯಾಗಿ ಸೊಂಡಿಲನಾಡಿಸುತ್ತ ತಾಳ ಹಾಕಲಾರಂಭಿಸಿತು."

"ಅದರಂತೆ ಹತ್ತು ಗಜ (ಮೂವತ್ತು ಅಡಿ) ಎತ್ತರದ ಸ್ತಂಭವೊಂದನ್ನು ನಿಲ್ಲಿಸಿ ತಕ್ಕಡಿಯಂತೆ ಒಂದು ದೊಡ್ಡ ತೊಲೆಯನ್ನು ಅಡ್ಡಕ್ಕೆ ಜೋಡಿಸಲಾಯಿತು. ಒಂದೆಡೆ ಆನೆಯಷ್ಟು ತೂಕದ ಬಂಡೆಯೊಂದನ್ನು ಕಟ್ಟಲಾಯಿತು. ಇನ್ನೊಂದೆಡೆ ಒಂದು ಗಜ ಉದ್ದಗಲದ ಹಲಿಗೆಯನ್ನು ಬಲವಾದ ಹುರಿಗಳಿಂದ ಕಟ್ಟಿದರು. ಆನೆ ಈ ಹಲಿಗೆಯನ್ನೇರಿ ನಿಂತಿತು. ಹುರಿಯನ್ನು ಸ್ವಲ್ಪ ಸ್ವಲ್ಪ ಇಳಿಸುತ್ತ ಕಲ್ಲನ್ನೂ ಆನೆಯನ್ನೂ ಸಮಾನ ಅಂತರದಲ್ಲಿ ತೂಗಬಿಡಲಾಯಿತು. ಅಷ್ಟು ಎತ್ತರದಲ್ಲಿದ್ದ ಆನೆ, ಸಂಗೀತಕ್ಕೆ ಸೊಂಡಿಲಿನಿಂದ ತಾಳ ಹಾಕಲಾರಂಭಿಸಿತು."

ಆನೆಯ ಈ ಸೀಸೊ (See-saw) ಆಟ ವಿದೇಶಿಯನ ಕಣ್ಣಿಗೆ ಅತ್ಯದ್ಭುತವಾಗಿ ಕಂಡಿತು. ಮೈಯನ್ನು ಮೇಣದಂತೆ ಮಣಿಸಬಲ್ಲವರಾಗಿದ್ದ ಡೊಂಬತಿಯರ ಕಸರತ್ತಿನ ವರ್ಣನೆ ಕಾವ್ಯಗಳಲ್ಲಿ ಬರುತ್ತದೆ. ಗಳುವಿನ ತುದಿಯಲ್ಲಿ ಶಸ್ತ್ರವನಿಟ್ಟು, ಉಂಗುಟದ ಕೊನೆ ಊರಿ ಲಾಗಹಾಕುವ, ಮರಗಾಲು ಕಟ್ಟಿಕೊಂಡು ಮಿಣಿಯ ಹುರಿಯ ಮೇಲೆ ನಡೆಯುವ ಮತ್ತು ಇನ್ನೂ ಹೆಚ್ಚಿನ ಕಸರತ್ತು ಮಾಡಬಲ್ಲ ಡೊಂಬತಿಯರಿದ್ದರು.

ವಿಜಯನಗರದ ಕಾಲಕ್ಕೆ ಬ್ರಾಹ್ಮಣರನ್ನು ರಂಜಿಸುವ ಡೊಂಬರೂ ಇದ್ದರು. ಇವರನ್ನು 'ವಿಪ್ರವಿನೋದಿ'ಗಳೆಂದು ಶಾಸನಗಳಲ್ಲಿ ಕರೆಯಲಾಗಿದೆ.

**ಘೋರ ಆಟಗಳು :**

ಈಗ ಪ್ರಚಾರದಲ್ಲಿ ಇಲ್ಲದ ಹಲವಾರು ಆಟಗಳು ಆಗ ಪ್ರಚಾರದಲ್ಲಿದ್ದವು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಜನಪ್ರಿಯವಾಗಿದ್ದ ಕೆಲ ಪಂದ್ಯಾಟಗಳು ಎದೆ ಝಲ್ಲೆನಿಸುವಂತಿವೆ. 'ಮಾನಸೋಲ್ಲಾಸ'ದ 'ಗಜವಾಹ್ಯಾಲಿವಿನೋದ'ವೆಂಬ ಅಧ್ಯಾಯದಲ್ಲಿ, ಆನೆ-=ಮನುಷ್ಯರ, ಆನೆ ಆನೆಗಳ, ಆನೆ-ಕುದುರೆಗಳ ಪಂದ್ಯಾಟಗಳ ವರ್ಣನೆ ಬರುತ್ತದೆ. ಕೇವಲ ಮದ್ದಾನೆಗಳನ್ನು ಇಂಥ ಆಟಗಳಿಗೆ ಬಳಸಲಾಗುತ್ತಿತ್ತು. ಮತ್ತು ಬರುವಂತೆ ಮಾಡಲು ಪ್ರಯಾಗಿಸುತ್ತಿದ್ದ ಹಲವಾರು ಔಷಧಗಳನ್ನೂ ಅದರಲ್ಲಿ ಉಲ್ಲೇಖಿಸಲಾಗಿದೆ. ಗಜಾಧ್ಯಕ್ಷನು ಈ ಆಟಕ್ಕೆ ಬೇಕಾದ ಕ್ರೀಡಾರಂಗವನ್ನು ಸಿದ್ಧಪಡಿಸಿ, ನೋಡುವುದಕ್ಕೆ ಅಲೋಕನಮಂದಿರವನ್ನು (Balcony)ಎತ್ತರದ ಸ್ಥಾನದಲ್ಲಿ ಏರ್ಪಡಿಸಿ ಅರಸನಿಗೆ ತಿಳಿಸುತ್ತಿದ್ದ.

ನಂತರ ಊರಲ್ಲಿ ಡಂಗುರ ಸಾರಿ ಸ್ಥೂಲ ಕಾಯರು , ಗರ್ಭಿಣಿ ಸ್ತ್ರೀಯರು, ಮಕ್ಕಳು ಮತ್ತು ಅಂಗವಿಕಲರು ಮುಂತಾದವರಿಗೆಲ್ಲ ಸಾರ್ವಜನಿಕ ಸ್ಥಳಗಳಲ್ಲಿ ಓಡಾಡದಂತೆ ಎಚ್ಚರಿಸಲಾಗುತ್ತಿತ್ತು. ಇದು ಮದ್ದಾನೆಗಳ ಉಪದ್ರವದಿಂದ ಸಾರ್ವಜನಿಕರನ್ನು ರಕ್ಷಿಸಲು

ಕೈಕೊಂಡ ಮುಂಜಾಗ್ರತೆಯಾಗಿರುತ್ತಿತ್ತು. ಅದು ಕ್ರೀಡಾಂಗಣದ ಸುತ್ತ ಕಂದಕಗಳನ್ನಗೆದು ಪ್ರೇಕ್ಷಕರ ಸ್ಥಳದ ಸುತ್ತ ಜಾಳಿಗೆ ಕಟ್ಟುತ್ತಿದ್ದರು.

ಈ ಆಟದ ವಾಹ್ಯಾಳಿ ೬೦೦ ಅಡಿ ಉದ್ದ ೩೬೦ ಅಡಿ ಅಗಲ ಇರುತ್ತಿತ್ತು. ವಾಹ್ಯಾಳಿಗೆ ಎರಡು ಪ್ರವೇಶದ್ವಾರಗಳು ಇರುತ್ತಿದ್ದು ರಂಗವನ್ನು ದ್ವಿಪಭೂಮಿ, ನೃಪಭೂಮಿ ಮತ್ತು ಪರಿಕಾರ ಭೂಮಿಗಳೆಂದು ವಿಭಾಗಿಸಲಾಗುತ್ತಿತ್ತು. ಅರಸನು ಈ ಆಟದಲ್ಲಿ ಭಾಗವಹಿಸಲು ಬಂದವರಿಗೆ, ಇಂಥ ಅಪಾಯದ ಆಟದಲ್ಲಿ ಸೇರುವ ಕಾರಣ ಕೇಳುತ್ತಿದ್ದ. ಅವರ ಉತ್ತರಗಳು ಸಮಾಧಾನಕರವಾಗಿದ್ದರೆ, ಆಟಕ್ಕೆ ಅನುಮತಿಯನ್ನು ನೀಡುತ್ತಿದ್ದ.

ಮೇಲೆ ಹೇಳಿದ ಮೂರು 'ಭೂಮಿ'ಗಳಲ್ಲಿ ಆನೆಯನ್ನು ಹಿಂದೆ ಹಾಕಿ ಓಡಿದವ ವಿಜಯಶಾಲಿಯೆಂದು ಪರಿಗಣಿಸಲ್ಪಡುತ್ತಿದ್ದ. ಆದರೆ ಆ 'ಭೂಮಿ'ಗಳನ್ನು ಬಿಟ್ಟು ಓಡಿದರೆ ಅಥವಾ ಆನೆ ಅವನನ್ನು ಹಿಡಿದರೆ, ಆತ ಸೋತನೆಂದು ಭಾವಿಸಲಾಗುತ್ತಿತ್ತು.

ಇದೇ ಪ್ರಕಾರ ಆನೆ ಆನೆಗಳ ಓಟದ ಆಟದ ವಿವರಗಳೂ 'ಮಾನಸೋಲ್ಲಾಸ'ದಲ್ಲಿ ಇವೆ.

ರೋಮನ್ನರ ಗ್ಲಾಡಿಯೇಟರರ ಆಟವನ್ನು ಹೋಲುವ ರೌದ್ರ ಆಟಗಳೂ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದವೆಂದು ಆನೆ ಪಂದ್ಯಾಟಗಳ ಉಲ್ಲೇಖಗಳಿಂದ ತಿಳಿದುಬರುತ್ತದೆ. ಕಳ್ಳನ ಕೈಗಳನ್ನು ಕಟ್ಟಿ ಮದ್ದಾನೆಗಳ ಎದುರಿಗೆ ಕ್ರೀಡಾರಂಗದಲ್ಲಿ ಬಿಡಲಾಗುತ್ತಿತ್ತು. ಆನೆ ಅವನನ್ನು ಅಟ್ಟಿಸಿಕೊಂಡು ಬರುತ್ತಿತ್ತು. ಆತ ಬದುಕಿ ಉಳಿದರೆ ನಿರಪರಾಧಿಯೆಂದು ತೀರ್ಮಾನಿಸಲಾಗುತ್ತಿತ್ತು. ಸತ್ತರೆ ಅದೇ ಅವನಿಗೆ ಶಿಕ್ಷೆಯಾಗಿಬಿಡುತ್ತಿತ್ತು.

ಇನ್ನೊಂದು ಸ್ಪರ್ಧೆಯಲ್ಲಿ ಆನೆಗಳ ಕಣ್ಣುಕಟ್ಟಿ ಹರಿಕಾರ ಕ್ರೀಡಾಭೂಮಿಗೆ ಬಂದಕೂಡಲೇ ಕಣ್ಣಿನ ಪಟ್ಟಿ ತೆಗೆಯುತ್ತಿದ್ದರು. ಉದ್ರೇಕಗೊಂಡ ಆನೆ ಹರಿಕಾರನನ್ನು ಕೊಲ್ಲಲು ಬೆನ್ನಟ್ಟಿ ಬರುತ್ತಿತ್ತು. ಆಗ ಕುದುರೆಗಳನ್ನೆಲ್ಲ ಬಿಡಲಾಗುತ್ತಿತ್ತು. ಹರಿಕಾರನನ್ನು ಬಿಟ್ಟು ಆನೆ ಕುದುರೆಗಳ ಮೇಲೆ ಏರಿ ಹೋಗುತ್ತಿತ್ತು. ಇಂಥ ಆಟಗಳಲ್ಲಿ ಕೆಲವು ಕುದುರೆಗಳ ಮತ್ತು ಹರಿಕಾರರ ಸಾವು ಅನಿವಾರ್ಯವಾಗಿತ್ತು. ಆಟದ ಕೊನೆಗೆ ತುಂಬಾ ಕಷ್ಟದಿಂದ ಈ ಆನೆಯನ್ನು ಬಂಧಿಸಿ ಒಯ್ಯಲಾಗುತ್ತಿತ್ತು.

ಆಟ ನೋಟಗಳಲ್ಲಿ ಜನರ ಆಸಕ್ತಿ ಅಪರಿಮಿತವಾಗಿತ್ತು. ಅವರು ತಂಡತಂಡವಾಗಿ ಬಂದು ಆಟಗಳನ್ನು ನೋಡುತ್ತಿದ್ದರು. ಗೆದ್ದ ಆಟಗಾರರನ್ನು ಜನರೂ ಅರಸರೂ ಬಹುಮಾನಗಳನ್ನಿತ್ತು ಗೌರವಿಸುತ್ತಿದ್ದರು. ಕೆಚ್ಚೆದೆಯ ವೀರರನ್ನೂ ಜನತೆ ಮರೆಯಲಿಲ್ಲ. ಈ ಮೊದಲು ವೀರ ಮಹಿಳೆ ಹರಿಯಕ್ಕ ಮತ್ತು ವೀರ ನಾಯಿ ಕಾಳಿಯ ಬಗ್ಗೆ ಹೇಳಿದೆ. ಎಲ್ಲಕ್ಕನೆಂಬ ಡೊಂಬತಿ ಗಳುವಿನ ಮೇಲೆ ಕಸರತ್ತು ಮಾಡುತ್ತಿರುವಾಗ ಬಿದ್ದು ತತ್‌ಕ್ಷಣ ಪ್ರಾಣ ಬಿಟ್ಟಾಗ ಅವಳಿಗಾಗಿ ವೀರಗಲ್ಲನ್ನು ಸಡಿಲಿಸಲಾಯಿತೆಂದು ಶಾಸನವೊಂದು ಹೇಳುತ್ತದೆ.

ಊರು ಊರುಗಳಲ್ಲಿ ಗರಡಿಮನೆಗಳಿದ್ದವು. ಈ ನಾಡಿನಲ್ಲಿ ಪ್ರತಿಯೊಬ್ಬ ತರುಣನೂ ಒಂದಿಲ್ಲೊಂದು ಶಸ್ತ್ರದಲ್ಲಿ ನೈಪುಣ್ಯ ಪಡೆದಿರುತ್ತಾನೆಂದು ಪೆಟ್ರೊಡೆಲ್ಲಾ ವಾಲ್ಲೆ ಹೇಳಿದ್ದಾನೆ.

ಶಾರೀರಿಕ ಸಂಸ್ಕೃತಿಯನ್ನು (Physical culture) ಈ ರೀತಿ ಸಂಘಟಿತ ರೂಪದಲ್ಲಿ ಶತಮಾನಗಟ್ಟಲೆ ನಡೆಸಿಕೊಂಡು ಬಂದ ನಾಡ ಜನ ಈಗ ಅದನ್ನು ಮರೆತಿದ್ದಾರೆ. 'ಶರೀರಮಾದ್ಯಂ ಖಲು ಧರ್ಮ ಸಾಧನಮ್' ಎಂದು ನಂಬಿದ್ದ ನಮ್ಮ ಹಿರಿಯರು ಸದೃಢ ಶರೀರಕ್ಕೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು.

ಕೆಲವು ದಶಕಗಳ ಹಿಂದೆ ಕೂಡ ಇಂಥ ಗರಡಿ ಮನೆಗಳು ಅಲ್ಲಲ್ಲಿ ಕಾಣಸುತ್ತಿದ್ದವು. ನಮ್ಮ ಹಿಂದಿನವರ ಕ್ರೀಡಾವೃತ್ತಿ ನಮ್ಮಲ್ಲೂ ಉಳಿದು ಬೆಳೆದು ಬಂದಿದ್ದರೆ ರೇಲ್ವೆಗಳನ್ನು, ಬಸ್ಸುಗಳನ್ನು ಸುಡುವ, ದೀಪಗಂಬಗಳನ್ನು ಮುರಿಯುವ, ಟೆಲಿಫೋನುಗಳನ್ನು ಹಾಳುಗೆಡುವ ಯುವಕರ ಶಕ್ತಿ ಹುರುಪುಗಳೆಲ್ಲ ಇಂಥ ಆಟಗಳತ್ತ ಹರಿಯುತ್ತಿದ್ದವೋ ಏನೋ!



5. ಜಟ್ಟಿಕಾಳಗ ಪ್ರದರ್ಶನ



6. ಕೋಲಾಟ



7. ಸ್ತ್ರೀವಾದ್ಯ ನೃತ್ಯ- ಕೂಟ

## ಆಧಾರ ಗ್ರಂಥಗಳು


೧. ಎ ಫಾರಗಾಟನ್ ಎಂಪಾಯರ್ ಆಫ್ ವಿಜಯನಗರ ರಾಬರ್ಟ ಸಿವೆಲ್ ನ್ಯೂ ದಿಲ್ಲಿ ೧೯೬೨

೨. ನಾಗೇಗೌಡ ಎಚ್. ಎಲ್. ಪ್ರವಾಸಿ ಕಂಡ ಇಂಡಿಯ : ಸಂಪುಟ ಎರಡು

೩. ಎನ್ಕೆ ಕುಮಾರವ್ಯಾಸ ಮತ್ತು ಕೃಷ್ಣಕಥೆ ಬೆಂಗಳೂರು ೧೯೬೯

೪. ನಂಜುಂಡ ಕವಿ ರಾಮನಾಥ ಚರಿತ (ಸಂ. ಎಚ್. ದೇವೀರಪ್ಪ) ಮೈಸೂರು ಭಾಗ I ೧೯೬೯

೫. ಕುಮಾರವ್ಯಾಸ ಭಾರತ (ಮೈಸೂರು ೧೯೧೨) ಆದಿಪರ್ವXVII

೬. ಮೈಸೂರ್ ಆರ್ಕಿಯಾಲಾಜಿಕಲ್ ರಿಪೋರ್ಟ್ ೧೯೩೮ No 98

೭. ರತ್ನಾಕರವರ್ಣಿ : ಭರತೇಶ ವೈಭವ ಬೆಂಗಳೂರು ೧೯೬೩


★★★

# ೧೦. ವಾಸ್ತು, ಶಿಲ್ಪ, ಭಿತ್ತಿ ಚಿತ್ರಗಳಲ್ಲಿ ತೇರು

ಪ್ರತಿ ಊರಿನ ಆರಾಧ್ಯದೇವತೆ, ಉತ್ಸವ ಮೂರ್ತಿಯ ರೂಪದಲ್ಲಿ ಊರಲ್ಲಿ ಸಂಚರಿಸುವುದುಂಟು. ಅದರಂತೆ ಮುದುಕರಿಗೆ, ಚಿಕ್ಕಮಕ್ಕಳಿಗೆ ಅನಾರೋಗ್ಯವಂತರಿಗೆ, ಅಶಕ್ತರಿಗೆ, ವೇಳೆಯ ಅಭಾವವಿರುವವರಿಗೆ, ಪ್ರವೇಶ ನಿಷಿದ್ಧವಿದ್ದ ದುರ್ದೈವಿಗಳಿಗೆ, ದೇವದರ್ಶನಕ್ಕೆ ದೇವಾಲಯಕ್ಕೆ ಹೋಗಲಾಗದ್ದರಿಂದ, ವರ್ಷಕ್ಕೊಮ್ಮೆಯಾದರೂ ಅವರ ಮನೆಯ ಬಾಗಿಲಿನಲ್ಲಿಯೇ ದೇವರು ದರ್ಶನ ಕೊಡುವುದರ ಸಲುವಾಗಿ ರಥೋತ್ಸವದ ಏರ್ಪಾಡಾಗಿದೆ. ಅಂತೆಯೇ ತೇರು ಎಂದರೆ ನಾಲ್ಕು ಗಾಲಿ ಜೋಡಿಸಿದ ಚಿಕ್ಕ ದೇವಾಲಯದಂತಿರುತ್ತದೆ. ದೇವಾಲಯದ ವಿವಿಧ ಭಾಗಗಳನ್ನು ತೇರಿನಲ್ಲಿಯೂ ಗುರುತಿಸಬಹುದು. ಚಿತ್ತಾರಗಳು, ಚಿತ್ರಪಟ್ಟಿಕೆಗಳು, ರಾಮಾಯಣ, ಮಹಾಭಾರತದ ಸನ್ನಿವೇಶಗಳು, ಸಾಮಾಜಿಕ ಜೀವನ, ಶೃಂಗಾರ ಚಿತ್ರಗಳು ತೇರಿನ ಹೊರಮೈಯಲ್ಲಿ ರೂಪಗೊಂಡಿರುತ್ತವೆ. ಈ ಭಾಗವನ್ನು ಬಹುಕಾಲ ಬಾಳುವಂತೆ ಕೊರಡಿನಲ್ಲಿ ರಚಿಸುವುದು ವಾಡಿಕೆ. ಐಶ್ವರ್ಯವಂತ ದೈವತಗಳ ತೇರುಗಳಲ್ಲಿ ಬೆಳ್ಳಿ, ಬಂಗಾರಗಳ ತಗಡುಗಳನ್ನು ಹೊದಗಿಸುವವರೂ ಇಲ್ಲದಿಲ್ಲ. ಉತ್ಸವ ಮೂರ್ತಿಯನ್ನು ಸ್ಥಾಪಿಸಲಾಗುವ ಗರ್ಭಗುಡಿಯನ್ನು ಚಿತ್ರಫಲಕಗಳ ಜೋಡಣೆಯಿಂದ ನಿರ್ಮಿಸಲಾಗುತ್ತದೆ. ಹಿತ್ತಾಳೆ ಇಲ್ಲವೇ ಕಂಚಿನ ಕಳಶವನ್ನು ಜೋಡಿಸಲಾಗಿರುತ್ತದೆ.

ಚಲಿಸುವದಕ್ಕಾಗಿಯೇ ನಿರ್ಮಿಸಿದ ತೇರು, ಕರ್ನಾಟಕದ ವಾಸ್ತುಶಿಲ್ಪ, ಭಿತ್ತಿಚಿತ್ರಗಳಲ್ಲಿ ಸ್ಥಾಯಿಯಾಗಿರುವಂತೆ ಮಾಡಿದ್ದು ನಮ್ಮ ಕಲಾಕಾರರ ವೈಶಿಷ್ಟ್ಯ. ಹಂಪೆಯ ವಿಜಯ ವಿಠ್ಠಲನ ದೇವಾಲಯದ ಆವಾರದಲ್ಲಿ ಎರಡನೇ ದೇವರಾಯನ ಕಾಲದಲ್ಲಿ (ಕ್ರಿ. ಶ. ೧೪೨೨-೪೬) ನಿರ್ಮಾಣವಾದ ಶಿಲಾರಥವಿದೆ. ಹಿಂದೊಮ್ಮೆ ದಕ್ಷಿಣ ಶೈಲಿಯ ಗೋಪುರ ಇದಕ್ಕೆ ಇತ್ತು, ಎನ್ನುವದು ಹಳೆಯ ಛಾಯಾಚಿತ್ರಗಳಿಂದ ಅರಿಯಬಹುದಾಗಿದೆ. ಅದು ಇಟ್ಟಂಗಿಯಿಂದ ರಚಿತವಾದದ್ದರಿಂದ ಬಿದ್ದು ಹೋಗಿ ಶಿಲೆಯ ಭಾಗ ಮಾತ್ರ ಉಳಿದುಕೊಂಡಿದೆ. ಪ್ರವೇಶದ್ವಾರದ ಅಕ್ಕಪಕ್ಕದಲ್ಲಿ ಜೋಡಿ ಆನೆಗಳಿದ್ದು ಎಡಬಲದಲ್ಲಿ ತಿರುಗಿಸಬಹುದಾದಂತಹ ಎರಡು ಜೋಡಿ ಗಾಲಿಗಳಿವೆ. ಇವುಗಳ ಮೇಲೆ ಹೂ ಬಳ್ಳಿಗಳನ್ನು ಅಂದವಾಗಿ ಕೊರೆಯಲಾಗಿದೆ. ಸಾಧ್ಯವಿದ್ದಲ್ಲೆಲ್ಲ ಚಿತ್ರಪಟ್ಟಿಕೆಗಳನ್ನು ಜೋಡಿಸಿ ಅಲಕಂರಿಸಿದ್ದಾರೆ. ಗರ್ಭಗುಡಿಯಲ್ಲಿ ಗರುಡನ ವಿಗ್ರಹವಿದೆ. ವಿಶೇಷ ಸಮಾರಂಭದಲ್ಲಿ ವಿಠ್ಠಲನ ವಿಗ್ರಹದ ರಥೋತ್ಸವದ ಏರ್ಪಾಡು ಇತ್ತು ಏನೋ !

ಶಿಲಾರಥದ ಭಾರವಾದ ಗಾಲಿಗಳನ್ನು ತಿರುಗಿಸಿದರೆ ಅವರ ಆಕಾಂಕ್ಷೆಗಳು ಈಡೇರುತ್ತವೆ. ಎಂದು ಇಂದಿಗೂ ನಂಬಲಾಗುತ್ತದೆ.

ಉತ್ತರಕನ್ನಡ ಜಿಲ್ಲೆಯ ಭಟಕಳದಲ್ಲಿರುವ ವಿಜಯನಗರ ಕಾಲದ ಕೇತಪ್ಪಯ್ಯ ದೇವಾಲಯ (ಕ್ರಿ.ಶ. ೧೫೪೬) ದ ಹೊರಜಗಲಿಯ ಮೇಲೆ ತೇರನ್ನು ಎಳೆಯುವ ಉಬ್ಬು ಚಿತ್ರವಿದೆ. ತೇರನ್ನು ಹಗ್ಗದ ನೆರವಿನಿಂದ ಉಬ್ಬು ಚಿತ್ರವಿದೆ. ಎತ್ತರವಿಲ್ಲದ ತೇರನ್ನು ಹಗ್ಗದ ನೆರವಿನಿಂದ ಎಳೆಯುವ ಭಕ್ತಾದಿಗಳು ಎಳೆಯುತ್ತಿದ್ದಾರೆ. ಇವರೆಲ್ಲ ನಡುವಿಗೆ ಅಡ್ಡ ಪಂಚೆ ಸುತ್ತಿಕೊಂಡು ತಲೆಗೆ ರುಮಾಲು ಧರಿಸಿದ್ದಾರೆ. ಇಂದಿಗೂ ಆ ಪ್ರದೇಶದಲ್ಲಿ ಬೀಡು ಬಿಟ್ಟ ಗೊಂಡರು ಗ್ರಾಮ ಒಕ್ಕಲಿಗರು, ಸೇರುಗಾರರು ಇದೇ ರೀತಿಯ ಬಟ್ಟೆಗಳನ್ನು ಧರಿಸುವ ಪರಿಪಾಠ ಇಟ್ಟುಕೊಂಡಿದ್ದಾರೆ. ತೇರಿನ ದಿಕ್ಕು ಮತ್ತು ವೇಳೆಯನ್ನು ನಿಯಂತ್ರಿಸಲು ಒಬ್ಬ 'ಪೆಟಮಣೆ' ಹಿಡಿದು ಸಾಗುತ್ತಿದ್ದಾನೆ. ಇಂದಿಗೂ ತೇರಿಗೆ ತಡೆಹಾಕುವ ಇಂಥ ಸಾಧನ ಬಳಕೆಯಲ್ಲಿದೆ. ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಅದೇ ಜಿಲ್ಲೆಯ ವೆಂಕಟಾಪುರದ ವೆಂಕಟರಮಣ ದೇವಾಲಯ (ಕ್ರಿ.ಶ. ೧೬೬೧)ದ ಗರ್ಭಗುಡಿಯ ಹೊರಗಡೆ ಸಾಲಂಕೃತ ತೇರಿನ ಉಬ್ಬು ಚಿತ್ರವಿದೆ. ಇದನ್ನು ನೋಡುತ್ತಿದ್ದಂತೆ ಕರ್ನಾಟಕದ ಕರಾವಳಿಯಲ್ಲಿ ಇಂದಿಗೂ ಪ್ರಚಲಿತವಿದ್ದ ತೇರುಗಳು ಕಣ್ಣಿಗೆ ಕಟ್ಟಿದಂತಾಗುತ್ತದೆ. ವೆಂಕಟಾಪುರದಲ್ಲಿ ವಿಷ್ಣುವಿನ ವಿಗ್ರಹವನ್ನು ಉತ್ಸವ ಮೂರ್ತಿಯಾಗಿ ಬಳಸಲಾಗಿದೆ.

ಶ್ರವಣಬೆಳಗೊಳದ ಜೈನಮಠ (ಕ್ರಿ.ಶ. ೧೮೨೫)ದ ಒಳಾಂಗಣವನ್ನು ಸುತ್ತವರಿದ ಗೋಡೆಗಳಲ್ಲಿ ರಥೋತ್ಸವ ಆಚರಣೆಯ ಭಿತ್ತಿಚಿತ್ರಗಳು ಅಚ್ಚಳಿಯದೇ ಉಳಿದುಕೊಂಡಿವೆ. ಅಂತಹದೇ ತೇರು ಇಂದಿಗೂ ಅಲ್ಲಿ ಬಳಕೆಯಲ್ಲಿದೆ. ಚತುರ್ಭುಜ ಪದ್ಮಾವತಿಯ ವಿಗ್ರಹ ಸ್ಥಾಪಿಸಿ, ರುದ್ರಾಕ್ಷಿಮಾಲೆಗಳನ್ನು ಧರಿಸಿದ ಈರ್ವರು ಪೂಜಾರಿಗಳು ಪೂಜಾನಿರತರಾಗಿದ್ದಾರೆ. ಗೋಪುರವನ್ನು ಮಹಡಿಗಳಂತೆ ರಚಿಸಿ ಅವುಗಳಿಂದ ಭಗವಾ ಝಂಡಾಗಳನ್ನು ಹಾರಿಸಲಾಗಿದೆ. ಹಿಂಬದಿಗೆ ಭಕ್ತಾದಿಗಳು ಗಾಲಿಗಳ ಅಡಿಸಿಕ್ಕು ನುಚ್ಚುನೂರಾಗದಂತೆ ರಕ್ಷಿಸಲು ಮೂವರು ಪೈಲವಾನರು ಸೆಡ್ಡು ಹೊಡೆದು ನಿಂತಿದ್ದಾರೆ. ಅವರ ಎಡ ಮತ್ತು ಬಲಬದಿಗೆ ಆನೆ ಮತ್ತು ಒಂಟೆಗಳ ಮೇಲೆ ನಗಾರಿಗಳನ್ನು ಏಕಪ್ರಕಾರವಾಗಿ ಬಡಿಯಲಾಗುತ್ತಿದೆ. ತೇರಿನ ಎದುರು ಜೈನ ಮಠದ ಹಿರಿಯ ಗುರುಗಳು ಕಾಲುನಡಿಗೆಯಲ್ಲಿ ಹೊರಟಾಗ ಕಿರಿಯ ಗುರುಗಳು ಅವರನ್ನು ಬರಮಾಡಿಕೊಳ್ಳುತ್ತಿದ್ದಾರೆ. ಅವರ ಉಡುಪು ವಿಶಿಷ್ಟರೀತಿಯಾಗಿದೆ. ತಲೆಗೆ ಟೋಪಿ ಧರಿಸಿ, ಧೋತರವನ್ನು ಹೆಚ್ಚು ನೆರಿಗೆಗಳು ಬರುವಂತೆ ಉಟ್ಟು ಕೈಯಲ್ಲಿ ನವಿಲು ಗರಿಯ ಪಿಂಛ ಹಿಡಿದಿದ್ದಾರೆ. ಹಿರಿಯ ಗುರುಗಳು ಪಾದುಕೆಗಳನ್ನು ಧರಿಸಿದ್ದರೆ, ಕಿರಿಯರು ಬರಿಗಾಲಲ್ಲಿ ಇದ್ದಾರೆ. ಅವರ ವರ್ಚಸ್ಸು, ಸ್ಥಾನಮಾನಗಳನ್ನು ಸೂಚಿಸುವ ಸಲುವಾಗಿ ಛತ್ರ ಚಾಮರಗಳನ್ನು ಹಿಡಿದವರು, ಮೊದಲಾದವರನ್ನು ಸೇರಿಸಲಾಗಿದೆ. ಈ ಸೇವಕರೆಲ್ಲ ನಿಲುವಂಗಿ ತೊಟ್ಟು ಸೊಂಟಕ್ಕೆ ಪಟ್ಟಿ ಬಿಗಿದುಕೊಂಡು ತಲೆಗೆ ರುಮಾಲು ಸುತ್ತಿಕೊಂಡವರಿದ್ದಾರೆ. ಈರ್ವರು ರಾಜದಂಡ ಕೈಯಲ್ಲಿ ಹಿಡಿದು. ಪದ್ಮಾವತಮ್ಮನವರ, ಶ್ರೀ ಗುರುಗಳ ಹಿರಿಮೆ ಹಾಡುತ್ತ ಭೋಪರಾಕು ಹಾಕುತ್ತಿದ್ದಾರೆ.

ಅವರ ಮುಂದೆ ವಿವಿಧ ಆಕಾರದ ಪತಾಕೆಗಳನ್ನು ಹಿಡಿದವರು, ಸಿಂಹ, ಮತ್ತು ಶಂಖಗಳ ಲಾಂಛನ ಹೊತ್ತವರು ಸಾಲಾಗಿ ಹೊರಟಿದ್ದಾರೆ. ಸನಿಹದಲ್ಲಿ ಜಟಾಧಾರಿ ಸಾಧು, ಓರ್ವನು ಕೈಯಲ್ಲಿ ಟಿಪರಿಬಾರಿಸಿ ಮನಸ್ಸಿ ನರ್ತಿಸುವುದರಲ್ಲಿ ಮಗ್ನನಾಗಿದ್ದಾನೆ. ಕೆಳಹಂತದ ಪಟ್ಟಿಕೆಯಲ್ಲಿ ನರ್ತಕಿಯೋರ್ವಳು ನರ್ತಿಸುವಾಗ ಹಿನ್ನೆಲೆಯಾಗಿ ಹಾಡುಗಾತಿ, ಮೃದಂಗ ನುಡಿಸುವವ, ತಾಳ ಹಿಡಿದವ, ತಂಬೂರಿ ಮೀಟುವವ ಇದ್ದಾರೆ. ಸನಿಹದಲ್ಲಿ ದೀವಟಿಗೆ ಹಿಡಿದ ಓರ್ವನಿದ್ದಾನೆ. ಎಲ್ಲಕ್ಕೂ ಮುಂದೆ ಬಜಂತ್ರಿ ಮೇಳ ಹೊರಟಿದೆ. ಕಿರುಬಟ್ಟೆ ಧರಿಸಿದ ಇಬ್ಬರು ತಮ್ಮಟೆ ಬಾರಿಸಿದರೆ, ಹಬ್ಬದ ಉಡುಪು ಧರಿಸಿದ ಮೂವರು ನಾಗಸ್ವರ ಊದುತ್ತಿದ್ದಾರೆ. ಜೊತೆಗಿದ್ದವನು ಡೋಲು ನುಡಿಸುತ್ತಿದ್ದಾನೆ. ಇದರ ಕೆಳ ಹಂದರದಲ್ಲಿ ಭಕ್ತಾದಿಗಳು ಎರಡು ಹಗ್ಗಗಳನ್ನು ಹಿಡಿದು ತೇರನ್ನು ಎಳೆಯಲು ಸಿದ್ಧರಾಗಿ ನಿಂತಿದ್ದಾರೆ. ಜನ ಜಂಗುಳಿಯನ್ನು ನಿಯಂತ್ರಿಸುವಾಗ ಅಲ್ಲಲ್ಲಿ ಬೆತ್ತಹಿಡಿದ ಜನರಿದ್ದಾರೆ. ಅವರು ಚಿತ್ತಾರದ ನಿಲುವಂಗಿ, ಪಾಯಜಮಾ ತೊಟ್ಟು ನಡುವಿಗೆ ಸೆಲ್ಲೆ ಬಿಗಿದುಕೊಂಡು, ತಲೆಗೆ ರುಮಾಲು ಸುತ್ತಿಕೊಂಡಿದ್ದಾರೆ. ಸಕಲರೂ ಬರಿಗಾಲಿನಲ್ಲಿ ಇರುವುದು ಗಮನಾರ್ಹ. ತೇರಿನ ಆಗಮನವನ್ನು ಕೇರಿಗೆಲ್ಲ ಸಾರಲು ಕಹಳೆ, ತುತೂರಿ ನಗಾರಿಗಳು ಏಕಪ್ರಕಾರವಾಗಿ ಮೊಳಗುತ್ತವೆ.

ರಥೋತ್ಸವದ ವಿವರಗಳನ್ನು ಚಿತ್ರ ಪಟ್ಟಿಕೆಯಲ್ಲಿ ಒಡಮೂಡಿಸಲಾಗಿದೆ. ಹಳಬರು, ಹೆಂಗಳೆಯರು, ತಮ್ಮ ಮಕ್ಕಳ ಜೊತೆಗೆ ಆಗಮಿಸುತ್ತಿದ್ದಾರೆ. ಗೃಹಸ್ಥನೋರ್ವನು ಇಬ್ಬರು ಮಕ್ಕಳೊಂದಿಗೆ ಬಂದು ಜಾತ್ರೆಯಲ್ಲಿ ಏನೇನು ಖರೀದಿಸಬೇಕೆಂದು ಗೃಹಿಣಿಯನ್ನು ವಿಚಾರಿಸುತ್ತಿದ್ದಾನೆ. ಹೆಂಗಳೆಯರಿಬ್ಬರೇ ಕರೆತಂದ ಒಂದು ಮಗು, ಕಂಡದ್ದೆಲ್ಲ ಬೇಕೆಂದು ಚಂಡಿ ಹಿಡಿದ್ದಿದ್ದರಿಂದ ಏನು ಮಾಡಬೇಕು? ಎಂದು ಅರಿಯದೇ ಕಂಗಾಲಾಗಿದ್ದಾರೆ. ಇವರು ತೊಟ್ಟ ಬಟ್ಟೆ ಬರೆ, ಧರಿಸಿದ ಆಭರಣಗಳು ಅಂದಿನ ವೇಷ ಭೂಷಣಗಳನ್ನು ಪ್ರತಿನಿಧಿಸುತ್ತವೆ. ರಥೋತ್ಸವಕ್ಕೆಂದು ತಾತ್ಪೂರ್ತಿಕ ಅಂಗಡಿಗಳನ್ನು ತೆರೆದ ಶೆಟ್ಟರು ಧನಸಂಪಾದನೆಯಲ್ಲಿ ಮೈಮರೆದಿದ್ದಾರೆ. ಮಿಠಾಯಿಯನ್ನು ಕೊಳ್ಳುತ್ತಿರುವ ಗಿರಾಕಿ. ತೂಕದಲ್ಲಿ ಮೋಸ ಮಾಡದಿರಲು ಅಂಗಡಿಕಾರನಿಗೆ ಅರಿಕೆಮಾಡಿ ಕೊಳ್ಳುತ್ತಿದ್ದಾನೆ. ಕಸ್ತೂರಿ ಮಾರುವ ಶೆಟ್ಟಿ ಕಾಲಿನಿಂದ ತಕ್ಕಡಿಯ ಚಲನೆಗೆ ಆತಂಕವೊಡ್ಡಿ ಮೋಸ ಮಾಡಲು ಯತ್ನಿಸಿದಾಗ ಗಿರಾಕಿಯು ಪ್ರತಿಭಟಿಸುತ್ತಿದ್ದಾನೆ. ಬಟ್ಟೆ ಅಂಗಡಿಯವನು ಮೊಳ ಕುಗ್ಗಿಸಿ , ಬಟ್ಟೆಯ ಉದ್ದವನ್ನು ಹಿಗ್ಗಿಸುವಾಗ, ಗಿರಾಕಿಯ ಪತ್ನಿ ಆಕ್ಷೇಪವೆತ್ತುತ್ತಿದ್ದಾಳೆ. ಹೆಂಗಳೆಯೋರ್ವಳು ಶೆಟ್ಟಿಕೊಟ್ಟ ತೆಂಗಿನಕಾಯಿ ಚೆನ್ನಾಗಿಲ್ಲವೆಂದು ಹಿಂದಿರುಗಿಸುತ್ತಿದ್ದಾಳೆ. ಹೆಂಗಳೆಯರೂ ವ್ಯಾಪಾರದಲ್ಲಿ ಹಿಂದೆ ಬಿದ್ದಿಲ್ಲ. ಒಬ್ಬಳು ಬಳೆತೊಡಿಸಿದರೆ, ಇನ್ನೊಬ್ಬಳು ಕಾಲುಂಗುರ ತೊಡಿಸುತ್ತಿದ್ದಾಳೆ. ಮಂಡಕ್ಕಿಯವಳು ಕಡ್ಲೆಪುರಿ ತುಂಬಿದ ನಾಡಶೇರನ್ನು ಗಿರಾಕಿಯು ಒಡ್ಡಿದ ಬಟ್ಟೆಯಲ್ಲಿ ಸುರಿಯುತ್ತಿದ್ದಾಳೆ. ಜಾತ್ರೆಯಲ್ಲಿ ರಸಿಕಶಿಖಾಮಣಿಗಳಿಗೂ ಕೊರತೆಯಿರುತ್ತಿಲ್ಲವೆನಿಸುತ್ತದೆ. ಲಕ್ಷಣವಾಗಿ ಅಲಂಕರಿಸಿಕೊಂಡ ಯುವಕನೋರ್ವನು ಹೆಣ್ಣಿನೊಡನೆ ಸರಸ ಸಂಭಾಷಣೆಯಲ್ಲಿ ಮೈಮರೆತದ್ದನ್ನು ಚಿತ್ರಿಸಲಾಗಿದೆ.

ಈ ಎಲ್ಲ ನೂಕು-ನುಗ್ಗಲಿನಲ್ಲಿ ಕಳ್ಳ-ಕಾಕರು ತಮ್ಮ ಕೈಚಳಕ ತೋರಿಸದೇ ಇರುವರೇ? ಅಂತೆಯೇ ಗುಪ್ತಚರ ಸಿಪಾಯಿಯೊಬ್ಬ ಕಳ್ಳನನ್ನು ಕದ್ದ ಸಾಮಾನಿನೊಂದಿಗೆ ಬಂಧಿಸಿ ಥಳಿಸುತ್ತಿದ್ದಾನೆ.

ಇಂಥ ತೇರು ಮತ್ತು ರಥೋತ್ಸವದ ಚಿತ್ರಗಳು ಅನೇಕ ದೇವಾಲಯಗಳಲ್ಲಿ ಚಿತ್ರಿತವಾಗಿರಲು ಸಾಕು. ಅವುಗಳನ್ನೆಲ್ಲ ಆಳವಾಗಿ ಅಭ್ಯಸಿಸಿದರೆ ರಥಶಿಲ್ಪದ ಪ್ರಕಾರಗಳು, ಅವುಗಳ ಪಟ್ಟಿಕೆಗಳಲ್ಲಿ ಮೂಡಿಬಂದ ಪೌರಾಣಿಕ ಮತ್ತು ಸಾಮಾಜಿಕ ಜೀವನಗಳು ಮಹಾಪ್ರಬಂಧಕ್ಕೆ ಒಳ್ಳೆ ಸಾಮಗ್ರಿ ಒದಗಿಸುತ್ತವೆ.



1. ಶಿಲ್ಪದಲ್ಲಿ ತೇರು



2. ಭಿತಿ ಚಿತ,ದಲ್ಲಿ ತೇರು



3. ಉಬ್ಬು ಚಿತ್ರದಲ್ಲಿ ತೇರು

## ೧೧. ಕೊರಡಿನಲ್ಲಿ ಕೊರೆದ ಚಿತ್ರಗಳಲ್ಲಿ ಸಾಮಾಜಿಕ ಜೀವನ.

ಪುರಾತನ ಕಾಲದ ಕರ್ನಾಟಕದ ಕಲಾಕಾರರು ಇತಿಹಾಸ ಸಂಶೋಧಕರಿಗೆ ಮಹದುಪಕಾರ ಮಾಡಿದ್ದಾರೆ. ಅವರು ಖಾಸಗಿ, ಧಾರ್ಮಿಕ ಮತ್ತು ಸಾರ್ವಜನಿಕವಾಗಿದ್ದ ಕಟ್ಟಡಗಳನ್ನು ಶಿಲ್ಪ, ಭಿತ್ತಿಚಿತ್ರ ಮತ್ತು ಕೊರಡುಗಳಲ್ಲಿ ಕೊರೆದ ಕೆಲಸಗಳಿಂದ ಅಲಂಕರಿಸಿದರು. ಇವುಗಳಲ್ಲೆಲ್ಲ ಸಮಕಾಲೀನ ಸಾಮಾಜಿಕ ಜೀವನದ ಇಣುಕು ನೋಟಗಳನ್ನು ವಿಪುಲವಾಗಿಯೇ ಸೇರ್ಪಡೆ ಮಾಡಿದ್ದಾರೆ. ಆದರೆ ಚರಿತ್ರೆಯ ವಿದ್ವಾಂಸರು, ಸಂಶೋಧಕರು ಇಂಥವುಗಳತ್ತ ಸಾಕಷ್ಟು ಲಕ್ಷ್ಯ ಪೂರೈಸಿಲ್ಲ. ಶಿಲಾಲೇಖಗಳು, ತಾಮ್ರಫಲಕಗಳು, ತಾಳೇಗರಿ ಗ್ರಂಥಗಳು ಮತ್ತು ಉತ್ಖನನದ ಸಾಮಗ್ರಿಗಳ ಮಹತ್ವವನ್ನು ಯಾರೂ ಪ್ರಶ್ನಿಸುವಂತಿಲ್ಲ. ಆದರೆ ಶಿಲ್ಪಚಿತ್ರ, ಭಿತ್ತಿ ಚಿತ್ರಗಳನ್ನು ಆಕರಗಳಾಗಿ ಬಳಸುವ ಶಾಸ್ತ್ರೀಯ ಪದ್ಧತಿ, ಚರಿತ್ರೆಯ ಅಧ್ಯಯನದಲ್ಲಿ ಇನ್ನೂ ರೂಪುಗೊಂಡಿಲ್ಲ. ಜೊತೆಗೆ ಕೆಲವು ಕಾಷ್ಠ ಶಿಲ್ಪಗಳನ್ನು ಅಥವಾ ಕೊರಡಿನಲ್ಲಿ ಕೊರೆದ, ಹಿಂದಿನಿಂದ ಉಳಿದು ಬಂದ ಕೊರಡು ಕೃತಿಗಳನ್ನು, ಸಂಶೋಧನಾ ಆಕರವಾಗಿ ಬಳಸಬಹುದಾದ ಸಾಧ್ಯತೆಯನ್ನು, ಈ ಪ್ರಬಂಧದಲ್ಲಿ ಪ್ರಾಸ್ತಾವಿಕವಾಗಿ ಚರ್ಚಿಸಲಾಗಿದೆ.

ಪಶ್ಚಿಮ ಕರಾವಳಿಯ ಉದ್ದಕ್ಕೂ ಹರಿತ್ (ಸದಾಹಸಿರು) ದಟ್ಟಕಾಡುಗಳು ಇದ್ದು ಉತ್ತಮ ಜಾತಿಯ ಇಮಾರತಿಯ ಮರಗಳು ಬೆಳೆಯುತ್ತಿದ್ದುದರಿಂದ ಕಟ್ಟಿಗೆಯ ಕೆತ್ತನೆಯ, ಕುಸುರಿಯ ಕಲಾಕೃತಿಗಳು ಈ ಪ್ರದೇಶದಲ್ಲಿ ಮತ್ತು ಮಲೆನಾಡಿನಲ್ಲಿ ಕಾಣಸಿಗುತ್ತವೆ. ಹಿಂದೊಮ್ಮೆ ಇವು ಉಳ್ಳವರ ಮನೆಗಳಲ್ಲಿ, ಮಠಗಳಲ್ಲಿ ವಿಪುಲವಾಗಿದ್ದಿರಬೇಕು. ಆದರೆ ತುಂಬ ಮಳೆ, ಅತ್ಯಧಿಕ ಆರ್ದ್ರತೆಗಳೊಂದಿಗೆ ಜನರ ಅಲಕ್ಷ್ಯಗಳೂ ಸೇರಿ ಅಪೂರ್ವ ಕಲಾಕೃತಿಗಳೆಲ್ಲ ಹುಳ-ಹುಪ್ಪಡಿಗಳಿಗೆ ಆಹುತಿಯಾಗಿರಬೇಕು. ಅಲ್ಲದೇ ಜನ, ಹೆಚ್ಚೆಚ್ಚಾಗಿ ಪಾಶ್ಚಾತ್ಯ ಅಭಿರುಚಿಗಳಿಗೆ ಮಾರುಹೋಗಿ, ಉಕ್ಕು, ಸಿಮೆಂಟ್, ವಾರ್ನಿಶ್, ಡಿಸ್ಟೆಂಪರ್‌ಗಳನ್ನು ತಮ್ಮವನ್ನಾಗಿಸಿಕೊಂಡಿದ್ದಾರೆ. ಅನಿಯಂತ್ರಿತವಾಗಿ ಕಾಡನ್ನು ಕಡಿದುಹಾಕಿ, ಉತ್ತಮ ಕೊರಡುಗಳು ಕಣ್ಮರೆಯಾಗುತ್ತ ಬಂದಂತೆ ಆಶ್ರಯ-ಅವಕಾಶಗಳ ಕೊರತೆಯಿಂದಾಗಿ ಕಾಷ್ಟಕಲೆಯೂ ಸಾಕಷ್ಟು ಮಣ್ಣುಗೂಡಿದೆ. ಪುಣ್ಯಕ್ಕೆ ಕೊಂಚ ಧಾರ್ಮಿಕ ಬುದ್ಧಿ ಉಳಿದುಕೊಂಡಿದ್ದರಿಂದ ಕೆಲವೇ ದೇವಾಲಯಗಳಲ್ಲಿದ್ದ ಇಂಥ ಕಲಾಕೃತಿಗಳನ್ನು ಭಕ್ತಾದಿಗಳು, ಪೂಜಾರಿ-ಮೊಖ್ತೇಸರರು, ಆಡಳಿತ ವರ್ಗದವರು ಸಂರಕ್ಷಿಸಿಕೊಂಡು ಬಂದಿದ್ದಾರೆ.

ವಾತಾವರಣದ ಪ್ರಕೋಪ ಮತ್ತು ಕ್ರಿಮಿಕೀಟಗಳ ಬಾಧೆಯನ್ನು ಶತಶತಮಾಗಳವರೆಗೆ ತಾಳಿಕೊಳ್ಳುವ ಮರದ ದಿಂಡನ್ನು ಪಡೆಯುವದು ಸುಲಭವಲ್ಲ. ಹಿಂದೊಮ್ಮೆ ದೇವರ ಸೇವೆಗೆಂದೇ ಮೀಸಲಾದ ಕಾಡುಗಳಿಂದ ಇವನ್ನು ಪಡೆದರೆ, ಬ್ರಿಟಿಷ್ ಆಡಳಿತಗಾರರು ತಮ್ಮ ಪ್ರಜೆಗಳ ಧಾರ್ಮಿಕ ಚಟುವಟಿಕೆಗಳಿಗೆ ನೆರವಾಗಲೆಂದು ಉತ್ತಮ ಕೊರಡನ್ನು ಪ್ರತ್ಯೇಕವಾಗಿ ಪೂರೈಸುವ ವ್ಯವಸ್ಥೆ ಮಾಡಿದ್ದರು. ಇಂದು ಆ ವ್ಯವಸ್ಥೆ ಮುಂದುವರಿಯುತ್ತಿಲ್ಲ. ಹಿಂದೆ ಪರಿಪಕ್ವವಾಗಿ ಬೆಳೆದ ಸಾಗವಾನಿ, ತೇಗ ಇಲ್ಲವೆ ನಂದಿಯ ಮರದ ದಿಂಡುಗಳನ್ನು ಆರಿಸಿ ತಂದು, ಅವನ್ನು ಅನುಕೂಲವಾದ ಉದ್ದಗಲತೆಗಳಲ್ಲಿ ಕೊಯಿಸಿ ಕಲಾಕಾರರಿಗೆ ಒಪ್ಪಿಸಲಾಗುತ್ತಿತ್ತು.

ಉತ್ಕೃಷ್ಟವಾದ ಹೊಯ್ಸಳ ದೇವಾಲಯಾದಿಗಳನ್ನು ಕಟ್ಟಲು ಸಕ್ರಿಯವಾಗಿ ನೆರವು ನೀಡಿದ ಗುಡಿಗಾರರು, ಸುತಾರರ ಆದಿವಂಶಜರೇ ಈ ಕಲೆಯನ್ನು ತಮ್ಮದನ್ನಾಗಿಸಿದ್ದರು. ಸುತಾರರು(ಬಡಗಿಗಳು), ಬಾಚಿ-ಗರಗಸಾದಿಗಳನ್ನು ಬಳಸಿ, ಬೃಹದಾಕಾರದ ಚೌಕಟ್ಟುಗಳನ್ನು ಸಿದ್ಧಮಾಡಿದರೆ, ಮೇಸ್ತ್ರಿಗಳು, ಉಳಿ-ಸುತ್ತಿಗಳಿಂದ ಕರಡು ಪ್ರತಿಮೆಗಳನ್ನು ಕಟೆಯುತ್ತಾರೆ. ವಿವಿಧ ಆಕಾರದ ಸೂಕ್ಷ್ಮ ಚಾಣಗಳನ್ನು ಬಳಸಿ, ನಯ-ನಾಜೂಕಿನ ಕುಸುರಿ ಕೆಲಸ ಮಾಡುವುದರಲ್ಲಿ ಗುಡಿಗಾರರೇ ಹೆಸರುವಾಸಿ! ಈ ಎಲ್ಲ ಕಲಾಕಾರರು ಕೊರಡನ್ನು ಆಮೂಲಾಗ್ರವಾಗಿ ಪರೀಕ್ಷಿಸಿ, ತಾವು ಮೂಡಿಸಬೇಕಾದ ಆಕೃತಿಗಳನ್ನು ಇದ್ದಲಿನಿಂದ ಗುರುತು ಹಾಕಿಕೊಳ್ಳುತ್ತಾರೆ. ಅನಂತರ ಹಂತ-ಹಂತವಾಗಿ ಕೊರೆಯುತ್ತ ಕೃತಿಗಳನ್ನು ಸಿದ್ಧಪಡಿಸುತ್ತಾರೆ. ಒರಟಾದ, ಹುರಬರಕಾದ ಆಕೃತಿಗಳನ್ನು ರೇವೆಕಾಗದ (Sand Paper) ತಿಕ್ಕಿ ಪರಿಶೀಲಿಸುತ್ತಾರೆ. ಅದಕ್ಕೆ ಹೊಳಪು ಬರಲು ಒಂದು ಜಾತಿಯ ಬೆಂದುರ್ಲಿ (Epiphyte ಸೀತಾದಂಡೆ) ಪರ್ಣಗಳಿಂದ ಉಜ್ಜುತ್ತಾರೆ. ದಶಕಗಳು, ಶತಕಗಳು ಕಳೆದರೂ ಕೆಡಬಾರದೆಂದು 'ಸೌದೆ ಎಣ್ಣೆ' (ಬೆಲ್ ತೇಲ್) ಗೋಡಂಬಿ ಕವಚದ ಎಣ್ಣೆಗಳನ್ನು ಲೇಪಿಸುತ್ತಾರೆ. ಪ್ರತಿ ಮಳೆಗಾಲದ ನಂತರವೂ ಈ ಲೇಪನ ಕಾರ್ಯ ಕೈಗೊಳ್ಳಬೇಕಾಗುತ್ತದೆ.

ಪ್ರತಿಗ್ರಾಮ, ಊರುಗಳಲ್ಲಿ ವರ್ಷದಲ್ಲೊಮ್ಮೆ ರಥೋತ್ಸವ ಜಾತ್ರೆ ನಡೆಸಿ, ಆರಾಧ್ಯ ದೇವತೆಯ ಉತ್ಸವಮೂರ್ತಿಯನ್ನು ತೇರಿಗೆ ಸ್ಥಳಾಂತರಿಸಿ ಮುಖ್ಯಬೀದಿಗಳಲ್ಲಿ ಮೆರವಣಿಗೆ ಮಾಡುವುದು, ಪರಂಪರಾಗತವಾದ ಪದ್ಧತಿ. ಕೆಲವು ದೇವಾಲಯಗಳಲ್ಲಿ, ಆದರಲ್ಲೂ ಕರಾವಳಿಯಲ್ಲಿ, ಅತ್ಯಂತ ಕಲಾತ್ಮಕ ತೇರುಗಳಿವೆ. ವರ್ಷದಲ್ಲಿ ಹೆಚ್ಚಿನ ಸಮಯವನ್ನು ಈ ತೇರುಗಳನ್ನು, ಇವಕ್ಕಾಗಿಯೇ ಕಟ್ಟಿಸಿದ 'ವಿಶ್ರಾಂತಿ ಗೃಹ' (ಎತ್ತರವಾದ ಗೂಡು)ಕ್ಕೆ ಸೇರಿಸುವುದರಿಂದ ಜಾತ್ರೆಯ ದಿನಗಳಲ್ಲಿ ಮಾತ್ರ ಅವುಗಳ ದರ್ಶನವನ್ನು ಯಥೇಚ್ಛವಾಗಿ ಪಡೆಯಬಹುದಾಗಿದೆ. ಉಕ್ಕಿನ ಕಂಬಿಗಳನ್ನು ಬಿಗಿದುಕೊಂಡ ನಾಲ್ಕು ಗಾಲಿಗಳು, ಭಾರವಾದ ತೇರನ್ನು ಹೊತ್ತುಂತಿರುತ್ತವೆ. ತೇರಿನ ನಾಲ್ಕು ದಿಕ್ಕುಗಳಲ್ಲಿಯೂ ಕೊರಡನ್ನು ಕೊರೆದು ನಿರ್ಮಿಸಿದ ಚಿತ್ರಪಟ್ಟಿಕೆಗಳನ್ನು ಜೋಡಿಸಿದ್ದು ಇರುತ್ತದೆ. ಹೆಚ್ಚಿನವು ರಾಮಾಯಣ,

ಮಹಾಭಾರತಗಳಲ್ಲಿಯ ಕಥಾನಕಗಳನ್ನು ಪ್ರತಿನಿಧಿಸಿದರೆ, ಅಲ್ಲೊಂದು ಇಲ್ಲೊಂದು ದೈನಂದಿನ ಜೀವನವನ್ನು ಚಿತ್ರಿಸಿದ್ದೂ ಉಂಟು. ಇಂಥ ತೇರುಗಳು, ದಕ್ಷಿಣಕನ್ನಡದ ಮಂಗಳೂರು, ಬೈಂದೂರು, ಬಪ್ಪನಾಡು, ಮುಲ್ಕಿ, ಉಡುಪಿ, ಕುಂದಾಪುರಗಳಲ್ಲಿ, ಉತ್ತರಕನ್ನಡದಲ್ಲಿ ಶಿರಾಲಿ, ಇಡಗುಂಜಿ, ಗುಣವಂತೆ, ಕಾಸರಗೋಡು, ಹೊನ್ನಾವರ, ಮಾವಿನಕುರ್ವೆ, ಹೊಸಾಡ, ಅಗ್ರಹಾರ, ಹಳದೀಪುರ, ಹೆಗ್ಡೆ, ಅಂಕೋಲೆಗಳಲ್ಲಿವೆ. ಒಳನಾಡಿನ ನಂಜನಗೂಡು, ಶ್ರೀರಂಗಪಟ್ಟಣ ಮತ್ತು ಗೋವಾದ ಪರ್ತಕಾಳಿಯ ದೇವಾಲಯಗಳಲ್ಲೂ ಇಂಥವುಗಳನ್ನು ಕಾಣಬಹುದಾಗಿದೆ. ಮೈಸೂರಿನ ಜಾನಪದ ವಸ್ತು ಸಂಗ್ರಾಹಲಯದಲ್ಲಿಯೂ ಕಾಷ್ಠಶಿಲ್ಪಗಳುಳ್ಳ ತೇರೊಂದನ್ನು ಮಾದರಿಗಾಗಿ ಸಂರಕ್ಷಿಸಿ ಇಡಲಾಗಿದೆ.

ಶಿಲ್ಪಿ, ಚಿತ್ರಕಾರ, ಕೊರಡಿನ ಕಲಾಕಾರರು ಒಂದೇ ಬಗೆಯ ಸನ್ನಿವೇಶಗಳನ್ನು ಆಯ್ದುಕೊಂಡರೂ ಅವನ್ನು ತಮ್ಮದೇ ಆದ ರೀತಿಯಲ್ಲಿ ಆಯಾ ಕೃತಿಯನ್ನು ರೂಪಿಸುವುದು ಸಾಮಾನ್ಯ. ತೇರಿನ ಚಿತ್ರಗಳಲ್ಲಿ ಮಗುವಿನ ಜನನ, ಲಾಲನೆ-ಪಾಲನೆ, ತಾಯಿ ಮಗುವನ್ನು ಮುದ್ದಿಸುವುದು, ಅಲಂಕಾರದಲ್ಲಿ ತೊಡಗಿದ ಲಲನೆಯರು, ಗೃಹಕೃತ್ಯದಲ್ಲಿ ತೊಡಗಿದ ಗರತಿಯರು, ಪಶು-ಪಕ್ಷಿಗಳನ್ನು ಸಾಕುವವರು, ವಾದ್ಯಗಾರರು, ನರ್ತಕಿಯರು, ಮುಂತಾದವರನ್ನು ಗುರುತಿಸಬಹುದು. ರಸಿಕತೆ, ಸರಸ-ಸಲ್ಲಾಪ, ರತಿ-ಕ್ರೀಡೆಗಳಿಗೂ ಪ್ರಾಧಾನ್ಯ ಕೊಡಲಾಗಿದೆ. ಈ ಉಬ್ಬು ಚಿತ್ರಗಳಲ್ಲಿ ಕಂಡುಬರುವ ಕೇಶಾಲಂಕಾರ, ಸೀರೆಗಳ ವೈವಿಧ್ಯ, ಉಡುವ ರೀತಿ, ಕಿರುಸೀರೆ, ಕಿವಿ, ಕೊರಳು, ಕೈ-ಕಾಲುಗಳ ಆಭರಣಗಳು ಇವುಗಳೆಲ್ಲ ನಿತ್ಯಜೀವನದ ಹಲವಾರು ಹೊಳಹುಗಳನ್ನು ಬಿಂಬಿಸುತ್ತವೆ. ಸಂಶೋಧನೆಗೆ ಉತ್ತಮ ಸಾಮಗ್ರಿ ಒದಗಿಸಬಲ್ಲವು.

ಪ್ರಸವವೇದನೆಯಲ್ಲಿರುವ ಮಹಿಳೆಯೋರ್ವಳು, ಕಿರಿಯ ವಯಸ್ಕರ ಭುಜಗಳ ಮೇಲೆ ಶರೀರದ ಭಾರ ಹಾಕಿದ್ದಾಳೆ. ಅವರು ಉದರವನ್ನು ನೇವರಿಸಿ ಸಾಂತ್ವನಗೊಳಿಸುತ್ತಿದ್ದಾರೆ. ಕಾಲುಮಣೆಯ ಮೇಲೆ ಕುಳಿತ ಸೂಲಗಿತ್ತಿ, ಅವತರಿಸಿ ಬರುತ್ತಲಿರುವ ಶಿಶುವನ್ನು ಸ್ವಾಗತಿಸುತ್ತಿದ್ದಾಳೆ (ಚಿತ್ರ1). ಉತ್ತರಕನ್ನಡ ಜಿಲ್ಲೆಯ ಭಟಕಳದ ಕೇತಪ್ಪಯ್ಯ ನಾರಾಯಣ ದೇವಸ್ಥಾನದಲ್ಲಿ ಇದೇ ವಿಷಯದ ಕುರಿತಾದ ಸುಂದರ ಶಿಲ್ಪವಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಇನ್ನೊಂದು ಚಿತ್ರದಲ್ಲಿ ತಾಯ ಭುಜದ ಸವಾರನಾಗಬಯಸುವ ಮಗುವನ್ನು ಆಕೆ ಎರಡೂ ಕೈಗಳಿಂದ ಎತ್ತಿಕೊಳ್ಳುವುದರಲ್ಲಿ ಇದ್ದಾಳೆ(ಚಿತ್ರ2). ಒಂಟಿ ಕಾಲಿನ ಮೇಲೆ ಓರಣವಾಗಿ ನಿಂತ ತಾಯಿಯ ತೊಡೆಯ ನೇಲೆ ಸುಖಾಸೀನನಾದ ಮಗು, ತಾಯೊಡನೆ ತೊದಲು ಮಾತಾಡುತ್ತಿರುವಂತೆ ರೂಪಿಸಿದ ಮೋಹಕವಾಗಿದೆ (ಚಿತ್ರ3). ಕನ್ನಡಿಯಲ್ಲಿ ತನ್ನ ರೂಪ ನೋಡಿಕೊಳ್ಳುತ್ತಿರುವ ಬೇಲೂರಿನ ಶಿಲಾಬಾಲಿಕೆ ವಿಶ್ವವಿಖ್ಯಾತಿ ಪಡೆದರೂ ತೇರಿನ ಚಿತ್ರಪಟ್ಟಿಕೆಯ ಅಲಂಕಾರ ಪ್ರಿಯೆ, ವೀಕ್ಷಕರೇ ಇಲ್ಲದೇ ಪೇಚಾಡುತ್ತಿದ್ದಾಳೆ!(ಚಿತ್ರ4). ಮೊಳಕಾಲು ಉದ್ದದ ಜಡೆ ಹೆಣೆದುಕೊಂಡು, ಮೈತುಂಬ ಆಭರಣ ಧರಿಸಿ, ಎಡಗೈಯಲ್ಲಿ ವರ್ತುಲಾಕಾರದ ಕನ್ನಡಿ ಹಿಡಿದು, ಬಲಗೈಯಿಂದ ಒಬ್ಬಾಕೆ ಕುಂಕುಮ ಇಟ್ಟುಕೊಳ್ಳುತ್ತಿದ್ದಾಳೆ (ಚಿತ್ರ5). ಇಂಥದೇ ಇನ್ನೊಂದು ಚಿತ್ರದಲ್ಲಿ ಮಹಿಳೆ, ನರೆಕೂದಲೊಂದರ ಹುಡುಕಾಟದಲ್ಲಿ ಇದ್ದಂತಿದೆ.

ಮಹಿಳೆಯೋರ್ವಳು ಪಾತ್ರೆ ಬೆಳಗುತ್ತಿರುವಾಗ ಅವಳ ಗೆಣೆಯನು ಕೀಟಲೆಯಲ್ಲಿ ತೊಡಗಿದ್ದಾನೆ! (ಚಿತ್ರ6). ಇನ್ನೊಂದು ಚಿತ್ರದಲ್ಲಿ ಗಡಿಗೆ ತುಂಬ ಮೊಸರನ್ನು ಕಡೆಯುತ್ತ ಮೈಮರೆತವಳನ್ನು ಕೊರೆಯಲಾಗಿದೆ (ಚಿತ್ರ7). ಮೈ-ಕೈ ತುಂಬಿಕೊಂಡ ಯುವತಿಯೊಬ್ಬಳು ಎಡಗೈ ಬೆರಳ ಮೇಲೆ ನಿಂತ ಗಿಳಿಯೊಡನೆ ಮಾತನಾಡುತ್ತಿದ್ದಾಳೆ(ಚಿತ್ರ8). ಬಿಗಿಯಾದ ಕಚ್ಚೆತೊಟ್ಟು ಎಡಗೈಯಿಂದ ನೀರಿನ ಹೂಜಿ ಇಳಿಬಿಟ್ಟು, ಹಕ್ಕಿಹಿಡುಕ (ಬೇಟೆಗಾರ)ನು ಇದಾಗಲೆ ತನ್ನದಾಗಿಸಿದ ಹಕ್ಕಿ ಜೋಡಿಯನ್ನು ಬಲಗೈ ತೋಳತೆಕ್ಕೆಯ ನೆರೆಯಲ್ಲಿಟ್ಟು ವೃಕ್ಷದ ಪೊಟರೆಯಲ್ಲಿದ್ದ ಮರಿ ಹಕ್ಕಿಗಳತ್ತ ಕಣ್ಣಲ್ಲಿ ಕಣ್ಣಿಟ್ಟು ನೋಡುವ ಭಂಗಿ ಮನೋಹರವಾಗಿದೆ. ಅಚ್ಚಕಟ್ಟಾಗಿ ಕಿರಿಬಟ್ಟೆ, ರುಮಾಲು ಧರಿಸಿದ ಪ್ರಾಣಿಪ್ರೇಮಿ, ತಾನು ಸಾಕಿದ ಹಾವನ್ನು ಮಂತ್ರಮುಗ್ಧವಾಗಿಸಿ ಮುದ್ದಿಸುತ್ತಿರುವ ದೃಶ್ಯ ಅಪೂರ್ವವಾಗಿದೆ (ಚಿತ್ರ9). ಇನ್ನೊಂದು ಚಿತ್ರದಲ್ಲಿ ಹನುಮತ್ ಆಸನದಲ್ಲಿದ್ದ ಹಾವಾಡಿಗ, ಓರಣವಾಗಿ ರುಮಾಲು ಕಟ್ಟಿಕೊಂಡು ಪುಂಗಿಯೂದುತ್ತ ಹಾವನ್ನು ಬರಮಾಡಿಕೊಳ್ಳುತ್ತಿದ್ದಾನೆ(ಚಿತ್ರ10). ವಾದ್ಯ ಬಾರಿಸುವ ಬಜಂತ್ರಿಗಳು, ಮುಹರಿ ನುಡಿಸುವವ, ಒಬ್ಬರೊಬ್ಬರ ನುಡಿಸುವಿಕೆ ಮೆಚ್ಚಿಕೊಂಡವರಂತೆ ಕೊರೆಯಲ್ಪಟ್ಟರೆ(ಚಿತ್ರ11), ಮುಖವೀಣೆ, ಡೋಲು ಬಾರಿಸುವವರೂ ಕಾಣಿಸಿಕೊಂಡಿದ್ದಾರೆ. ಈ ಮೈಮರೆತ ಕಲಾವಿದರ ಹಿಮ್ಮೇಳಕ್ಕೆ ತಾನು ನರ್ತಿಸುವದು ಹೇಗೆ? ಎಂದು ಅರಿಯದ ಯುವತಿ ತಬ್ಬಿಬ್ಬಾಗಿ ನಿಂತುಬಿಟ್ಟಿದ್ದಾಳೆ!(ಚಿತ್ರ12)

ಈ ಕಾಷ್ಠಶಿಲ್ಪದಲ್ಲಿ ಬಹಳಷ್ಟು ಮಿಥುನ ಚಿತ್ರಗಳನ್ನು ಗುರುತಿಸಬಹುದು. ಶೃಂಗಾರಕಲೆಯಲ್ಲಿ ನಮ್ಮ ಪೂರ್ವಜರ ಸಾಧನೆಯನ್ನು ಅವು ಸಾರುತ್ತವೆ. ಒಂದು ಚಿತ್ರದಲ್ಲಿ ಕುಲಾವಿ ಧರಿಸಿ ಮೆತ್ತಗಿನ ದಿಂಬುಗಳಿಗೆ ಆತು ಕುಳಿತವ, ಪ್ರೇಮಿಯ ಆಗಮನದ ನಿರೀಕ್ಷೆಯಲ್ಲಿರುವ ಹರಯದ ಹೆಣ್ಣೊಬ್ಬಳು ಇದ್ದಾರೆ! ಇನ್ನೊಂದರಲ್ಲಿ ತರುಣಿಯೊಬ್ಬಳು ಪಾತ್ರೆಯಲ್ಲಿಯ ಮೋದಕಗಳನ್ನು ಯುವಕನಿಗೆ ನೀಡುತ್ತಿದ್ದಾಳೆ. ಇನ್ನೊಂದು ಚಿತ್ರದಲ್ಲಿ ಮಂಚದ ಮೇಲೆ ನಾಚಿಕೆಯಿಂದ ಮುದುಡಿ ಕುಳಿತಾಕೆಯ ವಶೀಕರಣದಲ್ಲಿ ರಸಿಕನೋರ್ವನು ತೊಡಗಿದ್ದಾನೆ. ಮಗುದೊಂದು ದೃಶ್ಯದಲ್ಲಿ ಕಾಮಾತುರ ವ್ಯಕ್ತಿ, ಮದ್ಯದ ಬಟ್ಟಲು ಬರಿದು ಮಾಡುವುದರಲ್ಲಿದ್ದಾನೆ. ಮಿಥುನ ಚಿತ್ರಗಳ ವೈವಿಧ್ಯ ಎಷ್ಟಿದೆ ಎಂದರೆ ಈ ಕಲಾಪ್ರಕಾರದಲ್ಲಿ ಕರ್ನಾಟಕವು ಖಜುರಾಹೋವನ್ನು ಹಿಂದೆ ಹಾಕುತ್ತಿದೆಯೇ ಎನಿಸುವಷ್ಟು!

ಕಟ್ಟಡದ ಅಂಗವಾಗಿಯೇ ಬಳಸಿದ ಕೊರಡು ಚಿತ್ರಗಳನ್ನು ಹಲವಾರು ದೇವಾಲಯಗಳಲ್ಲಿ ಕಾಣಬಹುದಾಗಿದೆ. ಬೃಹದಾಕಾರದ ಕಂಬಗಳ ಮೇಲೆ ಜಂತಿ, ಮುಚ್ಚಿಗೆಗಳಲ್ಲಿ ಇವು ಹೆಚ್ಚಾಗಿ ಕಂಡುಬಂದರೂ ಕೆಲವೆಡೆ ಚೌಕಟ್ಟು ಹಾಕಿ ಅಲಂಕಾರ ಸಾಧನವಾಗಿಯೂ ಬಳಸಲಾಗಿದೆ. ಉತ್ತರಕನ್ನಡ ಜಿಲ್ಲೆಯ ಭಟಕಳ ಬಳಿಯ ಸೋಡಿಗದ್ದೆಯಲ್ಲಿ ಸತಿ ದೇವಸ್ಥಾನ ಒಂದು ಇದೆ. ಅಲ್ಲಿ ಹರಕೆ ಹೊತ್ತವರು ಕೊರಡಿನಲ್ಲಿ ಸ್ತ್ರೀ ವಿಗ್ರಹ ಕೊರೆಯಿಸಿ, ಬಣ್ಣ ಬಳಿದು ದೇವಿಗೆ ಅರ್ಪಿಸುವ ಪದ್ಧತಿ ಶತಮಾನಗಳಿಂದಲೂ

ನಡೆದು ಬಂದಿದೆ. ಈ ಗೊಂಬೆಗಳ ಸೀರೆ ಕುಪ್ಪಸ, ಅಲಂಕಾರಗಳು ಹಿಂದಿನಯುಗದ ಜನಸಾಮಾನ್ಯ ಹೆಂಗಳೆಯರವೇ ಆಗಿವೆ. ಗೋವಾದ ಪರ್ತಕಾಳಿ ಗೋಕರ್ಣ ಜೀವೋತ್ತಮ ಮಠದ ಹಿಂದಿನ ಕೆಲವು ವೃಂದಾವನಸ್ಥ ಗುರುಗಳ ಸಮಾಧಿಗಳ ಕೊಠಡಿಯ ಜಂತಿಗಳ ಮೇಲೆ ಹಲವಾರು ಭಾಗವತದ ಸನ್ನಿವೇಶಗಳನ್ನು ಕೊರೆಯಲಾಗಿದೆ. ತೆಂಗಿನಕಾಯಿ ಮಾರುವವ, ಸ್ಥಳೀಯ ವೇಷದಲ್ಲಿದ್ದರೆ, ಗೌಳಿಗನು ಕಂಬಳಿಕೊಪ್ಪೆ ಹೊದ್ದು ಬಿದಿರಿನಿಂದ ಕಟ್ಟಿದ ಕಾವಡಿಗಳಲ್ಲಿ ಹಾಲಿನ ಪಾತ್ರೆಗಳನ್ನು ಹೊತ್ತು ಹೊರಟಿರುವ. ಗೌಳಗಿತ್ತಿ ತಲೆಯ ಮೇಲೆ ಮೊಸರಿನ ಗಡಿಗೆಗಳನ್ನೂ ಹೊತ್ತಿದ್ದಾಳೆ. ಇವರಿಬ್ಬರ ಹಿಂದೆ ದನ-ಕರುಗಳ ಹಿಂಡು ಹೊರಟಿದೆ. ಆಳುಗಳು ಹೊತ್ತ ಮೇಣೆಯಲ್ಲಿ ಧನಿಕನೋರ್ವನು ಸುಖಾಸೀನನಾಗಿದ್ದಾನೆ. ಆತನ ಎದುರಿಗೆ ಪಂಜರವೊಂದರಲ್ಲಿ ಗಿಳಿಯೂ ಇದೆ. ಡೋಲು ಬಾರಿಸುವವರು ಎದುರು ಹೊರಟಿದ್ದಾರೆ. ಬಾಂದೋಡೆಯ ಮಹಾಲಕ್ಷ್ಮೀ ದೇವಾಲಯದ ಹೊರಗೋಡೆಯಲ್ಲಿ ಕೊರಡಿನ ಚಿತ್ರ-ಪಟ್ಟಿಕೆಗಳನ್ನು ಜೋಡಿಸಲಾಗಿದೆ. ಇವುಗಳಲ್ಲಿ ಭಕ್ತಾದಿಗಳು ಗಂಟೆ ಬಾರಿಸುತ್ತ ತಮ್ಮ ಇಷ್ಟದೇವತೆಗೆ ಮಂಗಳಾರತಿ ಬೆಳಗುವ ದೃಶ್ಯವಿದೆ. ಭಜನಾಮಂಡಳಿ ಹಾಡುತ್ತ ಹೊರಟ ಚಿತ್ರವಿದೆ. ವೇಲಿಂಗದ ಲಕ್ಷ್ಮಿನರಸಿಂಹ ದೇವುಳದ ಒಳಾಂಗಣದ ಕಂಬಗಳ ಮೇಲೆ, ಪೂಜೆಗೆ ಹೊರಟ ಹೆಂಗಸು, ಹಾಲು-ನೀರು ಹೊತ್ತ ಮಹಿಳೆಯರು ಕಾಣಿಸಿಕೊಂಡಿದ್ದಾರೆ. ಪರ್ತಕಾಳಿಮಠ, ಶಿರಾಲಿಯ ಚಿತ್ರಾಪುರಮಠ, ಶಿವಮೊಗ್ಗೆಯ ಶಿವಪ್ಪನಾಯಕ ವಸ್ತು ಸಂಗ್ರಹಾಲಯಗಳಲ್ಲಿ ಅನೇಕ ಅಪೂರ್ವ ಕೊರಡು ಚಿತ್ರಗಳಿವೆ. ಗೋವಾ ರಾಮನಾಥಿ ದೇವಾಲಯದ ಕೊರಡು ಚಿತ್ರಗಳಿಗೆ ರಬ್ಬಾದ ಬಣ್ಣ ಬಳಿಯಲಾಗಿದೆ. ಹಳೇಗೋವಾದ ಚರ್ಚುಗಳಲ್ಲಿ ಪಾದ್ರಿಗಳ ಹಾಗೂ ವಿಶೇಷ, ಭಕ್ತಾದಿಗಳ ಕೊರಡು ಚಿತ್ರಗಳಿದ್ದು ಅವುಗಳಿಗೆ ಬಣ್ಣ ಬಳಿಯಲಾಗಿದೆ.

ದೂರದ ಗ್ರಾಮಗಳಲ್ಲಿ ಅಲ್ಲಲ್ಲಿ ಕಂಡುಬರುವ ಹೆಚ್ಚಿನ ಚಿತ್ರಗಳಿಗೆ ಸರಿಯಾದ ಸಂರಕ್ಷಣೆ ಇಲ್ಲದೇ ಹುಳ-ಹುಪ್ಪಡಿಗಳಿಗೆ ಆಹುತಿಯಾಗುತ್ತಲಿವೆ. ಮನಸ್ಸಿ ಎಣ್ಣೆ, ಬಣ್ಣ ಬಳಿದು ಹಾಳುಗೆಡವಿದ ಚಿತ್ರಗಳಿಗೂ ಕೊರತೆ ಇಲ್ಲ. ಈ ಅಳಿದುಳಿದವುಗಳೂ ಸಂಪೂರ್ಣ ನಾಶಹೊಂದುವ ಪೂರ್ವದಲ್ಲಿಯೇ ಅವನ್ನು ಸಂರಕ್ಷಿಸಿ, ಚಿತ್ರೀಕರಿಸಿ, ಅಭ್ಯಸಿಸುವ ಪ್ರಯತ್ನವನ್ನು ಚರಿತ್ರಾಸಕ್ತರು ಕೈಕೊಳ್ಳುವದು ಅತಿ ಮುಖ್ಯವಾಗಿದೆ.

**ಕೊರಡು ಚಿತ್ರಗಳ ಚಾರಿತ್ರಿಕತೆ :** ಈ ಕೊರಡು ಚಿತ್ರಗಳಲ್ಲಿ ಒಂದರಿಂದ ಐದು ಶತಮಾನಗಳಷ್ಟು ಹಿಂದಿನವು ಇರಲು ಸಾಧ್ಯ. ದೇವಾಲಯದ ಆಡಳಿತ ವರ್ಗದ ಅಧೀನದಲ್ಲಿದ್ದ ಕಾಗದ ಪತ್ರಗಳ ಕಡತಗಳ ಪರಿಶೀಲನೆಯಿಂದ, ಇವುಗಳ ಪ್ರಾಚೀನತೆ ನಿರ್ಧರಿಸಲು ಸಾಧ್ಯವಿದೆ. ಜೊತೆಗೆ ಆಯಾ ಕಲಾಕಾರರಿಗೆ ನೀಡಿದ ಧನ-ಧಾನ್ಯಗಳ ವಿವರಗಳು, ಕೊಡಮಾಡಿದ ಗೌರವ ಪುರಸ್ಕಾರಗಳು ಇವುಗಳ ಕುರಿತು ದೇವಾಲಯಗಳಲ್ಲಿ ದಾಖಲೆಗಳಿರುತ್ತವೆ. ದಾಖಲೆಗಳ ಅಭಾವದಲ್ಲಿ, ವೈಜ್ಞಾನಿಕ ರೀತಿಯಲ್ಲಿ ಕಾಲಮಾನವನ್ನು ನಿರ್ಧರಿಸಬಹುದು. ಬಳಸಿದ ದಿಂಡುಗಳ ಜಾತಿ, ವಯೋಮಾನಗಳನ್ನು ಅವುಗಳ ಒಳವರ್ತುಲಗಳ (Concentric growth circle)ಗಳಿಂದ ನಿರ್ಧರಿಸಲು ಸಾಧ್ಯವಿದೆ. ಈ ವೈಜ್ಞಾನಿಕ ಹಿನ್ನೆಲೆಯಲ್ಲಿ ಕಾಷ್ಠಶಿಲ್ಪಗಳು ಇತಿಹಾಸದ ಅಧ್ಯಯನಕ್ಕೆ ಹೊಸ ಆಯಾಮ ನೀಡಬಲ್ಲವು.

ಕಲೆಯ ಬಗ್ಗೆ ಏನೂ ಗೊತ್ತಿಲ್ಲದ ಆಳುಗಳಿಂದ ಈ ಕೊರಡು ಚಿತ್ರಗಳಿಗೆ ಎಣ್ಣೆ-ಬಣ್ಣಗಳನ್ನು ಪ್ರತಿವರ್ಷ ಲೇಪಿಸುತ್ತಿರುವುದರಿಂದ ಅವು ತಮ್ಮ ಮೂಲ ಸ್ವರೂಪವನ್ನು ಅಂದಚಂದವನ್ನು ಕಳೆದುಕೊಂಡಿವೆ. ಪುರಾತನ ಕಟ್ಟಡಗಳ ಕಪ್ಪಿಟ್ಟ ಹಾವಸೆ, ಬೂಷ್ಟು (ಬೂರಸು) ಹೋಗಲಾಡಿಸುವಂತೆ, ಈ ಚಿತ್ರಗಳನ್ನು ಸಹ, ತಜ್ಞರಿಂದ ಶುಭ್ರಗೊಳಿಸಿ, ಅವುಗಳ ಮೂಲ ಜೀವಕಳೆಯನ್ನು ಪುನಃ ಪಡೆಯಬಹುದು. ಈ ಪ್ರಯತ್ನ, ಇತಿಹಾಸ ಅಧ್ಯಯನಕ್ಕೆ ಹೊಸ ಆಯಾಮ/ ಆಕರ ನೀಡುವ ಭರವಸೆ ಇದೆ.



ರಥಶಿಲ್ಪದಲ್ಲಿ ಬೇಡ

9. ಹಾವಿನೊಂದಿಗೆ ಸರಸ





4. ಅಲಂಕಾರದಲ್ಲಿ ಮೈಮರೆತಾಗ





5. ಬಟ್ಟೆಟ್ಟುಕೊಳ್ಳುವ ಕಾಷ್ಠ ಶಿಲ್ಪ

7. ಒರಳಿನ ಗೃಮೆ

8. ಗಿಳಿಯೊಂದಿಗೆ ಗೃಹಿಣಿ





6. ಪಾತ್ರೆ ತೊಳೆಯುಪುದು



10. ಪುಂಗಿಯೂದುವ ಹಾವಾಡಿಗ



12.ಮೈಮರೆತಾಕೆ



14.ವಿವೇಕ ಬೋಧಿಸುತ್ತಿರುವುದು




2. ತಾಯ ಕೈಯಲ್ಲಿ ಜೋಕಾಲಿ



3. ಸೊಂಟಕ್ಕೇರಿದವರು



11. ಮೃದಂಗವಾದನದಲ್ಲಿ



13. ಊದು ವಾದ್ಯದೊಂದಿಗೆ



1. ನಿಂತುಕೊಂಡು ಸ್ವಾಭಾವಿಕ ಹರಿಗೆ

# ೧೨. ಪ್ರಾಚೀನರ ಪರಿಸರ ಪ್ರೇಮ

ಭರದಿಂದ ಕಡಿಮೆಯಾಗುತ್ತಿರುವ ವೃಕ್ಷರಾಜಿ, ಹಸಿರನ್ನು ಕಳೆದುಕೊಂಡು ಬೋಳು ಬೋಳಾಗುತ್ತಿರುವ ಪರಿಸರ ಕಂಡಾಗಲೆಲ್ಲ ನನ್ನ ಮನಸ್ಸು ಹಿಂದೆ ಓಡುತ್ತದೆ. ಶತಕಗಳ ಹಿಂದೆ ಸಸ್ಯ ಶ್ಯಾಮಲವಾಗಿದ್ದ ನಾಡಿನ ಚಿತ್ರ ಕಣ್ಣಿಗೆ ಕಟ್ಟುತ್ತದೆ. ನಮ್ಮ ಪೂರ್ವಜರ ನಿಸರ್ಗ ಪ್ರೀತಿ, ವೃಕ್ಷಪ್ರೀತಿಗಳನ್ನು ಗಳಿಗೆ ಗಳಿಗೆಗೆ ನೆನಪು ಮಾಡಿಕೊಳ್ಳುತ್ತೇನೆ. ಬನವಾಸಿ ನಾಡು ಹಿಂದಕ್ಕೆ ರಮಣೀಯ ಬೀಡಾಗಿತ್ತು. "ಅರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂಬ ಆದಿಕವಿಯ ಉದ್ಗಾರವನ್ನೂ ಮರಿದುಂಬಿಯಾಗಿಯೋ ಕೋಗಿಲೆಯಾಗೋ ಬನವಾಸಿ ನಾಡಿನಲ್ಲಿ ಹುಟ್ಟಬೇಕೆಂದಿದ್ದ ಆತನ ಮನೀಷೆಯನ್ನು ಕನ್ನಡಿಗರೆಲ್ಲ ಬಲ್ಲರು. ಬಗೆಬಗೆಯ ವೃಕ್ಷಗಳಿಂದ ಕೂಡಿ ಆ ನಾಡು ಭೂಲೋಕದ ನಂದನವಾಗಿದ್ದುದೇ ಅದಕ್ಕೆ ಕಾರಣವಾಗಿತ್ತು. ನಂತರದ ಶತಕಗಳಲ್ಲೂ ಬನವಾಸಿ ನಾಡು ತನ್ನ ರಮಣೀಯತೆಯನ್ನು ಕಾಯ್ದುಕೊಂಡು ಬಂದಿತು.

ಕ್ರಿ.ಶ. ೧೧೪೫ನೇ ವರ್ಷದ ಒಂದು ಶಾಸನವು ಬನವಾಸಿ ದೇಶದ ಜಿಡುವಳಿಗೆಯನ್ನು ಹೀಗೆ ಬಣ್ಣಿಸುತ್ತದೆ.

ಆ ನಾಡೊಳು ಊರೊಳು ಓಳೋಳಿಯಿಂ ಬೆಳೆದ ಕಳಮೆಯ ಕೆಯ್ವೊಲಗಳಿಂ, ಅಲ್ಲಲ್ಲಿ ಪರಿವ ಪರಿಕಾಲ್ಗಳಿಂ ಪೂಗ, ಪುನ್ನಾಗ, ನಾಗ, ವಕುಳ, ಚಂಪಕ, ಅವಿಚಕಳ, ಕೇತಕಿ, ಸುಗನ್ಧ, ಕಣವೀರ, ಸೇವಂತಿ, ಕಾಸಾರ ಆಭಾಭರಿತ ಮೆನಿಪ ಪುಷ್ಪವಾಟಂಗಳಿಂ ಕೌಂಗು, ತೆಂಗು, ಕದಳೀವನ, ಸಾಮ್ರ, ಜಂಬೂದ್ರುಮಾದಿ ನಂದನಂಗಳಿಂ ನಾಗವಲ್ಲೀ ವನಂಗಳಿಂ, ಒಸರ್ವ ತನಿರಸದ ಪುಂಡ್ರೇಕ್ಷುವಾಟಂಗಳಿಂ, ಕಂಪನುಗುಳ್ವ ಕಮಳ ನೀಳೋತ್ಪಳವ ನಾವಳಿಯಿಂದ, ಅತೀವ ರಮ್ಯಂ ಎನಿಸಿ ಯೋಗಿಗಳ್ಗಂ ಭೋಗಾಸಕ್ತಿಯನಾ ಗಿಸುತ್ತಿರ್ಪುದು॥

ಹೀಗೆ ಯೋಗಿಗಳನ್ನೂ ಇಂದ್ರಿಯ ಸುಖಗಳತ್ತ ಮನಸ್ಸು ಹರಿಸುವಂತೆ ಮಾಡುವ ಶಕ್ತಿ ಬನವಾಸಿಯ ಸುತ್ತಲ ನಿಸರ್ಗ ಸೌಂದರ್ಯದಲ್ಲಿತ್ತು.

ಇದು ಕೇವಲ ಪ್ರಕೃತಿ ಸೌಂದರ್ಯಕ್ಕೆ ಸೀಮಿತವಾಗಿರಲಿಲ್ಲ. ಆಗಿನವರು ಹೆಚ್ಚಿನ ಶ್ರಮವಹಿಸಿ ಅಚ್ಚುಕಟ್ಟಾಗಿ ಯೋಜಿಸಿ ಬೆಳೆಸಿದ ಗಿಡಮರಗಳಿಂದ, ಹೊಲಗಳಿಂದ ಆ ನಾಡು ಒಪ್ಪುತ್ತಿತ್ತು. ಈಗ ಹೇಳಿದ ಶಾಸನ ಅಂದಿನವರ ನಿಸರ್ಗ ಪ್ರಿಯತೆಯೊಂದಿಗೆ ಮಾನವನಿರ್ಮಿತ ಹೊಲ, ಬನಸಿರಿಯ ಕಲ್ಪನೆಯನ್ನೂ ಮಾಡಿಕೊಂಡುವಂತಿದೆ.

ನಮ್ಮ ಸಮೀಪದ ಹುಬ್ಬಳ್ಳಿಯನ್ನೇ ತೆಗೆದುಕೊಳ್ಳೋಣ. ೧೨ನೇ ಶತಮಾನದಲ್ಲಿ ಅದನ್ನು ಎಲೆಯ ಪೂರ್ವಳ್ಳಿ ಎಂದು ಕರೆಯಲಾಗಿದೆ. ಸುಂದರವಾದ ಹೆಸರು. ಕದಂಬರ ಶಾಸನವೊಂದರಲ್ಲಿ ಈ ಎಲೆಯ ಪೂರ್ವಳ್ಳಿಯ ವರ್ಣನೆ ಬರುತ್ತದೆ. ಬಾಳೆಯ ತೋಟಗಳಿಂದ, ವೀಳ್ಯದೆಲೆಯ ಬಳ್ಳಿಗಳಿಂದ, ಅಡಿಕೆಯ ತೋಟಗಳಿಂದ, ತೆಂಗಿನ ಮರಗಳಿಂದ, ಕಬ್ಬಿನ ಗದ್ದೆಗಳಿಂದ ಆ ನಾಡಿನಲ್ಲಿ ವಸಂತಋತು ನಿರಂತರವಾಗಿ ವಾಸವಾಗಿದ್ದಂತೆ ತೋರುತ್ತಿತ್ತು. ಅಲ್ಲಿಯ ತೋಟದಲ್ಲಿ ಅಡಿಕೆಯ ಮರಗಳೆಲ್ಲ ಫಲಭಾರದಿಂದ ಬಗ್ಗಿದ್ದು, ವೀಳ್ಯದೆಲೆಯ ಬಳ್ಳಿಗಳೆಲ್ಲ ದಟ್ಟವಾಗಿ ಬೆಳೆದು, ತೋಟದಲ್ಲಿ ಕಗ್ಗತ್ತಲೆ ಕವಿದಂತೆ ತೋರುತ್ತಿತ್ತು. ಆ ಕತ್ತಲೆಯಲ್ಲಿ ದಾರಿ ಹೋಕನೊಬ್ಬ ತಪ್ಪಿಸಿಕೊಂಡು ದಾರಿಗಾಣದೇ ಕೂಗಿದ. ತೋಟಿಗನು ಬಂದು ಗೊಣಗುತ್ತ ಬಳ್ಳಿಯ ಎಲೆಗಳನ್ನೆಲ್ಲ ಕತ್ತರಿಸಿ ದಾರಿಹೋಕನನ್ನು ಬಿಡಿಸಬೇಕಾಯಿತು ಎಂದು ಶಾಸನವು ಬಣ್ಣಿಸುತ್ತದೆ[೮] ! ಅಂಥ ವನನಿಬಿಡವಾಗಿದ್ದ ಹುಬ್ಬಳ್ಳಿ ಇಂದು ಕೇವಲ ಜನನಿಬಿಡವಾಗಿದೆ. ಗಿಡ ಮರಗಳು ಕಾಣಲಿಕ್ಕೇ ಅಪರೂಪವಾಗಿವೆ. ವನರಾಜಿ ನೋಡಬೇಕಾದರೆ ಈಗ ಟ್ಯಾಕ್ಸಿ ಮಾಡಿಕೊಂಡು ದೂರದ ದಾಂಡೇಲಿಗೇ ಹೋಗಬೇಕು!

ಅಂದಿನ ದಿನಗಳಲ್ಲಿ ತೀರ ಚಿಕ್ಕ ಊರಿಗೂ ಉದ್ಯಾನವಿರುತ್ತಿತ್ತು. ಊರ ಹೊರಗೆ ಕೃತಕ ವನಗಳಿರುತ್ತಿದ್ದವು. ಜನರೆಲ್ಲ ಬಿಡುವಿನ ಸಮಯವನ್ನು ವನಗಳಲ್ಲಿ ಕಳೆಯುತ್ತಿದ್ದರು. ಅಂದಿನ ಪ್ರಸಿದ್ಧ ವಿದ್ಯಾಸಂಸ್ಥೆಗಳಿದ್ದ ನಾಗಾಯಿ, ಬೇಲೂರು, ಇಟ್ಟಿಗೆಗಳಂತಹ ವಿದ್ಯಾಕ್ಷೇತ್ರಗಳಲ್ಲಿ ದೊಡ್ಡ ಹೂದೋಟಗಳಿರುತ್ತಿದ್ದವು. ದೇವರ ಪೂಜೆಗೆ ಹೂವೊದಗಿಸುವುದರ ಜೊತೆಗೆ, ಆಯಾ ವಿದ್ಯಾಸಂಸ್ಥೆಯ ವಾತಾವರಣವನ್ನು ಅವು ಆಹ್ಲಾದಕರವನ್ನಾಗಿ ಮಾಡುತ್ತಿದ್ದವು.

ದೇವರಿಗೆ ತೋಟಗಳನ್ನು ಬಿಡುವುದು ಅಥವಾ ಮರಗಳನ್ನು ಬಿಡುವುದು ತೀರ ಸಾಮಾನ್ಯವಾಗಿದ್ದು ಬನದ ಸೇವೆ ಅನಿಸಿಕೊಳ್ಳುತ್ತಿತ್ತು. ಜೊತೆಗೆ ಗಿಡಮರಗಳನ್ನು ನೆಡುವುದು ಪರೋಪಕಾರಿ ಕೆಲಸವೆನ್ನಿಸಿಕೊಳ್ಳುತ್ತಿತ್ತು. ೧೨ನೆಯ ಶತಮಾನದ ಶಾಸನವೊಂದು ಗಿಡಮರಗಳನ್ನು ನೆಡುವುದನ್ನೇ ವ್ರತವನ್ನಾಗಿ ಮಾಡಿಕೊಂಡು ಸಾವಿರಾರು ಜನರಿಗೆ ಒಳಿತು ಮಾಡಿದಂತಹ ಒಬ್ಬ ಮಹಿಳೆಯ ಪರೋಪಕಾರವನ್ನು ಬಣ್ಣಿಸುತ್ತದೆ. ಕ್ರಿ. ಶ. ೧೧೯೦ರಲ್ಲಿ ಯಾದವ ಭಿಲ್ಲಮನ ಅಧಿಕಾರಿ ಬೊಪ್ಪಣನಾಯಕನ ಹೆಂಡತಿ ಸಿರಿಯವೆ ಎಂಬಾಕೆ ಹಿರೇಬೇವಿನೂರಿನಲ್ಲಿ 'ಕ್ಷಿತಿರುಹ ನೋಂಪಿಯನ್ನು ಕೈಕೊಂಡಳು. ಕ್ಷಿತಿರುಹವೆಂದರೆ ಮರ. ಮರಗಳನ್ನು ನೆಡುವುದನ್ನೇ ನೋಂಪಿಯ ತೆರನಾಗಿ ಕೈಕೊಂಡು ಆಕೆ ಮಾವು, ನೇರಳೆ, ಹಲಸು, ಹುಣಿಸೆ, ಕಿತ್ತಳೆ, ಖರ್ಜೂರ, ತೆಂಗು ಮೊದಲಾದ ಬಗೆಬಗೆಯ ಗಿಡಮರಗಳನ್ನು ನಟ್ಟು ನಂದನವನವೊಂದನ್ನು ಮಾಡಿಸಿದಳು. ನಂತರ ಸುಂದರವಾದ ತೋಟವೊಂದು ರೂಪಿತಗೊಂಡಾಗ, ಅದನ್ನು ಧರ್ಮಸಂತೆಯನ್ನಾಗಿ ಪರಿವರ್ತಿಸಿ ದಾನವಾಗಿತ್ತಳು. ಈ ಧರ್ಮಸಂತೆಯಲ್ಲಿ ಮಾರಾಟಕರ, ಸುಂಕಗಳು ಯಾವುದೂ ಇಲ್ಲದೇ ಕಾಳಿನಿಂದ ಮುತ್ತಿನವರೆಗೆ ಹಣ್ಣಿನಿಂದ ಆನೆಯವರೆಗೆ ಬಗೆಬಗಯ ವಸ್ತು-ಪ್ರಾಣಿಗಳ ಮಾರಾಟ ನಡೆಯುತ್ತಿತ್ತು. ಇಷ್ಟೇ ಸಂತೆಗೆ ಬಂದವರು ಮತ್ತು ಧರ್ಮಸಂತೆಯ ಆಡಳಿತಕಾರರು ಗಿಡ ಮರಗಳನ್ನು ಸರಿಯಾಗಿ ಸಂರಕ್ಷಿಸಿಕೊಂಡು ಹೋಗಬೇಕಾಗಿತ್ತು.[೯]

ಪ್ರಾಚೀನರ ವೃಕ್ಷಪ್ರೇಮವನ್ನು ರೂಪಿಸುವ ಚಿತ್ರಗಳು ಶ್ರವಣಬೆಳಗೊಳದ ಜೈನಮಠದಲ್ಲಿವೆ (ಚಿತ್ರ1). ಮರಕಡಿಯುವ ದೃಶ್ಯ ಒಂದೆಡೆ ಚಿತ್ರಿತವಾಗಿದ್ದರೆ, ಹಣ್ಣುಗಳನ್ನು ಕೀಳಲು ಜನ ಹತ್ತಿದ ಮರವನ್ನೆ ಕಡಿಯುವುದನ್ನು ಇನ್ನೊಂದೆಡೆ ರೂಪಿಸಲಾಗಿದೆ (ಚಿತ್ರಗಳು 3,4).

ವೃಕ್ಷನೋಂಪಿ, ವೃಕ್ಷ ನಮನಗಳು ಚಿತ್ರದಲ್ಲಿ ಕಾಣಬಹುದು. ಬಾಳೆ ಗಿಡ ಪ್ರೀತಿಸುವ ಎಳೆ ಯುವತಿಯೂ ಇನ್ನೊಂದು ಚಿತ್ರದಲ್ಲಿ ಕಾಣಿಸಿಕೊಂಡಿದ್ದಾಳೆ (ಚಿತ್ರ 2).

ನಾವು ಸಣ್ಣರಿದ್ದಾಗ ಪಾಠವೊಂದರಲ್ಲಿ ಬಾದಾಮಿಯ ಸೈನಿಕನೊಬ್ಬ ಯುದ್ಧದಲ್ಲಿ ಕಾಲು ಕಳೆದುಕೊಂಡ ಕತೆ ಓದಿದ್ದೆವು. ಅದರಿಂದಾಗ ಆತ ಬಾಳಿನಲ್ಲಿ ತುಂಬ ನಿರಾಶೆಯನ್ನು ಅನುಭವಿಸಿದ. ಕೊನೆಗೆ ಗಿಡಮರಗಳನ್ನು ನಡುವ ಸಲಹೆಯನ್ನು ಯಾರಿಂದಲೋ ಪಡೆದು ಬಾದಾಮಿಯ ಹೆದ್ದಾರಿಯ ಅಕ್ಕಪಕ್ಕಕ್ಕೆ ಗಿಡಗಳನ್ನು ನಡುತ್ತಲೇ ಹೋದನಂತೆ. ಇಂದಿಗೂ ಆ ಮರಗಳು ಆ ಸೈನಿಕನ ಪರೋಪಕಾರದ ಮಾದರಿಯಾಗಿ ದಾರಿಹೋಕರಿಗೆ ದಟ್ಟ ನೆರಳನ್ನು ನೀಡುತ್ತಿದೆ. ಇದು ಕತೆಯಾಗಿರದೇ ನಮ್ಮ ಈ ಪರಪಂರೆಯ ನಿದರ್ಶನವಾಗಿದೆ.

ಈ ಪರಂಪರೆಯನ್ನು ಸಾಲುಮರದ ತಿಮ್ಮಕ್ಕ ಈಗಲೂ ಕೈಕೊಂಡು ಅಸಂಖ್ಯರ ಕೃತಜ್ಞತೆಗೆ ಪಾತ್ರಳಾಗಿದ್ದಾಳೆ.

೧೮ನೇ ಶತಮಾನದಲ್ಲಿ ಕರ್ನಾಟಕವನ್ನು ಸಂದರ್ಶಿಸಿದ ಪ್ರವಾಸಿ ಇಬ್ನಬತೂತನು ಈ ಪ್ರದೇಶದಲ್ಲಿ ಪ್ರತಿಯೊಬ್ಬರ ಮನೆಯೆದುರೂ ಪುಟ್ಟ ತೋಟವಿದ್ದುದನ್ನು ಉಲ್ಲೇಖಿಸಿ ಹೊನ್ನಾವರದಿಂದ ಮಂಗಳೂರಿಗೆ ಹೋಗುವ ಹೆದ್ದಾರಿಯ ಅಕ್ಕಪಕ್ಕದಲ್ಲಿ ಮರಗಳ ತಣ್ಣೆಳಲು ಇತ್ತೆಂದು ಬರೆದಿದ್ದಾನೆ. ಇಂಥ ಮರಗಳನ್ನು ನಡಿಸುವದು ಆಡಳಿತಗಾರರ ಹೊಣೆಯಾಗಿತ್ತಲ್ಲದೇ ಸಾರ್ವಜನಿಕರದೂ ಆಗಿತ್ತು. ಎನ್ನುವ ಮಾತು ಇಲ್ಲಿ ಮುಖ್ಯ. ಈ ರೀತಿ ಗಿಡಮರಗಳನ್ನು ಸಾರ್ವಜನಿಕರಿಗಾಗಿ ನಡುವ ಪದ್ಧತಿ ೧೯ನೇ ಶತಮಾನದ ತನಕವೂ ನಡೆದು ಬಂದಿತ್ತು ಎಂಬುದು ಗಮನಾರ್ಹ. ಪೆಂಡಾರಿಗಳನ್ನು ನಿರ್ಮೂಲನಗೊಳಿಸಿದ ಕರ್ನಲ್ ಸ್ಲೀಮನ್ನನು ತನ್ನ Rambles and Recollections ಎನ್ನುವ ಪುಸ್ತಕದಲ್ಲಿ ಸಮಕಾಲೀನ ಭಾರತೀಯ ಪದ್ಧತಿಗಳನ್ನು ಮನಸಾರೆ ಮೆಚ್ಚಿಕೊಂಡು ಬರೆದಿದ್ದಾನೆ. ಅವುಗಳಲ್ಲಿ ಗಿಡಮರಗಳನ್ನು ನಡುವದೂ ಒಂದು. "ನಾವು ಆಗಾಗ ಉರಿಬಿಸಿಲಿನಲ್ಲಿ ಪ್ರವಾಸಕ್ಕೆ ಹೊರಡುತ್ತಿದ್ದೆವು. ಅಲ್ಲಲ್ಲಿ ಗಿಡಮರಗಳು ದಟ್ಟವಾಗಿ ಬೆಳೆದ ತಾಣದಲ್ಲಿ ಬಾವಿಯಿದ್ದಡೆ ಡೇರೆಯನ್ನು ಹಾಕುತ್ತಿದ್ದೆವು.....

ಈ ಬಾವಿಯ ತಣ್ಣೀರು ಈ ತಣ್ಣೆಳಲು, ಈ ರಸಭರಿತ ಹಣ್ಣುಗಳು, ಇವನ್ನು ಒದಗಿಸುವರು ಯಾರು ? ಇವೆಲ್ಲ ಭಾರತೀಯರ ಲೋಕಸಂಗ್ರಹ ವೃತ್ತಿಯ ಫಲ (Public spirit of the Hindus) ಸೋತ, ದಣಿದ ಪ್ರವಾಸಿಕರಿಗೆ ಯಾವ ಫಲಾಪೇಕ್ಷೆಯಿಲ್ಲದೇ ನೆಳಲು, ನೀರು ಹಣ್ಣುಗಳನ್ನು ಒದಗಿಸುವ ಭಾರತೀಯರ ಈ ಲೋಕಸಂಗ್ರಹ ವೃತ್ತಿಯ ಬಗ್ಗೆ ಪಟ್ಟಣಗಳಲ್ಲಿರುವ ನನ್ನ ಬಾಂಧವರಿಗೆ ಹೇಗೆ ತಾನೇ ತಿಳಿಯಬೇಕು?" ಎಂದು ಆತ ಉದ್ಗರಿಸಿದ್ದಾನೆ.

ಕೆರೆ ಬಾವಿ ತೋಡಿಸುವುದು, ಅರವಟ್ಟಿಗೆಗಳನ್ನು ನಿಲ್ಲಿಸುವುದು, ಗಿಡ ಮರಗಳನ್ನು ನಡುವುದು, ಪುಣ್ಯದ ಕೆಲಸವೆಂಬ ಭಾವನೆ ನಮ್ಮ ಪೂರ್ವಜರಲ್ಲಿ ಬಲವಾಗಿತ್ತು. ಆದರೆ ಈ

ಕಾರ್ಯಗಳಿಂದ ಉಪಯೋಗ ಪಡೆಯುವವರು ಸಾರ್ವಜನಿಕರಷ್ಟೇ? ಈ ಅನುಕೂಲ ಪಡೆದ ತಾವು ಹೂ, ಕಾಯಿ, ಹಣ್ಣುಗಳನ್ನು ಕಾಯ್ದುಕೊಂಡು ಹೋಗುವುದು ಕರ್ತವ್ಯವೆಂದು ಇತರರೂ ಮನಗಂಡಿದ್ದರು.

ವ್ಯವಸ್ಥಿತವಾಗಿ ಗಿಡ ಮರ ನಡುವುದು, ಅವುಗಳ ಆರೈಕೆಮಾಡುವುದು ಇದೇ ದೊಡ್ಡ ವಿಜ್ಞಾನವಾಗಿತ್ತು. ಅದನ್ನು ವೃಕ್ಷಾಯುರ್ವೇದವೆಂದು ಕರೆಯುತ್ತಿದ್ದರು. ಕ್ರಿ.ಶ. ೧೦೨೫ರಲ್ಲಿ ಚಾಲುಕ್ಯ ಜಯಸಿಂಹನ ಮಂತ್ರಿ ಚಾವುಂಡರಾಯನೆಂಬುವನು 'ಲೋಕೋಪಕಾರ'ವೆಂಬ ಗ್ರಂಥ ಬರೆದಿದ್ದಾನೆ. ಹಲವಾರು ಶಾಸ್ತ್ರಗಳೊಂದಿಗೆ ಜೀವಕೋಟಿಗೆ ಉಪಯೋಗ ಬೀಳುವ ವೃಕ್ಷಾಯುರ್ವೇದವನ್ನೂ ಅದರಲ್ಲಿ ವಿವರಿಸಿದ್ದಾನೆ. ಉದ್ಯಾನಗಳನ್ನು ರಚಿಸುವುದು, ಹಣ್ಣಿನ ಗಿಡಮರಗಳನ್ನು ನಡುವುದು, ಕಲಮು ಮಾಡುವುದು ಮುಂತಾದ ಕ್ರಿಯೆಗಳನ್ನು ಅದರಲ್ಲಿ ಹೇಳಿದ್ದಾನೆ.[೪]

ಹುಳಿ ಮಾವಿನ ಹಣ್ಣುಗಳನ್ನು ಸಿಹಿಮಾಡುವುದು, ಹೆಚ್ಚು ಕಾಲದವರೆಗೆ ಬಾಡದಂತೆ ಇಡುವುದು ಕೆಂಪು ದಾಸವಾಳವನ್ನು ಬಿಳಿದನ್ನಾಗಿ ಮಾಡುವುದು ಮುಂತಾದವುಗಳ ಉಪಾಯಗಳನ್ನು ವಿವರಿಸಿದ್ದಾನೆ. ಹೂಗಳನ್ನು ಹೆಚ್ಚು ಸುವಾಸಿತಗೊಳಿಸಲು ಮತ್ತು ಹೆಚ್ಚು ತೀವ್ರ ಫಲಕೊಡುವಂತೆ ಮಾಡಲು ಅನೇಕ ಬಗೆಯ ಸಂಸ್ಕಾರಗಳನ್ನೂ ಬಣ್ಣಿಸಿದ್ದಾನೆ.[೫] ಇದರಲ್ಲಿಯ ಹಲವು ಪ್ರಾಚೀನ ಕ್ರಮಗಳು ಈಗಿನ ತರುಣರು ಸಂಶೋಧನಾತ್ಮಕವಾಗಿ ಅಭ್ಯಸಿಸಲು ಅವಕಾಶ ಮಾಡಿ ಕೊಡುವಂಥವಾಗಿವೆ.

ಹಿಂದಿನವರ ವೃಕ್ಷಾರೋಪಣದ ಉಜ್ವಲ ಪರಂಪರೆಯನ್ನು ನಾವಿಂದು ಮರೆತಿದ್ದೇವೆ. ಗಿಡ ಮರಗಳ ಪ್ರೀತಿ, ಮಹತ್ವಗಳನ್ನೆಲ್ಲ ಅಲಕ್ಷಿಸಿಬಿಟ್ಟಿದ್ದೇವೆ. ಸಿಕ್ಕಹಾಗೆ ಗಿಡಮರ ಕಡಿದು ಪರಿಸರವನ್ನೆಲ್ಲ ನಿಸ್ಸತ್ವವಾಗಿ, ಅನಾಕರ್ಷಕವಾಗಿ ಮಾಡಿದ್ದೇವೆ. ನಾವು ನಡುತ್ತಿಲ್ಲ. ಸರಕಾರಿ ಅಥವಾ ಇತರರ ಮರ ಗಿಡಗಳ ಹೂ, ಹಣ್ಣು, ಕಟ್ಟಿಗೆ ಸಾಗಿಸುವುದರಲ್ಲಿ ನಿಸ್ಸೀಮರಾಗಿದ್ದೇವೆ. ಗಿಡ ಮರಗಳನ್ನು ನಡುವುದು, ಅದಕ್ಕಿಂತ ಹೆಚ್ಚಾಗಿ ನಟ್ಟಿದ್ದನ್ನು ಕಾಯುವುದು ಸಾಮಾಜಿಕ ಹೊಣೆ, ಎಂದು ಅರಿತಾಗಲೇ ನಾವು ನಮ್ಮ ಭಾರತೀಯ ಪರಂಪರೆಗೆ ತಕ್ಕಂತೆ ಬಾಳುವಂತೆ ಆಗುವುದು. ವನಮಹೋತ್ಸವವು ಕೇವಲ ವಿಧಿಯಾಗದೇ ಬಾಳಿನ ಬಗೆಯೆಂದು ತಿಳಿದುಕೊಂಡು ಆಚರಣೆಯಲ್ಲಿ ತಂದಾಗಲೇ ಅದರ ಸಾಫಲ್ಯ ಕಾಣುವಂತಾಗುವದು.

## ಆಧಾರ ಸೂಚಿ ಹಾಗೂ ಅಡಿಟಿಪ್ಪಣಿ


೧. **Epigraphia Carnatica** VIII Sb 145

೨. Moraes G.M. : The **Kadamba Kula** Bombay 1931 PP 472-73

೩. **South Indian Inscriptions**: Vol XX No 175: Hirebevinur

೪. ಶೇಷ ಐಯಂಗಾರ ಎಚ್. ಚಾವುಂಡರಾಯ ಕೃತ ಲೋಕೋಪಕಾರಂ ಮದ್ರಾಸ್ ೧೯೫೦ ಅಧ್ಯಾಯ ೬

೫. ಪೂರ್ವೋಕ್ತ


★★★



1. ವೃಕ್ಷಪ್ರೇಮ



2. ವೃಕ್ಷನೋಂಪಿ



3. ಫಲ ಹೊತ್ತ ವೃಕ್ಷಕ್ಕೆ ಕೊಡಲಿಯೇಟು



4. ಮಾನವನ ಅತಿಯಾಸೆ

## ೧೩. ಭಿತ್ತಿ ಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು

ಛಾಯಗ್ರಹಣದ ಸವಲತ್ತುಗಳು ಭಾರತದಲ್ಲಿ ಲಭ್ಯವಾಗುವ ತನಕ ರಾಜ-ಮಹಾರಾಜರು, ಅನುಕೂಲವಿದ್ದ ಇತರರೆಲ್ಲ ತಮ್ಮನ್ನು ರೂಪಿಸಿಕೊಳ್ಳಲು ಚಿತ್ರಕಲೆಗೇ ಮೊರೆ ಹೋಗಬೇಕಾಗಿತ್ತು. ಗತಕಾಲದ ಪ್ರಭಾವಶಾಲಿ ವ್ಯಕ್ತಿಗಳ ಅಧ್ಯಯನಕ್ಕೆ ತೈಲಚಿತ್ರ, ಜಲವರ್ಣಚಿತ್ರಗಳನ್ನು ಬಳಸಿಕೊಂಡರೂ ಸಂಶೋಧಕರು ಭಿತ್ತಿ ಚಿತ್ರಗಳತ್ತ ಹೆಚ್ಚಾಗಿ ಲಕ್ಷ ಹರಿಸಿದಂತಿಲ್ಲ. ಬಹುಶಃ ಇದಕ್ಕೆ ಮುಖ್ಯ ಕಾರಣ ಬಹುಸಂಖ್ಯಾತ ಚಿತ್ರಗಳನ್ನು ಹೆಸರಿಸದೆ ಇದ್ದುದರಿಂದ ಅವುಗಳನ್ನು ಗುರುತಿಸುವುದು ಸುಲಭವಲ್ಲದಿರಬಹುದು. ಆದರೆ ಶಾಸನ, ತಾಮ್ರಪಟ, ಶಿಲ್ಪಗಳಂತಹ ಪೂರಕವಾಗಿರುವ ಮಾಹಿತಿಯನ್ನು ಅವಲಂಬಿಸಿದರೆ, ಐತಿಹಾಸಿಕ ವ್ಯಕ್ತಿಗಳನ್ನು ಗುರುತಿಸುವುದು ಅಸಾಧ್ಯವೇನಲ್ಲ. ಕರ್ನಾಟಕ ರಾಜ್ಯದ ಉದ್ದಗಲಕ್ಕೆ ಇರುವ ಭಿತ್ತಿ ಚಿತ್ರಗಳಲ್ಲಿ ಮೂಡಿಸಿರುವ ಅಂಥ ಕೆಲ ವ್ಯಕ್ತಿಗಳ ಕಿರುಪರಿಚಯ ಇಲ್ಲಿದೆ.

ಕರ್ನಾಟಕವನ್ನಾಳಿದ ಶ್ರೇಷ್ಠ ಅರಸರಲ್ಲಿ ಒಬ್ಬನಾದ ಚಾಲುಕ್ಯ ಇಮ್ಮಡಿ ಪುಲಿಕೇಶಿ (ಕ್ರಿ. ಶ. ೭ನೇ ಶತಮಾನ)ಯ ರಾಜ್ಯ, ನರ್ಮದಾ ನದಿಯವರೆಗೆ ಹಬ್ಬಿದ್ದರಿಂದ, ಅಜಂತಾದ ಪ್ರಥಮ ಗುಹೆಯಲ್ಲಿ ಅವನನ್ನು ಚಿತ್ರಿಸಲಾಗಿದೆ, ಎಂದು ಒಂದು ಅಭಿಪ್ರಾಯವಿದೆ. ಠೀವಿಯಿಂದ ಸಿಂಹಾಸನದಲ್ಲಿ ಆಸೀನನಾದ ಅರಸನಿಗೆ ಪರ್ಷಿಯಾದ ರಾಯಭಾರಿ ಉಡುಗೊರೆ ಕೊಡುತ್ತಿದ್ದಾನೆ. ಅರಸರ ಪೋಷಾಕಿನಲ್ಲಿ ವಿಜೃಂಭಿಸುತ್ತಿಲ್ಲವಾದ್ದರಿಂದ ಆತ ಅರಸನಾಗಿರದೇ ಯಾವುದೋ ಸಾಮಂತ ವ್ಯಕ್ತಿಯಾಗಿರಬಹುದು. ಎನ್ನುವರಿದ್ದಾರೆ. ಚಿತ್ರಕಾರರೆಲ್ಲ ಬೌದ್ಧಭಿಕ್ಷುಗಳಾದ್ದರಿಂದ, ಬುದ್ಧನ ಜೀವನ ವೃತ್ತಾಂತಕ್ಕೆ ಸಂಬಂಧಿಸದೇ ಇರುವವರನ್ನೆಲ್ಲ ಆಡಂಬರ ರಹಿತವಾಗಿ ಚಿತ್ರಿಸಲು ಯತ್ನಿಸಿರಬಹುದು. ಇಂತಹದೇ ಸಂದೇಹ ಹಂಪೆಯ ವಿರೂಪಾಕ್ಷ ದೇವಾಲಯದ ಮೆರವಣಿಗೆಯ ಭಿತ್ತಿ ಚಿತ್ರದಲ್ಲಿದೆ. ಪಲ್ಲಕ್ಕಿಯಲ್ಲಿ ಹೊರಟಿರುವವರು, ವಿದ್ಯಾರಣ್ಯರೋ, ವ್ಯಾಸರಾಯರೋ, ಎಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಹಿಂದೂರಾಜ ಸುರತ್ರಾಣರ ರಾಯ ದೇಗುಲದಲ್ಲಿ, ಹಿಂದೂ ಸಾಮ್ರಾಜ್ಯ ಸ್ಥಾಪನೆಗೆ ಕಾರಣೀಭೂತರಾದ ವಿದ್ಯಾರಣ್ಯರನ್ನು ಗೌರವ ಸೂಚಕವಾಗಿ ಮೆರವಣಿಗೆಯಲ್ಲಿ ಬರಮಾಡಿಕೊಳ್ಳುವ ಸನ್ನಿವೇಶ ಚಿತ್ರಿತವಾಗಿದ್ದರೆ ಸಹಜವಾದದ್ದೇ! ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯದ ಹೊರಾಂಗಣದ ಮುಚ್ಚಿಗೆಯಲ್ಲಿ ಅದನ್ನು ಕಟ್ಟಿಸಿದ ವೀರಣ್ಣ ಮತ್ತು ವಿರೂಪಣ್ಣ ನಾಯಕರನ್ನು ಚಿತ್ರಿಸಲಾಗಿದೆ. `ಗರ್ಭಗುಡಿಯ ಮುಚ್ಚಿಗೆಯಲ್ಲೂ

ಸೋದರರನ್ನು ಭವ್ಯವಾಗಿ ಚಿತ್ರಿಸಲಾಗಿದೆ. ಅವರ ಸಮಕಾಲೀನ ವೇಷ ಭೂಷಣಗಳು ಅತ್ಯಂತ ನೈಜವಾಗಿವೆ. ಕುಸುರಿನ ಕೆಲಸ ಮಾಡಿದ ವೆಲ್ವೆಟ್ ಬಟ್ಟೆಯ ಎತ್ತರವಾದ ಕುಲಾಯಿಗಳು, ಶಿವಭಕ್ತರೆಂದು ಸಾರಲು ವಿಭೂತಿಯ ಪಟ್ಟೆಗಳು, ಕೊರಳಿಗೆ ಮುತ್ತಿನ ಹಾರಗಳು, ಶುಭ್ರವಾದ 'ಕಬಾಯಿ' ಅಥವಾ ನಿಲುವಂಗಿ, ರೇಶ್ಮೆ ಪಂಚೆ, ನಿಲುವಂಗಿಯ ಮೇಲೆ ಬಿಗಿದುಕೊಂಡ ಚೌಕುಡಿಯ ಪಟ್ಟೆ. ಇದು ಸಾಮಾನ್ಯವಾಗಿ ಪೂಜೆಗೆ ಹೊರಟಾಗ ಅರಸಾದಿಗಳು ಧರಿಸುವ ಉಡುಗೆಯಾಗಿತ್ತು. ಭರತೇಶ ವೈಭವದಲ್ಲಿ ಮತ್ತು ತೀರ ಇತ್ತೀಚೆಗೆ ಪ್ರಕಟವಾದ "ಕೃಷ್ಣದೇವರಾಯನ ದಿನಚರಿ" ಗಳಲ್ಲಿ ಕುಲಾಯಿ, ಅಥವಾ ಕಬಯಾ ಉಲ್ಲೇಖ ಬರುತ್ತದೆ. ಬಹುಶಃ ಮುಸ್ಲಿಂ ವೇಷಭೂಷಣದಿಂದ 'ಕಬಾಯಿ' (ನಿಲುವಂಗಿ) ಪ್ರೇರಿತವಾಗಿತ್ತು.

ಲೇಪಾಕ್ಷಿ ಬಂಧುಗಳಲ್ಲಿ ಅಣ್ಣನು ಗೌರವರ್ಣದವನಾಗಿದ್ದು ಮೈಕೈ ತುಂಬಿಕೊಂಡಿದ್ದರೆ, ತಮ್ಮನು ಕೃಶಾಂಗನಾಗಿ ಕೃಷ್ಣ ವರ್ಣದವನಾಗಿರುತ್ತಾನೆ.(ಚಿತ್ರ 1)

ಸೀಬಿಯ ನರಸಿಂಹಸ್ವಾಮಿ ದೇವಾಲಯದ ಮಹಾದ್ವಾರದ ಮುಚ್ಚಿಗೆಯಲ್ಲಿ ಹೊಸಗನ್ನಡದಲ್ಲಿ ಶಾಸನವೊಂದನ್ನು ಬರೆಯಲಾಗಿದೆ. ಇತ್ತೀಚೆಗೆ ಕಟ್ಟಿಸಿದ ಗೋಡೆ ಹಾಗೂ ಸಿಡಿಸಿದ ಸುಣ್ಣದಿಂದ ಶಾಸನವನ್ನು ಸಂಪೂರ್ಣವಾಗಿ ಓದಲಾಗುತ್ತಿಲ್ಲ. ಅದರಲ್ಲಿ ಮುಖ್ಯವಾಗಿ ಹೈದರಾಲಿಯು ಕೆಳದಿ (ಬಿದನೂರು) ಮೊದಲಾದ ರಾಜ್ಯಗಳನ್ನು ಗೆದ್ದುಕೊಂಡಿದ್ದು. ಪ್ರಜೆಗಳನ್ನು ಮಕ್ಕಳಂತೆ ಪ್ರೀತಿಯಿಂದ ನೋಡಿಕೊಂಡಿದ್ದರ ಉಲ್ಲೇಖವಿದೆ. 'ಹೈದರ ನಾಮಾ' ಬರೆದ ನಲ್ಲಪ್ಪನ ಪೂರ್ವಜರ ವಿವರಗಳು ಉಲ್ಲೇಖಿಸಲ್ಪಟ್ಟಿವೆ. ಅದರ ಕೆಳಗಡೆಯಲ್ಲಿ ತಲೆಗೆ ರುಮಾಲು ಸುತ್ತಿ, ನಿಲುವಂಗಿಯನ್ನು ತೊಟ್ಟು ರಾಜಠೀವಿಯಿಂದ ಆಸನವೊಂದರಲ್ಲಿ ಆರೂಢನಾದ ವ್ಯಕ್ತಿಗೆ ಸೇವಕನೊಬ್ಬನು ಚಾಮರದಿಂದ ಗಾಳಿ ಬೀಸುತ್ತಿದ್ದಾನೆ. ಅವನೊಂದಿಗೆ ಮೂವರು ಸೇವಕರು, ಪ್ರಭುವಿನ ಅಪ್ಪಣೆಯ ನಿರೀಕ್ಷೆಯಲ್ಲಿ ಕೈಕಟ್ಟಿ ನಿಂತಿದ್ದಾರೆ. ರಾಜನ ಎದುರಿಗೆ ರತ್ನಗಂಬಳಿಯ ಮೇಲೆ ಮಂಡೆಯೂರಿ ಕುಳಿತ ಹರೆಯದ ಭವ್ಯವ್ಯಕ್ತಿ ಟೀಪುಸುಲ್ತಾನನೆಂದು, ಇತರ ಚಿತ್ರಗಳ ಹೋಲಿಕೆಯಿಂದ ಗುರುತಿಸಬಹುದು.(2) ಈ ಚಿತ್ರ ಪಟ್ಟಿಯ ಅಡಿಯಲ್ಲಿ ಸೀಬಿಯ ಭಿತ್ತಿ ಚಿತ್ರಗಳಿಗೆ ಕಾರಣೀಭೂತನಾದ ನಲ್ಲಪ್ಪನ ಭಾವಚಿತ್ರವಿದೆ. ಪೇಟಾ ಸುತ್ತಿಕೊಂಡು, ಹಣೆಗೆ ಕುಂಕುಮದ ಬಟ್ಟು ಇಟ್ಟುಕೊಂಡು ನಕ್ಷೆ ಇರುವ ಕಸೆ ಬಂಡಿ ಧರಿಸಿದ್ದಾನೆ.(3) ನಲ್ಲಪ್ಪನ ಮೂವರು ಬಂಧುಗಳು, ನೆಲಕ್ಕೆ ಹಾಸಿದ ಆಸನಗಳಲ್ಲಿ ಕುಳಿತು ಅವನೊಡನೆ ವಿಚಾರ ವಿನಿಮಯದಲ್ಲಿ ತೊಡಗಿದ್ದಾರೆ.

ಶ್ರೀರಂಗಪಟ್ಟಣದ ದರಿಯಾ ದೌಲತ್ ಅರಮನೆಯ ಭಿತ್ತಿ ಚಿತ್ರಗಳಲ್ಲಿ ಅನೇಕಾನೇಕ ಐತಿಹಾಸಿಕ ಗಣ್ಯ ವ್ಯಕ್ತಿಗಳನ್ನು ಗುರುತಿಸಬಹುದು. ದ್ವಿತೀಯ ಮೈಸೂರು ಯುದ್ಧವನ್ನು ನಿರೂಪಿಸುವ ಚಿತ್ರದಲ್ಲಿ ಹೈದರಾಲಿಯು ಗಜಾರೂಢನಾಗಿದ್ದಾನೆ. ಅಂಬಾರಿಯಲ್ಲಿದ್ದ ಸೇವಕನು ಪ್ರಭುಗಳಿಗೆ ಛತ್ರ ಹಿಡಿದಿದ್ದಾನೆ. ಅದಾಗಲೇ ರೂಢಿಯಲ್ಲಿ ಬಂದಿದ್ದ ಸೇವಕರ, ಮಾವುತ, ಅಶ್ವದಳದವರ ಪಾಶ್ಚಾತ್ಯ ಮಾದರಿಯ ಸಮವಸ್ತ್ರಗಳು ಗಮನಾರ್ಹವಾಗಿವೆ. ಕಾಳಗದ ಸನ್ನಾಹದಲ್ಲಿದ್ದ ಟೀಪುವು ಶ್ವೇತ ಅಶ್ವಾರೂಢನಾಗಿದ್ದರೆ ಆತನೊಡನೆ ವಿಚಾರ ವಿಮರ್ಶೆಯಲ್ಲಿ

ತೊಡಗಿದ ಸೇನಾಪತಿಯು ನಾಶೀಪುಡಿ ಬಣ್ಣದ ಕುದುರೆಯನ್ನೇರಿದ್ದಾನೆ. ಕಾಂಚೀಪುರಂ ಯುದ್ಧದ ಅಂಕಣದಲ್ಲಿ ಹೈದರಾಲಿ, ಟೀಪುಸುಲ್ತಾನರಂತೆ ಚಿಂತಾಕ್ರಾಂತನಾಗಿ ಪಲ್ಲಕ್ಕಿಯಲ್ಲಿದ್ದ ಬ್ರಿಟಿಷ್ ಸೇನಾಧಿಪತಿ ಕರ್ನಲ ಬೇಲಿಯನ್ನೂ ಗುರುತಿಸಬಹುದು. ಇನ್ನಿತರ ಅಂಕಣಗಳಲ್ಲಿ ಚಿತ್ರದುರ್ಗದ ಮದಕರಿನಾಯಕ, ಕೊಡಗಿನ ವೀರರಾಜೇಂದ್ರ, ಕಡಪಾದ ನವಾಬ, ಪೇಶ್ವೆ ಎರಡನೇ ಬಾಜಿರಾಯ ಮುಂತಾದವರನ್ನು ಗುರುತಿಸಬಹುದು.

ಮೈಸೂರು ನಗರದಲ್ಲಿದ್ದ ನರಸಿಂಹಸ್ವಾಮಿ ದೇವಾಲಯದ ಮಹಡಿಯಲ್ಲಿ ಪ್ರತ್ಯೇಕವಾಗಿ ಚಿತ್ರಶಾಲೆಯೊಂದನ್ನು ರಚಿಸಲಾಗಿದೆ. ಪ್ರತಿಯೊಂದು ಪಡಿರೂಪದ ಮೇಲ್ಗಡೆ ಕನ್ನಡದಲ್ಲಿ ಅರಸರ ಹೆಸರುಗಳನ್ನು ನಮೂದಿಸಿರುವುದರಿಂದ ಅವರನ್ನು ಗುರುತಿಸಬಹುದು. ಮೊದಲ ನೋಟಕ್ಕೆ ಎಲ್ಲಾ ಅರಸರ ಮುಖಗಳೂ ಏಕ ಪ್ರಕಾರವಾಗಿ ಕಾಣುತ್ತವೆ. ಆಳವಾಗಿ ಅಭ್ಯಸಿಸಿದರೆ, ಅವರ ಶಿರೋಭೂಷಣಗಳು, ಮೀಸೆಯ ವಿನ್ಯಾಸ, ಕಿವಿ, ತುಟಿ, ದವಡೆ, ಕಂಠಗಳ ಭೇದ, ಮುಖಚರ್ಯೆ, ಆಭರಣಗಳು ಸಾಕಷ್ಟು ಭಿನ್ನವಾಗಿರುವುದು ಗೋಚರಿಸುವುದು. ಅದರಲ್ಲೂ ಕನ್ನಡಿಗರಿಗೆ ಪ್ರಿಯವಾದ ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ. ೧೬೦೪ - ೧೬೧೩) ಹಾಗೂ ಬೆಟ್ಟದ ಚಾಮರಾಜ ಒಡೆಯರ್ (೧೬೬೦-೧೬೬೬) ಅವರ ರೂಪ ಚಹರೆಗಳನ್ನು ಭಿನ್ನವಾಗಿ, ಸ್ಪಷ್ಟವಾಗಿ ವಿಂಗಡಿಸಬಹುದಾಗಿದೆ. ಮೈಸೂರಿನ ಜಗನ್ಮೋಹನ ಅರಮನೆಯ ಚಿತ್ರಶಾಲೆಯಲ್ಲಿ ಅನೇಕಾನೇಕ ಒಡೆಯರು, ರಾಜಮಹಾರಾಜರ ಜೊತೆಗೆ ಸಮಕಾಲೀನ ಗಣ್ಯವ್ಯಕ್ತಿಗಳನ್ನು ಗುರುತಿಸಬಹುದು. ನಮಗೆ ಈಗ ಲಭ್ಯವಿಲ್ಲದ ಆದರೆ ಸಮಕಾಲೀನ ಕಲಾಕಾರರಿಗೆ ಪರಿಚಿತವೇ ಇದ್ದ ನೈಜವಾದ ತೈಲಚಿತ್ರಗಳಿಂದ ಈ ಪ್ರತಿ ಚಿತ್ರಗಳನ್ನು ಬರೆದಿರಬಹುದಾದ ಸಾಧ್ಯತೆಯಿದೆ.

ಕರ್ನಾಟಕ ಕರಾವಳಿಗೇ ಸೀಮಿತವಾಗಿರುವ ಕಾವಿ ಚಿತ್ರಗಳಲ್ಲಿ ಮಧ್ವಾಚಾರ್ಯರು, ಸಂತರಾಮದಾಸ, ತುಕಾರಾಮರಂಥವರನ್ನು ಪಡಿಚಿತ್ರಗಳಿಂದ ಚಿತ್ರಿಸಿದ್ದನ್ನು ಗುರುತಿಸಬಹುದು. ಇನ್ನಿತರ ಸಾಮಯಿಕ ವ್ಯಕ್ತಿಗಳ ಚಿತ್ರಗಳಿದ್ದರೂ ಗುರುತಿಸುವದು ಕಷ್ಟ!

ನಮ್ಮ ಚರಿತ್ರೆಯ ಪಠ್ಯ ಪುಸ್ತಕಗಳಲ್ಲಿ ಹೀಗೆ ಲಭ್ಯವಿರುವ ಕೆಲವು ಐತಿಹಾಸಿಕ ಚಿತ್ರಗಳನ್ನಾದರೂ ಸೇರಿಸುವ ಔದಾರ್ಯವನ್ನು ಸರಕಾರ ಮತ್ತು ಸಂಸ್ಥೆಗಳು ತೋರಿದಲ್ಲಿ ಕೆಲವಾದರೂ ಚಿರಸ್ಮರಣೀಯರ ಚಿತ್ರಗಳು ಎಳೆಯರ ಮನಸ್ಸಿನಲ್ಲಿ ಉಳಿದುಕೊಂಡಾವು! ನನ್ನ ವಿದ್ಯಾರ್ಥಿ ಜೀವನದ ದಿನಗಳಿಂದಲೂ ಪಠ್ಯಕ್ಕೆ ಅರ್ಥಾತ್ ಸಂಬಂಧವಿಲ್ಲದ ಚಿತ್ರಗಳನ್ನು ನೋಡುತ್ತ ಬಂದಿದ್ದೇನೆ. ನೂರಜಹಾನ್, ಹೈದರಾಲಿ, ಟಿಪ್ಪುಸುಲ್ತಾನರ ಚಿತ್ರಗಳು ಅವರ ವ್ಯಕ್ತಿತ್ವದ ಚಿತ್ರಣ ಕೊಡುತ್ತಿರುವುದಿಲ್ಲ. ಈ ದೃಷ್ಟಿಯಿಂದ ಇಲ್ಲಿ ಪ್ರಸ್ತಾಪಿಸಲಾದ ಚಿತ್ರಗಳಿಗೆ ಚಾರಿತ್ರಿಕ ಮಹತ್ವವಿದೆ.

★★★



1. ಲೇಪಾಕ್ಷಿ ಸಹೋದರರು



4. ಮುಮ್ಮಡಿ ಕೃಷ್ಣರಾಜರು



2. ಹೈದರ ಅಲಿ, ಟೀಪು



3. ನಲ್ಲಪ್ಪ

# ೧೪. ಸಾಹಿತ್ಯ, ಶಿಲ್ಪ ಚಿತ್ರಗಳಲ್ಲಿ ಮಂಚ

ಪಾಶ್ಚಾತ್ಯ ದೇಶಗಳಲ್ಲಿ ಚಳಿಯಲ್ಲಿಯೂ ಬೆಚ್ಚಗೆ ಮಲಗುವದಕ್ಕಾಗಿಯೇ, ಅನಾದಿಕಾಲದಿಂದಲೂ ಮಂಚದ ಪ್ರಕಾರಗಳನ್ನು ಬಳಸುತ್ತ ಬಂದಿದ್ದಾರೆ. ಉತ್ತರ ಭಾರತದವರೂ ಇದೇ ಕಾರಣಕ್ಕಾಗಿ ಮರದ ಮಂಚ, ಹೊರಸು (ಖಟಿಯಾ)ಬಳಕೆಯಲ್ಲಿ ತಂದರು. ದಕ್ಷಿಣ ಭಾರತದ ಸಮಶೀತೋಷ್ಣ ಮತ್ತು ಉಷ್ಣ ಹವಾಮಾನದಿಂದಾಗಿ ಜನಸಾಮಾನ್ಯರು ಮಂಚಕ್ಕೆ ಶರಣು ಹೋಗಬೇಕಾಗಿರಲಿಲ್ಲ. ಇಷ್ಟಾದರೂ ಸಿರಿವಂತಿಕೆಯ ಸಂಕೇತವಾಗಿ, ಹೆಚ್ಚಿನ ಸುಖಕ್ಕಾಗಿ, ಕರ್ನಾಟಕದಲ್ಲಿ ಶತಕಗಳಿಂದ ಅಸ್ತಿತ್ವದಲ್ಲಿರುವ ಮಂಚಗಳ ವೈವಿಧ್ಯಮಯತೆ ಬೆರಗು ಹುಟ್ಟಿಸುವಂತಹದು (ಚಿತ್ರ1-14).

ಮಧ್ಯ ಯುಗದಲ್ಲಿಯೇ ಬಸವಣ್ಣನವರು 'ಒಡೆತ್ತ ಬಲ್ಲುದು ಅವಲಕ್ಕಿಯ ಸವಿಯ,? ಕೋಡಗವೆತ್ತ ಬಲ್ಲದು ಸೆಳೆ ಮಂಚದ ಸುಖವ'? ಎಂದು ಉದ್ಗರಿಸಿದ್ದರು.[೧] ಸೆಳೆ ಮಂಚದ ಸುಖ ಸವಿಯಲು ಸಂಸ್ಕಾರದ ಅಗತ್ಯವಿದೆಯೆಂಬುದು ತಾತ್ಪರ್ಯ. ಚಾಲುಕ್ಯ ಭೂಪಾಲ ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಅರಸರು ಮತ್ತು ಧನಿಕರು ಆ ಕಾಲದಲ್ಲಿ ಬಳಸುತ್ತಿದ್ದ ಹಲವಾರು ಮಂಚಗಳ ಪ್ರಕಾರಗಳ ವಿವರಗಳಿವೆ.[೨] ನಂಜುಂಡನ ರಾಮನಾಥ ಚರಿತೆ (೧೬ನೇ ಶತಕ) ಯಲ್ಲಿ ರತ್ನಾಜಿಯ ಶಯ್ಯಾಗೃಹದಲ್ಲಿದ್ದ ಬೇರೆ ಬೇರೆ ಮಂಚಗಳ ಹೆಸರುಗಳನ್ನು ಕಾಣಬಹುದು. ಅಲ್ಲಿ ಚಪ್ಪರಮಂಚ, ಶಕುನಿಮಂಚ, ನಳನಳಿಸುವ ತೂಗುಮಂಚಗಳಿದ್ದವು.[೩] 'ಭರತೇಶ ವೈಭವ' ಕಾವ್ಯದಲ್ಲಿ, ಬೆಳ್ಳಿ, ಬಂಗಾರ, ಲೋಹ, ಶ್ರೀಗಂಧ, ತೇಗು ಮೊದಲಾದವನ್ನು ಮಂಚದ ರಚನೆಯಲ್ಲಿ ಬಳಸುತ್ತಿದ್ದ ಉಲ್ಲೇಖವಿದೆ.[೪] ಪಂಪನ ಕಾಲದಲ್ಲಿ ಲೋಹದ ಮಂಚಗಳೂ ಬಳಕೆಯಲ್ಲಿದ್ದವು.[೫] ವಿದೇಶೀ ಪ್ರವಾಸಿಗರು ನಮ್ಮಲ್ಲಿದ್ದ ಮಂಚಗಳ ಪ್ರಕಾರಗಳನ್ನು ವಿಸ್ಮಯದಿಂದ ಗಮನಿಸಿ ವಿವರಗಳನ್ನು ಬರೆದಿಟ್ಟಿದ್ದಾರೆ. ಮಾರ್ಕೋಪೋಲೋ (೧೩ನೇ ಶತಮಾನದ)ಬೆತ್ತದಿಂದ ನಿರ್ಮಿಸಿದ ಒಂದು ತರಹದ ಮಂಚವನ್ನು ದಕ್ಷಿಣ ಪ್ರದೇಶದ ಜನ ಬಳಸುತ್ತಿದ್ದುನ್ನು ಗಮನಿಸಿದ್ದ. ಇದು ಎಷ್ಟು ಚಮತ್ಕಾರಿಕವಾಗಿರುತ್ತಿತ್ತೆಂದರೆ ನಿದ್ರೆ ಬಂದಾಗ ಕೇವಲ ದಾರ ಎಳೆದು ಮಂಚವನ್ನು ಮೇಲಕ್ಕೆ ಎತ್ತಿ ತೂಗಾಡುವಂತೆ ಮಾಡಿಕೊಳ್ಳಬಹುದಿತ್ತು.[೬]

ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡ ದೇವಾಲಯಗಳಲ್ಲಿಯ ಶಿಲ್ಪಗಳಲ್ಲಿ ವಿವಿಧ ಪ್ರಕಾರದ ಮಂಚಗಳನ್ನು ಗುರುತಿಸಬಹುದು. ಬೇಸಿಗೆಯಲ್ಲಿ ತಂಗಾಳಿಗೆ, ಚಳಿಗಾಲದಲ್ಲಿ

ಎಳೆ ಬಿಸಿಲಿಗೆ ಮೈಯೊಡ್ಡಲು ಬಳಸುವ, ತೀರ ಹಗುರವಾದ ಕಟ್ಟಿಗೆಯಿಂದ ನಿರ್ಮಿಸಿ, ಬಟ್ಟೆಯ ಪಟ್ಟಿಗಳಿಂದ (ಪಟ್ಟಿಕಾಭಿಃ ಸುಗುಂಫಿತಃ) ಹೆಣೆಯುತ್ತಿದ್ದರಿಂದ ಅವಶ್ಯವಿದ್ದಲ್ಲಿ ಅವನ್ನು ಸಾಗಿಸಲು ಬರುತ್ತಿತ್ತು. ಗುಜ್ಜರಿಗಾಲಿನ ಮಂಚ, ಒಂದೇ ಸ್ಥಳದಲ್ಲಿ ಸ್ಥಾಯಿಯಾಗಿ ಇರುತ್ತಿದ್ದು ದಪ್ಪ ಮುರುಟಿದ ಕಾಲುಗಳನ್ನು ಹೊಂದಿ ಗಟ್ಟಿಮುಟ್ಟಾಗಿದ್ದು ಇಡೀ ಪುಟ್ಟ ಸಂಸಾರವನ್ನೇ ಹೊರಬಲ್ಲುದಾಗಿತ್ತು. ಸೆಳೆಮಂಚ ಅಥವಾ ತೂಗುಮಂಚ, ಬೇರೆ ಬೇರೆ ಲೋಹಗಳಿಂದ ನವಿರಾಗಿ ರಚಿಸಿದ ಸ್ಪ್ರಿಂಗಿನ ಪುಟಿದ ಸುಖವನ್ನು ಹಲವೊಂದು ಸಲ ನೀಡುತ್ತಿತ್ತು. ಬೆತ್ತದ ಸೆಳೆಮಂಚಗಳೂ ಇದ್ದವು. ನವವಿವಾಹಿತರಿಗೆ ಸಂತೋಷ ನೀಡುವ ವರಮಂಚಗಳೂ ಇದ್ದವು. ಇವುಗಳ ಅಡಿಯಲ್ಲಿ ವೀಳ್ಯದ ಡಬ್ಬಿ, ಡವಕೆ, ಮಧುವಿನ ಹೂಜೆ ಇದ್ದು ಮಂಚಕ್ಕೆ ಬೆತ್ತದ ಮೈ, ಚರ್ಮದ ಹೊದಿಕೆಯಿರುತ್ತಿತ್ತು. ಬಸವ ಪುರಾಣದಲ್ಲಿ ವಾರಾಂಗನೆಯ ಮನೆಯಲ್ಲಿ ಓರಣವಾಗಿ ಹೊಂದಿಸಿದ ಹಾಸುಮಂಚ, ಉಯ್ಯಲವಾಸುಮಣೆ, ತಲೆಗಿಂಬು, ಮೇಲ್ಮಡಿಗಳಿದ್ದ ಹಾಸುಗದ್ದುಗೆಗಳಿದ್ದು, ಕುಂಚ-ಕಾಳಂಜಿ, ತೆರೆಗಿಂಡಿ, ತಂಬುಗೆ ಮುಂತಾದವನ್ನು ಜೋಡಿಸಿಡುತ್ತಿದ್ದ ವರ್ಣನೆಯಿದೆ.[೭] ಅರಸರ, ಸಿರಿವಂತರ ಮನೆಗಳಲ್ಲಿ ಚಿನ್ನದ ಕೆಲಸ ಮಾಡಿದ ಮಂಚಗಳಿಗೆ ರೇಶ್ಮೆಯ ಮೇಲ್ಕಟ್ಟು ಇರುತ್ತಿತ್ತು. ಸಮುದ್ರದ ನೊರೆಯಂತೆ ಮನೋಹರವಾದ ಬೆಳ್ಳನೆಯ ರೇಶ್ಮೆಯ ಮೇಲ್ಹಾಸು ಹೊಂದಿದ ಹಂಸ ತೂಲಿಕಾತಲ್ಪವಿರುತ್ತಿತ್ತು.[೮] ಸೋಮೇಶ್ವರನು ಋತುಮಾನಕ್ಕನುಗುಣವಾಗಿ ವಿವಿಧ ಹಾಸಿಗೆಗಳನ್ನು ಬಳಸಬೇಕೆಂದು ಸೂಚಿಸಿದ್ದಾನೆ. ವಸಂತಕಾಲದಲ್ಲಿ ಹಂಸತೂಲಿಕೆಯದು, ಬೇಸಿಗೆಯಲ್ಲಿ ನೀರಿನದು, ಮಳೆಗಾಲದಲ್ಲಿ ಹತ್ತಿಯದು, ಶರತ್ ಋತುವಿನಲ್ಲಿ ಹೂ, ಕೇಸರ ಹಾಗೂ ದೋಲಾಮಂಚಗಳ ಹಾಸಿಗೆಗಳು ಉತ್ತಮವಾದವುಗಳು ಎಂದು ಅಭಿಪ್ರಾಯಪಟ್ಟಿದ್ದಾನೆ. ಶಿಲ್ಪಗಳಲ್ಲಿ ಅನೇಕ ಪ್ರಕಾರದ ಹಾಸಿಗೆಗಳನ್ನು ಗುರುತಿಸಬಹುದಾದರೂ ಅವುಗಳೊಳಗೆ ಏನು ತುಂಬಲಾಗಿದೆ? ಎಂದು ನಿರ್ಧರಿಸಲಾಗುವುದಿಲ್ಲ.

ಮಂಚಗಳ ವಿನ್ಯಾಸ, ಹಾಸಿಗೆ-ಹೊದಿಕೆ, ಗದ್ದಿಗೆಗಳ ಅಂದ ಚೆಂದವನ್ನು ಆ ಕಾಲದ ವರ್ಣಚಿತ್ರಗಳಿಂದ ಅರಿಯಬಹುದಾಗಿದೆ. ಕುಶಲ-ಕರ್ಮಿಗಳಿಂದ ಮಂಚದ ವಿವಿಧ ಭಾಗಗಳನ್ನು ಕುಸುರಿಗೆಲಸ ಮಾಡಿಸಿ ಅಲಂಕರಿಸುತ್ತಿದ್ದರು. ಅಲ್ಲದೇ ಆಕರ್ಷಕ ಬಣ್ಣಗಳಿಂದ ಸಿಂಗರಿಸುತ್ತಿದ್ದರು. ಬೇಡಿಕೆಗನುಗುಣವಾಗಿ ಏಳು ಪ್ರಕಾರದ ಹಾಸಿಗೆಗಳನ್ನು ತಯಾರಿಸುತ್ತಿದ್ದರು. ಹಿಂಜಿದ ಹತ್ತಿ, ಹಂಸದ ತುಪ್ಪಳ, ಎಲೆ -ಚಿಗುರುಗಳು, ಕಮಲದಂತಹ ಮೃದು ಹೂಗಳು, ಹೂಕೇಸರುಗಳು ಬಳಕೆಯಲ್ಲಿದ್ದವು. ನೀರ ಹಾಸಿಗೆಯನ್ನು ಅಥವಾ 'ತೋಯಶಯ್ಯೆ'ಯನ್ನು ಚರ್ಮದ ಚೀಲದಲ್ಲಿ ನೀರು ತುಂಬಿ ಸೋರದಂತೆ ಭದ್ರ ಪಡಿಸುತ್ತಿದ್ದರು.[೯] ಹದಗೊಳಿಸಿದ ಚರ್ಮದ ಮೇಲ್ಹಾಸುಗಳ ಮೇಲೆ ಚಿನ್ನ, ಬೆಳ್ಳಿ ಕಸೂತಿಯಿದ್ದು ಇದರಲ್ಲಿ ಭಾರತೀಯರ ನೈಪುಣ್ಯವನ್ನು ಇನ್ನಾವ ದೇಶವೂ ಪಡೆದಿಲ್ಲವೆಂದು ಮಾರ್ಕೊಪೋಲೋ ಉದ್ಗರಿಸಿದ್ದಾನೆ.[೧೦] ಸೋಫಾ ಅಥವಾ ಸೆಟ್ಟೆಗಳನ್ನು ಹೋಲುವ ಗದ್ದಿಗೆಗಳು ವರ್ತುಲ, ಲಂಬ ವರ್ತುಲ, ಚಪ್ಪಟೆಯಾಕಾರದವು ಇದ್ದು ರೇಶ್ಮೆಯ ಹೊದಿಕೆಯ ಆಸನಗಳನ್ನು ಹೊಂದಿರುತ್ತಿದ್ದವು.

ಚಿತ್ತಾರದ ಅಂದ ಚೆಂದದ ಬಟ್ಟೆಗಳನ್ನು ಹಾಸುತ್ತಿದ್ದರು. ದಿಂಬುಗಳಿಗೆ ಮುತ್ತು ರತ್ನ ಜೋಡಿಸುವ ಪರಿಪಾಠವೂ ಉಳ್ಳವರ ಮನೆಯಲ್ಲಿತ್ತು.

ಆದಿಲ್‌ಶಾಹಿಗಳ ಆಳಿಕೆಯಲ್ಲಿ ರಚಿತವಾದ ದಕ್ಕಣೀ ಶೈಲಿಯ ಚಿಕಣಿ ಚಿತ್ರಗಳಲ್ಲಿ ಸುಂದರ ಯುವತಿಯೋರ್ವಳು ಮಂಚದ ಮೇಲೆ ಪವಡಿಸಿರುವುದನ್ನು ಚಿತ್ರಿಸಲಾಗಿದೆ. ಎರಡು ತಲೆದಿಂಬುಗಳ ಮೇಲೆ ತಲೆಯಿಟ್ಟು ಮೆತ್ತಗಿನ ಹಾಸಿಗೆಯ ಮೇಲೆ ವಿರಮಿಸುತ್ತಾಳೆ. ಮಂಚದ ಅಡಿಯಲ್ಲಿ ಹಣ್ಣು ಹಂಪಲುಗಳ ತಟ್ಟೆ, ಸುರೆಯ ಪಾತ್ರಗಳಿವೆ. ಬೆಕ್ಕೊಂದು ಯಜಮಾನಿಯನ್ನು ಎಚ್ಚರಿಸುವಂತೆ ಮ್ಯಾಂವ್ ಗುಡುತ್ತಿದ್ದರೆ, ಅದರ ಮರಿ ತಾಯಿಯ ಆಶ್ರಯ ಪಡೆಲು ಬರುತ್ತಿರುವಂತೆ ಚಿತ್ರಿಸಲಾಗಿದೆ. ಶ್ರವಣಬೆಳ್ಗೊಳದ ಜೈನ ಮಠದ ಭಿತ್ತಿ ಚಿತ್ರಗಳಲ್ಲಿ ಚಕ್ರವರ್ತಿ ಅರವಿಂದ, ಎತ್ತರವಾದ ಮಂಚದ ಮೇಲೆ ವಿರಮಿಸುತ್ತಿದ್ದಾನೆ. ಹಾಸಿಗೆಯ ಮೇಲೆ ಕುಸುರಿಕೆಲಸದ ಮೇಲ್ಹಾಸನ್ನು ತೋರಿಸಲಾಗಿದೆ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ (೧೭೯೪-೧೮೬೮) ರಚಿತವಾದ 'ಸೌಗಂಧಿಕಾ ಪರಿಣಯ' ಕಲ್ಲಚ್ಚಿನ ಗ್ರಂಥದಲ್ಲಿ ಅರಸ-ಅರಸಿಯರು ವಿವಿಧ ಪ್ರಕಾರದ ಮಂಚಗಳಲ್ಲಿ ಪವಡಿಸಿದ್ದನ್ನು ಚಿತ್ರಿಸಲಾಗಿದೆ. ಚಪ್ಪರ ಮಂಚವನ್ನು, ಹಾಸಿಗೆ, ದಿಂಬುಗಳನ್ನು ಚಿತ್ತಾರಗಳಿಂದ ಅಲಂಕರಿಸಲಾಗಿದೆಯಲ್ಲದೆ ಚಪ್ಪರದಿಂದ ಅಲಂಕೃತ ತೆರೆಗಳನ್ನು ಇಳಿಬಿಡಲಾಗಿದೆ. ಇನ್ನೊಂದು ಚಿತ್ರದಲ್ಲಿ ಉದ್ದವಿಲ್ಲದ ಮಂಚಕ್ಕೆ ದಪ್ಪವಾದ ಹಾಸಿಗೆಯನ್ನು ಜೋಡಿಸಲಾಗಿದೆ. ಬಹುಶಃ ಚಿಕ್ಕ ವಯಸ್ಸಿನ ರಾಜ ದಂಪತಿಗಳು ಮೈಗಂಟಿ ಕುಳಿತುಕೊಳ್ಳುವ ಸಲುವಾಗಿ ಇಂಥ ಮಂಚಗಳನ್ನು ಬಳಸುತ್ತಿದ್ದಿರಬೇಕು. ಸುಮಾರು ಇದೇ ಕಾಲಕ್ಕೆ ರಚಿತವಾದ ಸಚಿತ್ರ "ಶ್ರೀ ತತ್ವನಿಧಿ" ಹಸ್ತಪ್ರತಿಯಲ್ಲಿ ಅನೇಕಾನೇಕ ಮಂಚಗಳ ಅಡಿಯಲ್ಲಿ ಹಲವಾರು ಪರಿಕರಗಳನ್ನು ಗುರುತಿಸಬಹುದು. ತೂಗು ಮಂಚಗಳಂತೂ ತುಂಬ ಜನಪ್ರಿಯವಾಗಿದ್ದವು.

ಸೀಬಿಯ ನರಸಿಂಹ ಸ್ವಾಮಿ ದೇವಾಲಯದ ಮುಚ್ಚಿಗೆಯಲ್ಲಿರುವ ರತಿಕ್ರೀಡೆಯ ಭಿತ್ತಿ ಚಿತ್ರಗಳಲ್ಲಿಯೂ ಅನೇಕ ವಿಧದ ಮಂಚಗಳನ್ನು ಗುರುತಿಬಹುದು., ಕಾಮಿನಿಯೋರ್ವಳು ಪವಡಿಸಿದ ತೂಗುಮಂಚವನ್ನು ಜೋಕಾಲಿಯಂತೆ ತೂಗಿಸಿಕೊಳ್ಳುತ್ತಿದ್ದಾಳೆ.

ನವನವೀನ ಡಿಝೈನ್‌ಗಳ ಫರ್ನಿಚರ್ ಹೊಂದುವ ಹವ್ಯಾಸವುಳ್ಳ ಅತ್ಯಾಧುನಿಕರು ಇಂಥ ಕಲಾತ್ಮಕವಾದ ಕುಸುರಿ ಕೆಲಸದ ಮಂಚಗಳನ್ನು ತಿರುಗಿ ಬಳಕೆಯಲ್ಲಿ ತಂದರೆ ಅವುಗಳಿಗೆ ಅಪಾರ ಬೇಡಿಕೆ ಬರುವದು ಖಂಡಿತ.




1. ಸಾದಾ ಮಂಚ




2. ಗುಜ್ಜರಿಗಾಲಿನ ಮಂಚ




3. ಎತ್ತರಗಾಲಿನ ಮಂಚ



4. ಸುಖಶಯನದ ಮಂಚ



5. ಅಲಂಕೃತ ಮೇಲ್ಹಾಸು ಬಿಟ್ಟು ಹೋಗಿದೆ



6. ದಪ್ಪನೆಯ ಮೆದುವಾದ ಹಾಸಿಗೆ



7. ಪರಿಕರಗಳಿದ್ದ ಉನ್ನತ ಮಂಚ



8. ಜಲತಲ್ಪ



9. ಸಾಲಂಕೃತ ಸೋಫಾಮಂಚ



10. ಭೋಗ ಮಂಚ



11. ಕಸೂತಿ ಲೋಡುಗಳ ಸಾಲಂಕೃತ ಮಂಚ



12. ಸುಖ ನಿದ್ರೆಗೆ ವಿಲಾಸ ಸಾಮಗ್ರಿಗಳೊಡನೆ



13. ಅರಸನ ಸುಖತಲ್ಪ



14. ತೂಗು ಮಂಚ

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಭಕ್ತಿ ಭಂಡಾರಿ ಬಸವೇಶ್ವರರ ವಚನಗಳು. ಸಂ. : ಆರ್. ಸಿ ಹಿರೇಮಠ-ಭಕ್ತಸ್ಥಳ ೯೭ನೇ ವಚನ ಪುಟ ೮೨

*೨. ಮಾನಸೋಲ್ಲಾಸ : ಸೋಮೇಶ್ವರ ವಿರಚಿತ ಬಡೋದಾ ೧೯೩೯ ಸಂಪುಟ II ಅಧ್ಯಾಯ ೯ ಮತ್ತು ೧೮ ಶಯ್ಯಾಭೋಗ ಪು. ೯೮-೯೯, ಪು. ೧೪೨-೧೪೪.

*೩. ನಂಜುಂಡನ ರಾಮನಾಥ ಚರಿತೆ : ಸಂಪಾದಕರು ಎಚ್. ದೇವೀರಪ್ಪ.ಮೈಸೂರು
ಭಾಗ i ಅಧ್ಯಾಯ ೩೬" ಪದ್ಯ ೪೮
"ಸೆಳೆಮಂಚ ತುಪ್ಪಳವಾಸಿನ ಚಪ್ಪರ ಮಂಚ
ಶಕುನಿ ಮಂಚ, ನಳನಳಿಸುವ ತೂಗುಮಂಚ
ತೊಳಪ ಕುರಾಡ ಮಂಚಗಳಾ ಸೆಜ್ಜೆಯ
ನಿಳಯದೊಳಗೆ ಕಣ್ಗೆಸೆದವು"

*೪. ಭರತೇಶ ವೈಭವ : ಶಯ್ಯಾಗೃಹ ಸಂಧಿ, ಪದ್ಯ ೨೫-೨೬ "ಕಾಂಚನ ಮಂಚ, ಮಾಣಿಕ ಮಂಚ, ಶ್ರೀಗಂಧ ಮಂಚ, ಪೊಲಮಡಿ ಬೆಳ್ಳಿಮಂಚ, ಪಂಚರತ್ನ ಮಂಚ, ಚಪ್ಪರ ಮಂಚ, ಗುಜ್ಜರಿ ಗಾಲಮಂಚ, ಮೇಲುಪ್ಪರ ಮಂಚ, ಶಕನುತೂಗು ಮಂಚ, ಸೆಳೆಮಂಚ"

*೫. ಪಂಪನ ಆದಿಪುರಾಣ : ಹನ್ನೊಂದನೆ ಸಂಧಿ, ಪದ್ಯ ೭೬

*೬. ಪ್ರವಾಸಿ ಕಂಡ ಇಂಡಿಯಾ : ಎಚ್. ಎಲ್. ನಾಗೇಗೌಡ, ಮೈಸೂರು, ೧೯೭೬ ಸಂ. II ಪು. ೩೦ ಹಾಗೂ ೪೩ (ಪ್ರ. ಇ.)

*೭. ಭೀಮಕವಿಯ ಬಸವಪುರಾಣ : ಕಾಂಡ ೩ ಸಂಧಿ ೧೨ ಪದ್ಯ ೫-೧೬

*೮. ಆದಿಪುರಾಣ ಸಂಧಿ ೫ ಪದ್ಯ ೨೩; ನೇಮಿನಾಥ ಪುರಾಣ ಸಂಧಿ ೪ ಪದ್ಯ ೫೫

*೯. ಮಾನಸೋಲ್ಲಾಸ ಸಂ, ii ಅಧ್ಯಾಯ ೧೮ ಪದ್ಯ ೯೩

*೧೦. ಪ್ರ. ಇ. ಸಂ. ii ಪು. ೪೨



## ೧೫. ಹಂಪೆಯ ಉಬ್ಬು ಚಿತ್ರಗಳಲ್ಲಿ ಜನಸಾಮಾನ್ಯ

ವಿಜಯನಗರದ ವೈಭವವನ್ನು ಸಾರುವ ಹಲವಾರು ದಾಖಲೆಗಳು ಇದ್ದರೂ, ಅಂದಿನ ಜನಸಾಮಾನ್ಯರ ಜೀವನದ ಮೇಲೆ ಬೆಳಕು ಚೆಲ್ಲುವ ವಿವರಗಳಿಗೆ ಅವುಗಳಲ್ಲಿ ಆಸ್ಪದ ಕೊಟ್ಟಿಲ್ಲ. ವಿಜಯನಗರದ ಚರಿತ್ರೆ ಓದಿದವರಿಗೆ ಪೋರ್ಚುಗೀಸ್ ಪ್ರವಾಸಿ ಡುಮಿಂಗೋ ಪೇಸ್. ಚಿರಪರಿಚಿತ ಹೆಸರು. ಕೃಷ್ಣದೇವರಾಯನ ಆಳುವಿಕೆಯ ದಿನಗಳಲ್ಲಿ (ಕ್ರಿ.ಶ. ೧೫೨೦) ಬಂದ ಈತ, ರಾಜ್ಯದಲ್ಲಿ ಸುತ್ತಾಡುವುದರ ಜೊತೆಗೆ ಪ್ರತ್ಯಕ್ಷ ತಾನು, ಅನುಭವಿಸಿದ ಹಲವಾರು ಘಟನೆಗಳನ್ನು ವಿವರಿಸಿದ್ದಾನೆ. ಮಹಾನವಮಿಯ ಉತ್ಸವದಲ್ಲಿ ಪಾಲ್ಗೊಂಡು, ವಿಶೇಷ ಅನುಮತಿ ಪಡೆದು ಅರಮನೆಯ ಒಳಗೂ ಪ್ರವೇಶ ದೊರಕಿಸಿ, ಮಧ್ಯಯುಗದ ಭಾರತಕ್ಕೇ ಅಪೂರ್ವವಾದ ಅತ್ಯಮೂಲ್ಯ ಕೆಲವು ವಿಚಾರಗಳನ್ನು ಮುಂದಿನ ಪೀಳಿಗೆಗೆ ಬಿಟ್ಟು ಹೋಗಿದ್ದಾನೆ. ಜೊತೆಗೆ ಆತನ ವೈಭವೋಪೇತ ವರ್ಣನೆ ಕೈಬಿಟ್ಟರೂ, ಜನಸಾಮಾನ್ಯರ ಚಿತ್ರಣವನ್ನೂ ಆತ ಕೆಲವುಟ್ಟಿಗೆ ನೀಡಿರುವುದು ಅವನ ವೃತ್ತಾಂತ ಓದಿದಾಗ ಕಂಡು ಬಾರದಿರದು.

ಪ್ರತಿ ಶುಕ್ರವಾರ ಸೇರುವ ಸಂತೆಯನ್ನು ವರ್ಣಿಸುತ್ತ ಕೃಷಿಕರು, ತಾವು ಬೆಳೆಸಿದ ಅಕ್ಕಿ, ಗೋದಿ, ಜವೆಗೋಧಿ, ಹೆಸರು, ಎಣ್ಣೆಕಾಳು, ಕಡಲೆಕಾಳು ಇತ್ಯಾದಿಗಳನ್ನು ಅತಿ ಕಡಿಮೆ ಬೆಲೆಗೆ ಮಾರುವದನ್ನು ಪೇಸ್‌ನು ಉಲ್ಲೇಖಿಸಿದ್ದಾನೆ. ತೀರ ಸಣ್ಣ ನಾಣ್ಯವಾಗಿದ್ದ ೧ ಪಣಕ್ಕೆ* ಮೂರು ದ್ರಾಕ್ಷಿಯ ಗೊಂಚಲು ಇಲ್ಲವೆ ಹತ್ತು ದಾಳಿಂಬಗಳನ್ನು ಕೊಳ್ಳಬಹುದಾಗಿತ್ತಂತೆ! ಮಾಂಸಾಹಾರಿಗಳು ಯಥೇಷ್ಟವಾಗಿ ತಿಂದು ತೇಗುವಷ್ಟು ಪಶು-ಪಕ್ಷಿಗಳು ಅತಿ ಅಗ್ಗದ ಬೆಲೆಗೆ ಲಭ್ಯವಿದ್ದವು. ಒಂದು ಪಣಕ್ಕೆ ೩ ಕುಕ್ಕುಟ ಇಲ್ಲವೇ ೨ ಮೊಲ ಅಥವಾ ಜೀವಂತ ಹಕ್ಕಿಗಳನ್ನು ಬೇಕಾದಷ್ಟು ಕೊಳ್ಳಬಹುದಾಗಿತ್ತು. ಪಾರಿವಾಳಗಳನ್ನು ಲೆಕ್ಕ ಮಾಡುವ ಗೋಜಿಗೆ ಹೋಗದೇ ಕೊಟ್ಟು ಬಿಡುತ್ತಿದ್ದರಂತೆ![೧] ಕುರಿ ಅಥವಾ ಹಂದಿ ನಾಲ್ಕೈದು ಪಣಕ್ಕೆ ಸಿಗುತ್ತಿದ್ದವು. ಇದರಿಂದಾಗಿ ಇವನ್ನೆಲ್ಲ ಬೆಳೆಯುತ್ತಿದ್ದ ಅಥವಾ ಸಾಕುತ್ತಿದ್ದ ಜನಸಾಮಾನ್ಯನ ದೈನಿಕ, ಮಾಸಿಕ, ಅಥವಾ ವಾರ್ಷಿಕ ಉತ್ಪನ್ನ ಎಷ್ಟು ಇದ್ದಿರಬಹುದು? ಎಂದು ಸುಲಭವಾಗಿಯೇ ಊಹಿಸಬಹುದಾಗಿದೆ. ಇವರೆಲ್ಲರೂ ಬಡವರಾಗಿಯೇ ಉಳಿದಿದ್ದರಿಂದ ಸೈನ್ಯಾಧಿಕಾರಿಗಳು, ಉಚ್ಚ ಅಧಿಕಾರಿಗಳು, ಪಾಳಯಗಾರರು, ರಾಜ ಮಹಾರಾಜರುಗಳೆಲ್ಲ ಧನಿಕರಾಗಲು ಸಾಧ್ಯವಾಯಿತು, ಎಂಬುದು ನಿರ್ವಿವಾದ. ಪೇಸ್, ವಿವಿಧ ಸೇನೆಗಳ ಮುಖ್ಯಸ್ಥರ ವಾರ್ಷಿಕ ಉತ್ಪನ್ನವನ್ನು ಉಲ್ಲೇಖಿಸಲು ಮರೆತಿಲ್ಲ. ವರ್ಷಕ್ಕೆ ಎರಡು ಸಹಸ್ರ ವರಹೆಗಳಿಂದ ಒಂದುವರೆ ಲಕ್ಷ ವರಹಗಳವರೆಗೆ ಇತ್ತು,

ಎಂದರೆ ಅವರ ಸಿರಿವಂತಿಕೆಯ ಕಲ್ಪನೆ ಬರುತ್ತದೆ. ಅವರುಗಳ ಸೈನ್ಯದ ಪಾಲನೆ ಪೋಷಣೆಗೆ ಬೇರೆಯಾಗಿಯೇ ಮೊತ್ತವನ್ನು ಕೊಡಲಾಗುತ್ತಿತ್ತು. ನವರಾತ್ರಿಯ ಕೊನೆಯ ದಿನ, ಆಳರಸನಿಗೆ ಪತ್ತು ಲಕ್ಷ, ಐದು ನೂರು ಹಾಗೂ ಸಾವಿರ ಸುವರ್ಣ ವರಹಗಳನ್ನು ಪ್ರಜೆಗಳು ಕಾಣಿಕೆಯ ರೂಪದಲ್ಲಿ ಕೊಡಲೇಬೇಕಿತ್ತು. ಇದರಿಂದ ನಾಡಿನ ಸಂಪತ್ತೆಲ್ಲ ಕೆಲವರಿಗೇ ಸೀಮಿತವಾಗಿತ್ತು, ಎಂಬುದನ್ನು ಬೇರೆ ಹೇಳಬೇಕಾದದ್ದೇ ಇಲ್ಲ. ಬೇರೊಂದು ಸಂದರ್ಭದಲ್ಲಿ ಅರಸನು ದೊಡ್ಡ ಕೆರೆಯೊಂದನ್ನು ಕಟ್ಟಿಸುವದಕ್ಕಾಗಿ ಇಪ್ಪತ್ತು ಸಹಸ್ರ ಜೀತದಾಳುಗಳನ್ನು ನೇಮಿಸಿದ ವಿಚಾರ ಬರುತ್ತದೆ.[೨] ಅಂದಿನ ದಿನಗೂಲಿಯೆಂದರೆ ಎರಡೂಟ, ತುಂಡುಬಟ್ಟೆಯಾಚೆ (ಹೆಚ್ಚೆಂದರೆ ಗೋಟಡಿಕೆ ಎಲೆ) ಹೋಗುತ್ತಿರಲಿಲ್ಲ. ವಿಠ್ಠಲ ದೇವಾಲಯಕ್ಕೆ ಬ್ರಾಹ್ಮಣರನ್ನು ಬಿಟ್ಟರೆ ಪ್ರವೇಶ ಇರಲಿಲ್ಲ ಎಂದು ಹೇಳಿದ ಪೇಸ್ , ದ್ವಾರ ಪಾಲಕರಿಗೆ "ಏನೋ ಕೊಂಚ": ಕೊಟ್ಟೆನೆಂದು ಒಳಗೆ ಬಿಟ್ಟರು! ಎಂದು ಹೇಳಿದ್ದಾನೆ.[೩] ಅವರು ಸುಸ್ಥಿತಿಯಲ್ಲಿದ್ದರೆ ಈ ವಿದೇಶಿಯನೆದುರು ಸಣ್ಣ ನಾಣ್ಯಕ್ಕೆ ಕೈ ಒಡ್ಡಿ ಒಳಗೆ ಬಿಡುತ್ತಿದ್ದರೇ ?

ನಾವು ಹಿರಿಯರ ಭಾವಚಿತ್ರಗಳನ್ನು ಗಾಜು, ಕಟ್ಟು ಹಾಕಿ ಕಾದಿರಿಸುವಂತೆ, ವಿಜಯನಗರದ ಶಿಲ್ಪಿಗಳು, ಅಂದಿನ ಜನಸಾಮಾನ್ಯರನ್ನು ಮರೆಯದೇ ದೇವಾಲಯ ಮತ್ತು ಇನ್ನಿತರ ಕಟ್ಟಡಗಳ ಗೋಡೆ, ಕಂಬ ನೆಲೆಗಟ್ಟುಗಳ ಮೇಲೆ ಕೊರೆದು ಕಾದಿರಿಸಿದ್ದಾರೆ. ಕೆಲವು ಕಟ್ಟಡಗಳು, ಕಷ್ಟದಿಂದ ಉಸಿರು ಹಿಡಿದು ಬದುಕಿಕೊಂಡರೆ ಹೆಚ್ಚಿನವು ಐತಿಹಾಸಿಕ ಘಟನೆಗಳಿಗೆ ಮಣಿದು ಕೊನೆಯುಸಿರು ಎಳೆದಿವೆ. ಅಳಿದುಳಿದ ಶಿಲ್ಪ, ಉಬ್ಬು ಚಿತ್ರಗಳನ್ನು ಕೂಲಂಕಷವಾಗಿ ಅಭ್ಯಸಿಸಿದರೆ, ಅಂದಿನವರ ಜೀವನಕ್ರಮದ ಬಗ್ಗೆ ಸ್ಥೂಲ ಕಲ್ಪನೆ ಬರಲು ಸಾಧ್ಯ. ವಿಜಯನಗರ ಕಾಲೀನ ಹೆಚ್ಚಿನ ಕಟ್ಟಡಗಳು, ಚಿತ್ರ ಪಟ್ಟಿಕೆಗಳನ್ನು ಹೊತ್ತು ನಿಂತಿವೆ. ಹೊಯ್ಸಳರ ದೇವಾಲಯಗಳ ಮೇಲೂ ಇಂಥ ಉಬ್ಬು ಚಿತ್ರ - ಪಟ್ಟಿಕೆಗಳು ಇದ್ದರೂ, ರಾಮಾಯಣ, ಮಹಾಭಾರತ, ಶಿವಪುರಾಣ, ಭಾಗವತ ಗ್ರಂಥಗಳನ್ನು ಆಧರಿಸಿ, ಆಯಾ ಅಧಿದೇವತೆಗೆ ಸಂಬಂಧಿತ ಕಥಾನಕ ಇಲ್ಲವೇ ಹೂ-ಬಳ್ಳಿ, ಪಶು, ಪಕ್ಷಿಗಳನ್ನು ಕೊರೆಯಲಾಗಿದೆ. ಹೊಯ್ಸಳ ಶಿಲ್ಪಿಗಳು, ತಮ್ಮ ಕಲಾಕೃತಿಗಳಿಗೆ ಮೃದು ಕರಿಶಿಲೆಯನ್ನು ಬಳಸಿದರೆ, ವಿಜಯನಗರದ ಗಂಡುಗಲಿ ಮೇಸ್ತ್ರಿಗಳು, ಗಟ್ಟಿಯಾದ ಬಿರುಪಾಷಾಣಕ್ಕೆ ಜೀವ ತುಂಬುವುದರಲ್ಲಿ ಯಶಸ್ವಿಯಾಗಿದ್ದಾರೆ. ಇಂಥ ಅನೇಕಾನೇಕ ಶಿಲ್ಪಗಳು ಕಾಮಲಾಪುರ, ಮಾಗಳಿ, ಸೊಂಡೂರು, ಹೂವಿನ ಹಡಗಲಿ, ಲೇಪಾಕ್ಷಿ, ಪೆನುಗೊಂಡ, ತಂಜಾವೂರು, ಶ್ರೀರಂಗಂ, ಮಧುರೆ, ಕುಂಭಕೋಣಂ, ಶೃಂಗೇರಿ, ಶ್ರೀಶೈಲಗಳಲ್ಲಿ ಕಂಡು ಬಂದರೂ ಈ ಪ್ರಬಂಧಕ್ಕೆ ವಿಶ್ವವಿಖ್ಯಾತಿಯ ಹಂಪಿಯನ್ನು ಮಾತ್ರ ವಿವೇಚಿಸಲಾಗಿದೆ.

ಮಹಾನವಮಿಯ ದಿಬ್ಬವನ್ನು ಕೃಷ್ಣದೇವರಾಯನ ದಿಗ್ವಿಜಯಗಳ ಸಂಕೇತವಾಗಿ ಕ್ರಿ.ಶ. ೧೫೧೩ರಲ್ಲಿ ರಚಿಸಲಾಯಿತಷ್ಟೇ? ಇಂದಿಗೂ ತಕ್ಕಮಟ್ಟಿಗೆ ಗಟ್ಟಿಮುಟ್ಟಾಗಿ ಉಳಿದಿರುವ ಅದರ ಅಡಿಪಾಯದ ಹೊರಮೈ ಮೇಲೆ, ಏಳೆಂಟು ಸ್ತರಗಳಲ್ಲಿ ಉಬ್ಬು ಚಿತ್ರಗಳ ಪಟ್ಟಿಕೆಗಳನ್ನು ಕಾಣಬಹುದಾಗಿದೆ. ಮೇಲ್ನೋಟಕ್ಕೆ ಕುದುರೆಯ ಚಿತ್ರವೆಂದು ಕಾಣುವ ಪಟ್ಟಿಕೆಯಲ್ಲಿ ಉದ್ದ

ಕೂದಲನ್ನು ಬೆಳೆಸಿದ ತರಬೇತಿಗಾರನು, ಕಾವಲ ಕಿರುಗಚ್ಚೆಯಲ್ಲಿದ್ದು ಬಲಿಷ್ಠವಾದ ಅಶ್ವವೊಂದನ್ನು ಪುಸಲಾಯಿಸಿ ಕರೆದೊಯ್ಯುತ್ತಿದ್ದಾನೆ. ಈ ಪಟ್ಟಿಕೆಯ ಇನ್ನೊಂದು ಭಾಗ, ಅಂದಿನ ಹಳ್ಳಿಗಾಡಿನ ಛಾಯಾಚಿತ್ರದಂತೆ ಭಾಸವಾಗುತ್ತದೆ. ಹುಲುಸಾಗಿ ಬೆಳೆದ ಮರದಡಿಯಲ್ಲಿ ಆಡೊಂದು ಮೇಯುತ್ತಿದೆ. ಹತ್ತಿರದಲ್ಲಿಯೇ ಅಶ್ವಪೋಷಕನು ಅದರ ತಲೆಯನ್ನು ನೇವರಿಸುತ್ತ ತನ್ನೊಂದಿಗೆ ನಡೆದುಕೊಳ್ಳುವ ರೀತಿಯನ್ನು ಹೇಳಿಕೊಡುತ್ತಿರುವಂತೆ ಕಟೆಯಲಾಗಿದೆ. ಇನ್ನೊಂದರಲ್ಲಿ, ಅಶ್ವಾರೋಹಿಯೊಬ್ಬ ಕೂದಲ ಜಡೆ ಬಿಟ್ಟಿಕೊಂಡಿದ್ದಾನೆ. ತಲೆಗೆ ಅಂಗವಸ್ತ್ರ ಕಟ್ಟಿ ಕಿರುಪಂಚೆ ಉಟ್ಟು, ಇದ್ದಾನೆ. ಆನೆಗಳನ್ನು ಪಳಗಿಸುವ ಒಂಟೆಗಳನ್ನು ಸಾಕುವವರೆಲ್ಲ ಅತ್ಯಲ್ಪ ಉಡುಪಿನಲ್ಲಿದ್ದಾರೆ. ಬೇಟೆಯ ಪಟ್ಟಿಕೆಯ ಶಿಲ್ಪವೊಂದು ಅಪೂರ್ವವಾಗಿದೆ. ಕೇಶರಾಶಿಯನ್ನು ಎತ್ತರಿಸಿ ಮುಡಿಕಟ್ಟಿ ಒಬ್ಬ, ಅದಕ್ಕೊಂದು ಹೂವಿನದಂಡೆ ಸುತ್ತಿದ್ದಾನೆ. ಕೊರಳಿನಿಂದ ಎಂಥದೋ ಅಗ್ಗದ ಸರ ತೂಗುಬಿದ್ದಿದೆ. ತುಂಡು ಕಚ್ಚೆಯುಟ್ಟು ಜೋಡಿ ನಾಯಿಗಳೊಂದಿಗೆ ಕಾಡಿಗೆ ಹೊರಟಿದ್ದಾನೆ. ಅಲ್ಲಿ, ಬಿಲ್ಲಿಗೆ ಬಾಣವೇರಿಸಿ, ನಾಗಾಲೋಟದಲ್ಲಿ ಓಡುವ ಜಿಂಕೆಯನ್ನು ಹೊಡೆದು ಕೆಡುವುದರಲ್ಲಿದ್ದಾನೆ. ಅವನ ಗುಂಪಿನ ಇನ್ನಿತರ ಬೇಟೆಗಾರರು ಕಾಡು ಹಂದಿ, ಮೊಲಗಳನ್ನು ತಿವಿದು ಆಹುತಿ ತೆಗೆದುಕೊಳ್ಳುವ ಯತ್ನದಲ್ಲಿ ಮೈಮರೆತಿದ್ದಾರೆ. ಸಾಮಾನ್ಯ ಸ್ತ್ರೀಯರ ಉಡಿಗೆ, ತೊಡಿಗೆಯ ಪರಿಚಯ ನೀಡುವ ಅನೇಕ ಚಿತ್ರ ಪಟ್ಟಿಕೆಗಳನ್ನು ಇಲ್ಲಿ ಕಾಣಬಹುದು. ಗೃಹಕೃತ್ಯದಲ್ಲಿ ತೊಡಗಿದ ಸ್ತ್ರೀಯರು ಮೈಗೆ ಅಂಟುವಂತೆ ಸೀರೆ ಯುಟ್ಟು, ಒನಕೆಯಿಂದ ಬತ್ತ ಕುಟ್ಟಿ ಅಕ್ಕಿ ಮಾಡುವುದರಲ್ಲಿ ಮೈಮರತಿದ್ದಾರೆ. ಅವರು ಬಳಸುವ ಒರಳು, ಕರ್ನಾಟಕದ ಕರಾವಳಿಯಲ್ಲಿ ಇಂದಿಗೂ ಪ್ರಚಲಿತವಿರುವಂತೆ ನೆಲದಲ್ಲಿಯೇ ಮಾಡಿದ್ದು ಇರದೇ ನೆರೆಯ ಆಂಧ್ರಪ್ರದೇಶದಲ್ಲಿಯಂತೆ ಪ್ರತ್ಯೇಕವಾದ ಕೊರಡಿನಿಂದ ನಿರ್ಮಿತವಾದ ಉಪಕರಣವಾಗಿದೆ. ಚಲ್ಲಣದ, ವೀರಗಾಸೆಯ ಯುವತಿಯರು ಕೈಯಲ್ಲಿ ಚಿಕ್ಕ ಲಾಠಿಗಳನ್ನು ಹಿಡಿದು ಕವಾಯತಿನಲ್ಲಿ ಮೈಮರೆತಿದ್ದಾರೆ. ಇದರಂತೆ ಮಕ್ಕಳ ಲಾಲನೆಯಲ್ಲಿ ತೊಡಗಿದವರು, ಅಲಂಕಾರ ಮಾಡಿಕೊಂಡು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿರುವವರು ಹರಟೆಯಲ್ಲಿ ಮೈಮರೆತ ಹಿರಿಯರು ಚಿತ್ರಿತರಾಗಿದ್ದಾರೆ. ಕೋಲಾಟದಲ್ಲಿ ತೊಡಗಿದ ಹೆಂಗಳೆಯರೂ ಜನಸಾಮಾನ್ಯರ ಪ್ರತಿನಿಧಿಗಳೇ ಎಂಬುದಕ್ಕೆ ಅವರ ಮಿತವಾದ ಆಭರಣ, ಅಲಂಕಾರಗಳು ಸಾಕ್ಷಿಯಾಗಿವೆ.

ಹಜಾರ ರಾಮಸ್ವಾಮಿ ದೇವಾಲಯದ ಪ್ರಾಕಾರದ ಗೋಡೆಯ ಹೊರಭಾಗವನ್ನು ಐದು ಪಟ್ಟಿಕೆಗಳಲ್ಲಿ ವಿಂಗಡಿಸಲಾಗಿದೆ. ಬಲಗೈಯಲ್ಲಿ ಬಾಣವನ್ನು ಹಿಡಿದು ಬಿಲ್ಲನ್ನು ಎಡ ಹೆಗಲಿಗೇರಿಸಿ ಧನುರ್ವಿದ್ಯೆಯನ್ನು ಕರಗತಮಾಡಿಕೊಳ್ಳಲು ಹೊರಟ ಹೆಂಗೆಳೆಯರು, ಯೋಗಾಸನ ಹಾಕುವವರು, ಓಕುಳಿಮಾಡಿ ವಿನೋದಗಳಲ್ಲಿ ಪಾಲುಗೊಂಡವರು, ನಾಟ್ಯ ತರಬೇತಿ ಯಲ್ಲಿದ್ದವರು, ರಸಿಕ ಕ್ಷಣಗಳಲ್ಲಿ ಮೈಮರೆತವರು, ಇಲ್ಲಿದ್ದಾರೆ. ಗಂಡು ಹೆಣ್ಣು ಎಂಬು ತಾರತಮ್ಯವಿಲ್ಲದೆ ದೈನಂದಿನ ಚಟುವಟಿಕೆಗಳಲ್ಲಿ ಸಮನಾಗಿ ಅವರು ಪಾಲುಗೊಂಡುದು ವೈಶಿಷ್ಟ್ಯ. ಹೆಂಗಳೆಯರು ನರ್ತಿಸುವಾಗ ಕೊಳಲು, ಡೋಲು ಮೃದಂಗಗಳನ್ನು ಪುರುಷರು ನುಡಿಸಿದರೆ, ಸಂಗೀತ ಮೇಳದಲ್ಲಿ ಗಂಡು ಹೆಣ್ಣು ಸಮನಾಗಿ ಪಾಲ್ಗೊಳ್ಳುತ್ತಿದ್ದಾರೆ. ಹೋಳಿಹಬ್ಬ

ಆಚರಣೆಯ ದೃಶ್ಯದಲ್ಲಿ ಓಕುಳಿಯಾಡಿ ಆನಂದಿಸುತ್ತಿದ್ದಾರೆ. ಈ ಎಲ್ಲ ಉಬ್ಬು ಚಿತ್ರಗಳಲ್ಲಿ ರೂಪಿತಗೊಂಡಿರುವವರು ರಾಜರಾಣಿಯರಲ್ಲ. ಅಧಿಕಾರಿ ಸೇನಾಧಿಪತಿಗಳಲ್ಲ, ಊರ ಪ್ರತಿಷ್ಠಿತರೂ ಅಲ್ಲ! ಎಲ್ಲರೂ ಜನಸಾಮಾನ್ಯರು. ಶತಕಗಳಿಂದ ತಮ್ಮ ದೈನಂದಿನ ಚಟುವಟಿಕೆಗಳಲ್ಲೇ ನಲಿವು ತೋರುತ್ತ ಅದನ್ನು ಹೊರಜಗತ್ತಿಗೆ ಸಾರುತ್ತ ನಿಂತಿದ್ದಾರೆ. ಇಂಥ ಪಟ್ಟಿಕೆಗಳಾಗಲಿ ಅವುಗಳ ಶಿಲ್ಪಗಳಾಗಲಿ, ಅಲ್ಲೊಂದು ಇಲ್ಲೊಂದು ಇತರ ಕಟ್ಟಡಗಳಲ್ಲಿಯೂ ಕಾಣಸಿಗುತ್ತವೆ. ಶ್ರೀ ವಿಠ್ಠಲ, ಶ್ರೀ ಕೃಷ್ಣ ಮತ್ತು ಅಚ್ಯುತರಾಯನ ಹೆಸರಿನಲ್ಲಿ ಗುರುತಿಸಲ್ಪಡುವ ದೇವಾಲಯಗಳಲ್ಲೂ ಕೆಲವನ್ನು ಕಾಣಬಹುದಾಗಿದೆ. ಕಲ್ಲಿನ ರಥದ ಅಡಿಪಾಯದ ಸುತ್ತಲೂ ಚಿತ್ರ ಪಟ್ಟಿಕೆಗಳನ್ನು ಜೋಡಿಸಲಾಗಿದೆ.

ಹಂಪಿಯ ಕಟ್ಟಡಗಳ ಗೋಡೆಗಳಲ್ಲಿ, ಕಂಬಗಳಲ್ಲಿ, ಮಾಡಿನಲ್ಲಿ, ಒಂಟೆ ಚಿತ್ರಗಳನ್ನು ನಿರ್ಮಿಸಲಾಗಿದೆ. ಅಂದಿನವರ ಸಾಮಾಜಿಕ ಜೀವನದ ಅಧ್ಯಯನದಲ್ಲಿ ಇವು ಮಹತ್ವದ ಮಾಹಿತಿಯನ್ನು ಒದಗಿಸುತ್ತವೆ. ವಿಜಯ ವಿಠ್ಠಲ ದೇವಾಲಯದ ಕಲ್ಯಾಣ ಮಂಟಪದ ಪ್ರವೇಶ ದ್ವಾರದಲ್ಲಿ ಸಿಂಹಾರೋಹಿಯ ಶಿಲ್ಪ ಒಂದಿದೆ. ಅವನನ್ನು ಕಣ್ಣಿಟ್ಟು ನೋಡಿದರೆ ಅಂದಿನವರ ವೇಷ ಭೂಷಣಗಳು ಕಣ್ಣಿಗೆ ಕಟ್ಟಿದಂತೆ ಆಗುತ್ತದೆ. ಆ ಕಾಲಕ್ಕೆ ತುಂಬ ಪ್ರಚಲಿತವಿದ್ದ ಎತ್ತರ ಆದರೆ ಹಗುರವಾಗಿದ್ದ 'ಕುಲಾಯಿ' ಎಂಬ ಟೋಪಿ ಅವನ ಶಿರವನ್ನು ಅಲಂಕರಿಸಿದರೆ ಕರ್ಣಕುಂಡಲಗಳು ದೊಡ್ಡವಾಗಿಯೇ ಎದ್ದು ಕಾಣುತ್ತವೆ. ಗಂಡುಗಲಿ ತಾನು! ಎಂದು ಮೀಸೆ ಹೊತ್ತು, ವಿಷ್ಣುಭಕ್ತ ಎನ್ನುವದರ ಸಂಕೇತವಾಗಿ ಹಣೆಗೆ ನಾಮ ಎಳೆದು ಕೊಂಡಿದ್ದಾನೆ. ಕೊರಳಿಗೆ ಇದ್ದ ಸರಕ್ಕೆ ಲಾಕೆಟ್ ಒಂದು ಜೋತು ಬಿದ್ದಿದೆ. ಉದ್ದ ತೋಳಿನ ಕೋಟಿನಂತಹ ಮೇಲಂಗಿಯ ಮೇಲೆ ಸೊಂಟದಪಟ್ಟಿ ಹಾಯಿಸಿ ಅದಕ್ಕೆ ಚಿಕ್ಕ ಕಠಾರಿಯೊಂದನ್ನು ನೇತು ಹಾಕಿದ್ದಾನೆ. ಪಂಚೆಯುಟ್ಟ ಕಾಲಿಗೆ ಕಡಗಗಳಿವೆ. ಬರಿಗಾಲಿನಲ್ಲಿದ್ದದ್ದು ಅವನ ವೈಶಿಷ್ಟ್ಯ. ಅದೇ ಸ್ಥಳದಲ್ಲಿ ಇನ್ನೊಂದೆಡೆ ಮಹಮ್ಮದೀಯ (ಮೂರ್‌ನಿರಬಹುದೇ?) ಅಶ್ವಾರೋಹಿಯನ್ನು ನಿಲ್ಲಿಸಲಾಗಿದೆ. ಅವನು ಗಡ್ಡ ಬೆಳೆಸಿ ಚಪ್ಪಟೆ ಹ್ಯಾಟಿನಂತಹ ಟೋಪಿಧರಿಸಿ ಕಾಲಲ್ಲಿ ತುದಿ ಮೊನಚಾದ ಶೂ ಧರಿಸಿದ್ದಾನೆ. ವಿಜಯ ನಗರವು ಹಿಂದುಗಳ ಸಾಮ್ರಾಜ್ಯವಾಗಿದ್ದರೂ ಉಳಿದ ಧರ್ಮದವರನ್ನು ಸಮಾನವಾಗಿ ನಡೆಸಿಕೊಳ್ಳಲಾಗುತ್ತಿತ್ತು ಎಂದು ಸಾರುವ ಅನೇಕಾನೇಕ ಶಿಲ್ಪಗಳನ್ನು ಎಲ್ಲ ಕಡೆಯಲ್ಲಿಯೂ ಕಾಣಬಹುದಾಗಿದೆ. ಇದೇ ದೇವಾಲಯದ ಕಂಬವೊಂದಕ್ಕೆ ಆತುಕೊಂಡು ನಿಂತ ವಾದ್ಯಗಾರರನ್ನು ನೋಡುತ್ತಿದ್ದಂತೆ ಅವನೊಂದು ಜೀವಂತ ಪುತ್ಥಳಿಯೇ? ಎಂದು ವಿಸ್ಮಯಪಡುವಷ್ಟು ನೈಜವಾಗಿ ಕಟೆಯಲ್ಪಟ್ಟಿದ್ದಾನೆ. ತಲೆಯನ್ನು ಕಲಾತ್ಮಕವಾಗಿ ರುಮಾಲೊಂದರಿಂದ ಸುತ್ತಲಾಗಿದೆ. ಕಿವಿ, ಕೊರಳು, ಕೈ ಕಾಲುಗಳಲ್ಲಿ ಆಭರಣಗಳಿವೆ. ಹೆಚ್ಚಿನ ಮೈ ಮಣಿಸಲು ಅನುಕೂಲವಾಗಲೆಂದು ಕೈ ಬರಿದಾಗಿಯೇ ಇದೆ. ಎಡಭುಜದಿಂದ ನೇತು ಹಾಕಿದ ಡೋಲನ್ನು ಭಾವಪೂರ್ಣವಾಗಿ ನುಡಿಸುವದರಲ್ಲಿ ಮೈಮರೆತಿದ್ದಾನೆ.

ಹೆಂಗಳೆಯರ ಉಡಿಗೆ-ತೊಡಿಗೆಗಳನ್ನು ಪರಿಚಯಿಸುವ ಉಬ್ಬು ಶಿಲ್ಪಗಳಿಗೆ ಏನೇನೂ ಕೊರತೆ ಇಲ್ಲ. ಕೃಷಿಕ ಗೃಹಿಣಿಯಂತೆ ತೋರುವ ಒಬ್ಬಾಕೆ ಉತ್ಸವ ಸಂದರ್ಭವೊಂದರಲ್ಲಿ

ಕಂಜೀರ ಬಾರಿಸುತ್ತಿರುವ ಅತ್ಯಂತ ನೈಜವೆನಿಸುವ ಶಿಲ್ಪ, ವಿಜಯ ವಿಠ್ಠಲ ದೇವಾಲಯವನ್ನು ಅಲಕಂರಿಸಿದೆ. ಉದ್ದ ಕೂದಲನ್ನು ಹಿಮ್ಮಡಿಯಾಗಿ ಕಟ್ಟಿಕೊಂಡಿದ್ದಾಳೆ. ವರ್ತುಲಾಕಾರದ ಭವ್ಯ ಬೆಂಡೋಲೆಗಳನ್ನು ಕಿವಿಯಲ್ಲಿ ಧರಿಸಿದ್ದಾಳೆ. ಸೀರೆಯನ್ನು ನಡುವಿಗೆ ಸಿಕ್ಕಿಸಿಕೊಂಡು ನಿರಿಗೆಗಳು ಕಲಾತ್ಮಕವಾಗಿ ಪಸರಿಸಿ ನಿಲ್ಲುವಂತೆ ಉಟ್ಟಿದ್ದಾಳೆ. ಉಬ್ಬಿದೆದೆ ಮರೆಮಾಚುವಂತೆ ಸೆರಗು ಸಮನಾಗಿ ಹರಡಿಕೊಂಡಿದೆ. ತೋಳಬಂದಿ, ಕೈಕಡಗಗಳಷ್ಟೇ ಅವಳ ಆಭರಣಗಳು. ಹುಡುಕ್ಕ ನುಡಿಸುತ್ತಿರುವ ಯುವತಿಯ ತುಂಬಿದ ಅಂಗಾಂಗಗಳೇ ಆ ಆಕರ್ಷಣೆ. ಒಂದೂನಿರಿಗೆ ಬಾರದ ತುಂಡು ಸೀರೆಯನ್ನು ಮಾಟವಾಗಿ ಉಟ್ಟಿದ್ದಾಳೆ. ತೊಟ್ಟ ಆಭರಣಗಳೂ ಅವಳೊಬ್ಬ ಜನಸಾಮಾನ್ಯಳೆಂದೇ ಸೂಚಿಸುತ್ತವೆ. ಬೇಟೆಗಾತಿಯನ್ನು ಚಿತ್ರಿಸುವ ವೇಷ-ಭೂಷಣ ಇನ್ನೂ ರೋಚಕವಾಗಿದೆ. ವರ್ಣಗಳಿಂದ ರಚಿತವಾದ ಕಿರೀಟವು ತಲೆಯನ್ನು ಅಲಂಕರಿಸಿದರೆ ಕಾಡಿನ ಹೂಗಳನ್ನು ಕಿವಿಗೆ ಸಿಗಿಸಿಕೊಂಡಿದ್ದಾಳೆ. ಪರ್ಣಗಳನ್ನು ಜೋಡಿಸಿದ ಉಡುಗೆ ನಡುವನ್ನು ಮುಚ್ಚಿದೆ. ಉಳಿದ ಆಭರಣಗಳು ಕಾಡಿನ ಸಾಮಗ್ರಿಯವೇ ಇರಲು ಸಾಕು! ಬಲಗೈಯಲ್ಲಿ ಬಾಣ. ಎಡಗೈಯಲ್ಲಿ ತನಗಿಂತ ದೀರ್ಘವಾದ ಬಿಲ್ಲನ್ನು ಎತ್ತಿಹಿಡಿದಿದ್ದಾಳೆ. ಸಮಕಾಲೀನ ಸಾಹಿತ್ಯದಲ್ಲಿ ಬೇಡತಿಯರ ವರ್ಣನೆ ವಿಪುಲವಾಗಿ ದೊರೆಯುತ್ತದೆ. ಹರಿದಾಸರನ್ನು ನೆನಪಿಸುವ ಪುರುಷ ವಿಗ್ರಹವೊಂದು ಏಕತಾರಿಯನ್ನು ಮೀಟುತ್ತ ದೇವರ ನಾಮ ಹಾಡುತ್ತ ಕುಣಿಯುವುದರಲ್ಲಿ ತನ್ನನ್ನು ತಾನು ಮರೆತಂತಿದೆ. ಕೊರಳಲ್ಲಿ ತುಳಸಿ ಮಾಲೆ, ಕಾಲುಗಳಿಗೆ ಗೆಜ್ಜೆಯಂತಹ ಒಡವೆ ಕಾಣುತ್ತದೆ. ಪ್ರೇಯಸಿಯನ್ನು ಬಾಹು ಬಂಧನದಲ್ಲಿ ಹಿಡಿದ ಯೋಧನು ಅಂದಿನ ಪದ್ಧತಿಯಂತೆ ಕಿರಿದಾದ ಬಟ್ಟೆ ತೊಟ್ಟರೂ ಎತ್ತರವಾದ ಕುಲಾಯಿ ಧರಿಸಲು ಮರೆತಿಲ್ಲ!

ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ಅಳಿದುಳಿದುಕೊಂಡ ವಿಜಯನಗರ ಕಾಲದ ಕಟ್ಟಡಗಳಲ್ಲಿ ಅಸಂಖ್ಯಾತ ಉಬ್ಬು ಚಿತ್ರಗಳಿವೆ. ಇವುಗಳಲ್ಲಿ ರೂಪಗೊಂಡ ವಿಗ್ರಹಗಳ ಕೇಶಾಲಂಕಾರ, ಬಟ್ಟೆ ಬರೆ, ಒಡವೆಗಳನ್ನು ಅಭ್ಯಸಿಸಿ ಗುರುತಿಸಿದರೆ ಅಂದಿನವರ ಸಾಮಾಜಿಕ ಜೀವನದ ಮೇಲೆ ಹೊಸ ಬೆಳಕನ್ನು ಬೀರಬಹುದಾಗಿದೆ. ಇದರ ಜೊತೆಗೆ ಸಮಕಾಲೀನ ಭಿತ್ತಿ-ಚಿತ್ರಗಳಲ್ಲಿ ಮತ್ತು ಸಾಹಿತ್ಯದಲ್ಲಿ ಬರುವ ಜನಸಾಮಾನ್ಯರ ಜೀವನಕ್ರಮವನ್ನು ಅಭ್ಯಸಿಸಿದಾಗ ಬಡಪಾಯಿ ಜನಸಾಮಾನ್ಯರು ಈ ಮಹಾ ಸಾಮ್ರಾಜ್ಯ, ಕಟ್ಟುವದರಲ್ಲಿ ತಮ್ಮದೇ ವಿಧದಲ್ಲಿ ನೀಡಿದ ಕೊಡುಗೆ, ಮಾಡಿದ ಸೇವೆ ಮತ್ತು ತ್ಯಾಗಗಳಿಗೆ ಹೊಸ ಆಯಾಮ ಬಾರದಿರದು. ಇದೆಲ್ಲ ಅಧ್ಯಯನ ಒಂಟಿ ಸಂಶೋಧಕನಿಂದ ಸಾಧ್ಯವಾಗದ ಕೆಲಸವಾದ್ದರಿಂದ ಸಂಶೋಧನಾ ಸಂಸ್ಥೆ, ಸರಕಾರದ ಜಂಟಿ ಸಹಕಾರ, ಅನುದಾನಗಳಿಂದಲೇ ಅತ್ಯವಶ್ಯವಾಗಿ ಶೀಘ್ರವಾಗಿ ಮಾಡಿ ಮುಗಿಸಬೇಕಾದ ಮಹತ್ ಕಾರ್ಯವಾಗಿದೆ.

## ಅಡಿಟಿಪ್ಪಣಿ

* ಒಂದು ಪಣದ ಬೆಲೆ ಒಂದು ವರಹದ ಒಂದು ಇಪ್ಪತ್ತಾಂಶ ಮತ್ತು ಬ್ರಿಟೀಶರ ಆಳ್ವಿಕೆಯಲ್ಲಿ ವರಹದ ಬೆಲೆ ನಾಲ್ಕು ರೂಪಾಯಿಗಳೆಂದು ಪರಿಗಣಿಸಲಾಗುತ್ತಿತ್ತು.

1. ಒಂಟೆಯ ಪಾಲಕ



2. ಕುದುರೆಯ ನಿಯಂತ್ರಕ



**3**. ವಾದ್ಯಗಾರ

## ಆಧಾರ ಗ್ರಂಥಗಳು


೧. **ಮರೆತು ಹೋಗಿರುವ ಸಾಮ್ರಾಜ್ಯ** : ವಿಜಯನಗರ (ರಾಬರ್ಟ್ ಸಿವೆಲ್) ಕನ್ನಡಕ್ಕೆ ಅನುವಾದ :ಡಾ. ಸದಾನಂದ ಕನವಳ್ಳಿ, ಹಂಪಿ ೧೯೯೨

೨. **ಪ್ರವಾಸಿ ಕಂಡ ಇಂಡಿಯಾ**, ಸಂಪುಟ ೨, ಎಚ್. ಎಲ್. ನಾಗೇಗೌಡ, ಮೈಸೂರು, ೧೯೬೬

೩. **ಸಂಗಮರ ಕಾಲದ ವಿಜಯನಗರ** : ಇತಿಹಾಸ ಮತ್ತು ಸಂಸ್ಕೃತಿ ಸಂಪಾದಕರು: ಜಿ, ಎಸ್. ದಿಕ್ಷೀತ, ಬೆಂಗಳೂರು ೧೯೯೨

೪. **ಗಿರಿಧರಶ್ರೀ** (ಪ್ರೊ। ಜಿ. ಎಸ್. ದೀಕ್ಷಿತ, ಗೌರವ ಗ್ರಂಥ) ಸಂಪಾದಕರು : ಡಾ। ಕೆ.ವಿ. ರಮೇಶ ಮತ್ತು ಡಾ। ಎ.ವಿ. ನರಸಿಂಹ ಮೂರ್ತಿ ನವದೆಹಲಿ ೧೯೮೭


★★★

## ೧೬. ಸುರಾಪಾನ ಪರಂಪರೆ

ಶತಮಾನಗಳಿಂದ ಕನ್ನಡಿಗರು ಊಟ-ಉಡಿಗೆ, ರಸಿಕ ಸ್ತ್ರೀಯರ ಸಹವಾಸದಂತೆ, ಸುರಾಪಾನವನ್ನೂ ಸದಭಿರುಚಿಯ ಸಂಕೇತವೆಂದು ಪರಿಗಣಿಸುತ್ತ ಬಂದಿದ್ದಾರೆ. ವಿವಿಧ ಶತಮಾನಗಳಲ್ಲಿ ರೂಪಗೊಂಡ ಶಿಲ್ಪಗಳು, ಶಾಸ್ತ್ರಗಳು, ಕಾವ್ಯಗಳು ಈ ಅನಿಸಿಕೆಯನ್ನು ಪುಷ್ಟೀಕರಿಸುತ್ತವೆ. ಆದಿ ಕವಿ ಪಂಪನ 'ವಿಕ್ರಮಾರ್ಜುನ ವಿಜಯ'ವು. ಈ ಕುರಿತು ಕುತೂಹಲ ಮಾಹಿತಿ ಒದಗಿಸಿದರೆ,[1] ಚಾಲುಕ್ಯ ಭೂಲೋಕಮಲ್ಲನ 'ಮಾನಸೋಲ್ಲಾಸ' ಕೋಶಗ್ರಂಥವು ಕರ್ನಾಟಕದಲ್ಲಿ ೧೦-೧೨ನೇ ಶತಮಾನಗಳಲ್ಲಿ ಪ್ರಚಲಿತ ವಿದ್ದ ಹತ್ತಾರು ಮದ್ಯಪ್ರಕಾರಗಳನ್ನು ಹಾಗೂ ಅವನ್ನು ತಯಾರಿಸುವ ಬಗೆಯನ್ನು ಕೊಡ ಮಾಡುತ್ತವೆ.[2] ಕಾಶ್ಮೀರದ ಕಲ್ಹಣನ ರಾಜತರಂಗಿಣಿ (೧೧೪೮), ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ (೧೫೦೦) ಹಾಗೂ ನಂಜುಂಡನ ರಾಮನಾಥ ಚಾರಿತ್ರೆಗಳೆಲ್ಲ (೧೬೦೦) ಮದ್ಯಪಾನದ ಹಲಕೆಲವು ವಿವರಗಳನ್ನು ನೀಡುತ್ತವೆ. 'ಚಂದ್ರಿಕಾ ವಿಹಾರ' ಅಥವಾ ಮಧುಪಾನ ಗೋಷ್ಠಿಯೆಂದು ಅಷ್ಟಾದಶ ವರ್ಣನೆಗಳಲ್ಲಿ ಒಂದು ಭಾಗವಾಗಿ ಕಾಣಿಸಿಕೊಂಡರೂ ವಾಸ್ತವಿಕವೆಂದು ಕಂಡು ಬಂದ ಅಂಶಗಳನ್ನು ಹಾಗೂ ಶಿಲ್ಪ, ಶಾಸನ, ಭಿತ್ತಿ-ಚಿತ್ರಗಳ ಮಾಹಿತಿಯಿಂದ ದೃಢಪಟ್ಟ ವಿಚಾರಗಳನ್ನು ಈ ಪ್ರಬಂಧದಲ್ಲಿ ಸೇರಿಸಲಾಗಿದೆ.

ದ್ರಾಕ್ಷಿ, ಹಲಸು, ಖರ್ಜೂರಗಳಂತಹ ಹಣ್ಣುಗಳಿಂದಲೂ ಅಕ್ಕಿ, ಕುಸುಬಲಕ್ಕಿ, ಗೋದಿ, ಜವೆಗೋದಿಗಳಂತಹ ಧಾನ್ಯಗಳಿಂದಲೂ, ಕಬ್ಬು, ತಾಳೆ, ತೆಂಗು, ಈಚಲುಗಳಂತಹ ಸಸ್ಯಗಳಿಂದಲೂ, ಸುರೆಯನ್ನು ಪಡೆಯುವ ಕಲೆಯನ್ನು ಅನಾದಿಕಾಲದಿಂದ ನಮ್ಮವರು ಬೆಳೆಸಿಕೊಂಡು ಬಂದಿದ್ದಾರೆ. ರಾಜ ಪರಿವಾರದವರು, ಕುಲೀನ ಸ್ತ್ರೀಯರು ತಮ್ಮ ಸುಕೋಮಲ ಶರೀರಕ್ಕೆ ಒಗ್ಗುವಂತಹ ಸೌಮ್ಯವಾದ ದ್ರಾಕ್ಷಾರಸ (ವೈನ್) ನಾಲಿಕೇರಾಸವ, ಖರ್ಜೂರಾಸವಗಳನ್ನು ಸೇವಿಸಿದರೆ, ಪುರುಷರು ಹೆಚ್ಚು ತೀಕ್ಷ್ಣವಾದ, ಪೌರುಷಕ್ಕೆ ಸವಾಲಾಗುವಂಥ ಖಾರ, ಹುಳಿ ಮತ್ತು ಕಟುವಾದ ಪಾನೀಯುಗಳನ್ನೆಲ್ಲ ತಮ್ಮವನ್ನಾಗಿಸಿಕೊಂಡಿದ್ದರು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕಕ್ಕರ, ಪೈಷ್ಟೀ, ಗೌಡೀ, ಮಾಧ್ವೀ (ಪಂಪನ 'ಮಧು') ಲವ, ಕೃಷ್ಣಸುರೆ ಚಿಂತಾಮಣಿ ಮತ್ತು ಸೀಧು ಕಟುಸೀಧುಗಳಾಗಿದ್ದವು.[3] ಮಾರೀಚಿ ತೊಡರ್ಪು ಸರದೆ, ಕಕ್ಕರಗಳು ಪಕ್ಕಾ ಕನ್ನಡ

ಕಳ್ಳುಗಳಾಗಿರಲು ಸಾಕು! ಪಂಪಭಾರತದಲ್ಲಿ ಇವುಗಳ ವೈಶಿಷ್ಟ್ಯಗಳನ್ನು ಕಾಣುತ್ತೇವೆ. ತಾಳೆ, ಕಿರುತಾಳೆ, ಹಲಸು, ಮಾವಿನ ಹಣ್ಣುಗಳಿಂದ 'ಆಸವ'ಗಳನ್ನು ಪಡೆಯುತ್ತಿದ್ದರು. ಕಳ್ಳು ಸುರೆ, ಮದ್ಯಗಳಲ್ಲಿ ಮತ್ತಿನ ಪ್ರಮಾಣ ಸೇರಿಕೊಳ್ಳುತ್ತಿದ್ದ ಅಂಶ ಪಂಪ ಭಾರತ ಹಾಗೂ ಮಾನಸೋಲ್ಲಾಸಗಳಿಂದ ಅರಿಯಬಹುದಾಗಿದೆ.

ಸುರಾಪಾನ ಸೇವನೆಯನ್ನು ವಿರಾಮವಾಗಿ, ಕ್ರಮಬದ್ಧವಾಗಿ, ಶಾಸ್ತ್ರೋಕ್ತ ರೀತಿಯಲ್ಲಿ ಸಭಾಮರ್ಯಾದೆಯೊಂದಿಗೆ ಕೈಕೊಳ್ಳುತ್ತಿದ್ದರು. ಮೊದಲಿಗೆ ಮಧುದೇವತೆಗೆ ಪೂಜೆ ಸಲ್ಲಿಸಿ ಭೂದೇವಿಗೆ ವಂದಿಸಿ, ಸುರೆಯನ್ನು ಶಿರದಲ್ಲಿ ಪ್ರೋಕ್ಷಿಸಿಕೊಂಡು ಹಣೆಗೆ ಬೊಟ್ಟನಿಟ್ಟುಕೊಳ್ಳುತ್ತಿದ್ದರು.[೪]

ಹೆಚ್ಚಿನವರು ಮುನ್ನೆಚ್ಚರಿಕೆಯಿಂದ ಮತ್ತು ಧರ್ಮಾಚರಣೆ ಅಂಗವಾಗಿ ಮದ್ಯಸೇವನೆಯಲ್ಲಿ ಪಾಲುಗೊಳ್ಳುತ್ತಿದ್ದುದರಿಂದ ಕುಡುಕರು, ಸಾರ್ವಜನಿಕರಲ್ಲಿ ಕ್ವಚಿತ್ತಾಗಿ ಕಾಣಸಿಗುತ್ತಿರಬೇಕು! ಪ್ರೇಮಿಗಳು, ಪತಿ-ಪತ್ನಿಯರು, ಕುಟುಂಬದ, ಸ್ನೇಹಿತರ, ಬಳಗದ ಜನ ಸೇರಿ ಸುರಾಪಾನ ಕೈಕೊಳ್ಳುತ್ತಿದ್ದಂತೆ, ಹೆಂಗಳೆಯರು ಹಾಸ್ಯ-ಹರಟೆಗಳ ನಡುವೆ ಖಾರದ ತಿಂಡಿಗಳನ್ನು ನೆಂಚಿಕೊಳ್ಳುತ್ತ ಕಳ್ಳನ್ನು ಹೊಟ್ಟೆಗೆ ಇಳಿಸುತ್ತಿದ್ದರು. ನೆಂಚಿಕೊಳ್ಳುವ 'ಚಕ್ಕಣ'ಗಳನ್ನು ಹೆಸರಿಸಲಾಗಿದೆ. ಮಾನಸೋಲ್ಲಾಸದ ಪ್ರಕಾರ, ಮಾಂಸದ ವಡೆಗಳು, ತರಕಾರಿ ಬೋಂಡ, ಈರುಳ್ಳಿ ಬಜಿ, ಬೆಂಕಿಯಲ್ಲಿ ಬೆಂದ, ಹಂಚಿನ ಮೇಲೆ ಹುರಿದ ಮತ್ಸ್ಯ, ಮಾಂಸ ಪ್ರಕಾರಗಳು, ಹುರಿಗಾಳುಗಳು ಜೊತೆಕೂಡುತ್ತಿದ್ದವು.[೫] ಮತ್ತೇರದಂತೆ ತುಪ್ಪದ ಸೇವನೆ ಆಗುತ್ತಿತ್ತು. ಹಲಬಗೆಯ ಔಷಧಿ, ಮೂಲಿಕೆಗಳನ್ನು ಸುರಾಪ್ರಕಾರಗಳು ಒಳಗೊಂಡಿರುತ್ತಿದ್ದವು.

'ಮೋಹನ ತರಂಗಿಣಿ'ಯಲ್ಲಿ ಕನಕದಾಸರು ಚಿತ್ರಿಸಿದ ಸುರುಪಾನ ಗೋಷ್ಠಿಯಲ್ಲಿ ಹದಿನಾರನೆಯ ಶತಮಾನದ ಶ್ರಮಿಕ ಕನ್ನಡಿಗರ ರಮ್ಯವಾದ ಆಚರಣೆಯನ್ನು ಕಾಣಬಹುದಾಗಿದೆ. ಸೂರ್ಯಾಸ್ತವಾಗುತ್ತಿದ್ದಂತೆ ತಂತಮ್ಮ ಮನೆಗಳನ್ನು ಶುಚಿಗೊಳಿಸಿ ರಂಗೋಲಿ ಬರೆದು ಭಕ್ಷ್ಯ ಭೋಜ್ಯಗಳನ್ನು ಅಣಿಗೊಳಿಸುತ್ತಿದ್ದರು. ಅಕ್ಕಿ, ಕಡಲೆ ಪಣ್ಯಾರದ ರಾಶಿಯ ಮೇಲೆ ತುಂಬಿದ ಕೊಡವನ್ನಿಟ್ಟು, ಬೇವಿನ ದಂಡೆ ಹಾಕಿ ಗಂಧ-ಬಂಡಾರ ಹಚ್ಚಿ ಧೂಪದ ದೀಪಾರತಿ ಬೆಳಗುತ್ತಿದ್ದರು. ಶ್ರದ್ಧೆಯಿಂದ ಮಂತ್ರವನ್ನು ಹೇಳಿ, ಶಾಸ್ತ್ರೋಕ್ತವಾಗಿ ಪರಮಶಕ್ತಿಯ ಪಾದಪೂಜೆ ಮಾಡಿ, ಕಳ್ಳನ್ನು ಸೇವಿಸಲು ಪ್ರಾರಂಭಿಸುತ್ತಿದ್ದರು. ಕಿರಿಯರು ಹಿರಿಯರಿಗೆ ಮೊದಲು ನೀಡಿ ಗೆಣೆಯ ಗೆಣತಿಯರು ಪರಸ್ಪರ ಉಪಚರಿಸುವಾಗಿನ ಮಾತುಗಳು:

"ರಂಭೆಯೇ ಇಕೋ! ಸುಂದರಿಯೇ ಕೋ! ಹೊನ್ನಗೊಂಬೆಯೇ ಕುಡಿ! ಚಂದ್ರಮುಖಿ ತುಂಬಿಗುರುಳ, ತುರುಗವೆಣ್ಣೆ ಸಖಿಯೇ ಕುಡಿ"!ಎಂದು ರಮಿಸಿ ಕುಡಿಸುತ್ತಿದ್ದರು. ಕುಡಿಯುವ ಚಟವಿದ್ದವರು, ಇತರರಿಗೂ ನಂಬಿಸಿ, ರಮಿಸಿ ಕುಡಿಸುವುದು ಸಾಮಾನ್ಯವಲ್ಲವೇ? ಹೆಂಡ; ನೆತ್ತಿಗೇರಿದವರು ಹಿಂಜರಿಯದೇ ತಮ್ಮ ಪ್ರಿಯತಮನಿಗೆ ಕುಡಿಯಲು ಪ್ರೋತ್ಸಾಹಿಸುತ್ತಿದ್ದರು.

"ನಲ್ಲನೇ ಕುಡಿ, ನಾಗರಿಕನೇ ಕುಡಿ, ಮನ್ಮಥ ರೂಪಿಯೇ ಕುಡಿ! ನೀನು ಕುಡಿಯದಿದ್ದರೆ ನಾನು ಬದುಕಿರಲಾರೆ!" ಎನ್ನುವರು. ತತ್ತಿ, ಅವಲಕ್ಕಿ, ಕಾರದ ಅರಳು, ಕಡಲೆಕಾಳುಗಳನ್ನು

ಬಾಡಿಸಿಕೊಳ್ಳುತ್ತ ಸೊಕ್ಕೇರುವ ತನಕ ಕುಡಿಯುತ್ತಿದ್ದರು. "ಅಣ್ಣ! ಒಂದೇ ಚಿಪ್ಪನ್ನಾದರೂ ಕೋ! ಎಂದು ಒತ್ತಾಯದಿಂದ ಕುಡಿಸದೇ ಇರುತ್ತಿರಲಿಲ್ಲ. ಕುಡಿಯುತ್ತ, ಕುಡಿಸುತ್ತ, ಕಲೆಯುತ್ತ, ತೇಕುತ್ತ ಕೈತಟ್ಟುತ್ತ ಖುಷಿ ಪಡುತ್ತಿದ್ದರು.[೬]

ಮದ್ಯಕೂಟದ ವರ್ಣನೆ ದೇವಪ್ಪ ಕವಿಯ ರಾಮವಿಜಯ ಕಾವ್ಯದಲ್ಲಿ ಸೊಗಸಾಗಿ ಮೂಡಿದೆ.

ತಪ್ಪಿ ನುಡಿವುತ ಮಾತುಗಳ ತೊಪ್ಪಗೆ ಬೀಳುತೇಳುತ
ಸೊಪ್ಪಾದ ಮೈಮನದಿಂದ ಸುರೆಯನುಂ ಡ।
ವೊಪ್ಪವನೇನು ಪೇಳುವೆನು
ಸೊಕ್ಕುವರ್ ಕೆಲರು, ಕೆಕ್ಕನೆ ಕೆಲೆಕೆಲೆವರು

ಬೆಕ್ಕಸಬಡುವರು ಕೆಲರು. ಅಕ್ಕರಿಂಕೆಲರು! ರಕ್ಕಸಿಯಂತೆ ಕೆಲಬರು ಇಕ್ಕೆಲದಲ್ಲಿ.[೭] ಇತ್ಯಾದಿ.

ಮದಿರಾಪಾನವು , ಪ್ರಾಚೀನ ಕನ್ನಡಿಗರಿಗೆ ಕ್ರೀಡೆಯಾಗಿದ್ದು, ಈಗಿನಂತೆ ಪಾನೀಯದ ಸ್ಥಾನವನ್ನು ಅದು ಆಕ್ರಮಿಸಿರಲಿಲ್ಲ. ಸ್ತ್ರೀಜನರ ಮನಸ್ಸಂತೋಷಕ್ಕೆ ಹಾಗೂ ತಾನು ಮುದಗೊಳ್ಳಲಿಕ್ಕೆ ಅರಸರಾದಿಯಾಗಿ, ವನಪ್ರದೇಶ, ನದಿದಂಡೆ, ಹೂಹಣ್ಣುಗಳ ತೋಟಗಳಲ್ಲಿ, ಪಾನಕ್ರೀಡೆಯನ್ನು ಏರ್ಪಡಿಸುತ್ತಿದ್ದರು. ಸ್ತ್ರೀಯರಿಗೆ ಮದ್ಯಪಾನದ ವಿಕಾರ ಬಲುಬೇಗನೇ ಕಾಣಿಸಿಕೊಳ್ಳುತ್ತಿದ್ದು ಅದರ ವರ್ಣನೆ ಕಾವ್ಯಗಳಲ್ಲಿ ಬರುತ್ತದೆ. ನಾಲಿಗೆ ತೊದಲುತ್ತದೆ. ಕಣ್ಣು-ಹುಬ್ಬುಗಳ ವಿಚಿತ್ರ ಏರಿಳಿತ ತೋರುತ್ತವೆ. ಕಣ್ಣು ಕೆಂಬಣ್ಣ ತಾಳುತ್ತವೆ. ಒಮ್ಮೆ ನಗುತ್ತ, ಮರುಗಳಿಗೆಯಲ್ಲಿ ಅಳುತ್ತ, ಬೀಳುತ್ತ, ಏಳುತ್ತ, ಅತ್ತಿಂದಿತ್ತ ಮೈಮೇಲಿನ ಪರಿವೆಯಿಲ್ಲದೇ ಅಲೆಯುವರು ಬಿಕ್ಕಳಿಕೆ, ತೇಗು, ಮುಕ್ತನೃತ್ಯಗಳಿಗೂ ಕೊರತೆಯಿರಲಿಲ್ಲ ಕೂದಲು, ಬಟ್ಟೆ ಬರೆ ಅಸ್ತವ್ಯಸ್ತವಾಗುವದು ಸಾಮಾನ್ಯವಾಗಿತ್ತು[೮]. ಕುಡಿದು ಮೇಲೆ ಏಳಲಿಕ್ಕಾಗದವಳಿಗೆ ಸೇವಕರು ನೆರವು ನೀಡುತ್ತಿದ್ದರು(ಚಿತ್ರ7).

ರಣರಂಗದಲ್ಲಿ ಮದ್ಯಕ್ಕೆ ಆದ್ಯತೆ ಕೊಡಲಾಗುತ್ತಿತ್ತು. ಯುದ್ಧದ ಬಿಡದಿಗಳಲ್ಲಿ ಹೆಂಡದ ವ್ಯಾಪಾರ ಅವ್ಯಾಹತವಾಗಿ ಸಾಗತ್ತಿತ್ತು. ಹೇಸರಗತ್ತೆಗಳ ಮೇಲೆ ಆಹಾರ ಸಾಮಗ್ರಿಗಳ ಜೊತೆಗೆ ಸರಾಯಿ, ಗಂಗಾಸಾರ (ಹೆಂಡ) ಹಾಗೂ ಬಂಗಿಯ ಹೇರುಗಳನ್ನು ಬೆವಹಾರಿಗಳು ಸಾಗಿಸುತ್ತಿದ್ದರು. ಯುದ್ಧದ ಆಘಾತಗಳು, ಗಾಯ, ನೋವು, ನರಳಾಟವನ್ನು ಮರೆಯಲು ಹೆಂಡವು ದಿವ್ಯೌಷಧಿಯಾಗಿ ಮಾರ್ಪಡುತ್ತಿತ್ತು. ಪಳಗಿಸಿದ ಆನೆಗಳಿಗೆ ಮನಸ್ವಿ ಮದ್ಯಪಾನ ಮಾಡಿಸಿ, ಮದವೇರಿಸಿ ಸೊಂಡಿಲಿನ ಇಕ್ಕೆಲದಲ್ಲಿ ಜೋಡಿಸಿದ, ಖಡ್ಗಗಳಿಂದ ಸಜ್ಜುಗೊಳಿಸಿ, ವೈರಿಸೈನ್ಯದ ಮೇಲೆ ಬಿಡುತ್ತಿದ್ದ ಕಾದಾಟದ ಪ್ರಕಾರವನ್ನು ಚೀನೀ ಪ್ರವಾಸಿ ಯವನಚ್ಯಾಂಗ್ ಹೇಳಿದ್ದನ್ನು ಸ್ಮರಿಸಿಕೊಳ್ಳಬಹುದು[೧೦].

ವಿವಿಧ ಶತಮಾನಗಳಲ್ಲಿ ರೂಪಗೊಂಡ ಶಿಲ್ಪ. ಉಬ್ಬು ಚಿತ್ರ ಮತ್ತು ಭಿತ್ತಿಚಿತ್ರಗಳಲ್ಲಿ ಕನ್ನಡಿಗರ ಸುರಾಪಾನದ ಪಂರಪಂರೆಯನ್ನು ಗುರುತಿಸಬಹುದು. ಬಾದಾಮಿಯ ಮೂರನೆಯ ಗುಹಾಲಯದಲ್ಲಿ (ಕ್ರಿ.ಶ. ೫೭೮), ಮದ್ಯಪಾನದ ವೈಖರಿಯನ್ನು ಅನೇಕ ಅಂಕಣಗಳಲ್ಲಿ ಉಬ್ಬು ಚಿತ್ರಗಳನ್ನಾಗಿ ಮೂಡಿಸಿದ್ದಾರೆ. ತಲೆಗೇರಿದ ಮತ್ತಿನಿಂದ ಯುವಕನೊಬ್ಬ ಕೈಯಲ್ಲಿ ಸುರಾಪಾತ್ರೆ ಹಿಡಿದುಕೊಂಡೇ ಜಗತ್ತಿಗೆ ನೀತಿ ಬೋಧೆ ಮಾಡುತ್ತಿದ್ದಾನೆ (ಚಿತ್ರ 4). ಇನ್ನೊಂದೆಡೆ ಮೂವರು ಜೋಡಿಗಳು, ವಿವಿಧ ಭಂಗಿಗಳಲ್ಲಿ ಮದ್ಯದ ಬಟ್ಟಲೊಂದಿಗೆ ಮೈಮರೆತಿದ್ದಾರೆ. ಈರ್ವರು ಸೇವಕರು, ಬರಿದಾದ ಬಟ್ಟಲು ತುಂಬಲು ಸಿದ್ಧರಾಗಿಯೇ ಇದ್ದಾರೆ (ಚಿತ್ರ 5). ಇನ್ನೊಂದು ಅಂಕಣದಲ್ಲಿ ಈರ್ವರು ಹೆಂಗಳೆಯರು ಹೆಂಡ ಹೀರುತ್ತ ನೆರೆಕೆರೆಯ ಮಾತುಕತೆ ನಡೆಸಿದ್ದಾರೆ. ಕೋಲಾರದ ಕೋಲಾರಮ್ಮ ದೇವಾಲಯದಲ್ಲಿ (ಕ್ರಿ.ಶ. ೧೦೨೩)ಮೂಲದೇವತೆಯ ಪೂಜಾವಿಗ್ರಹವನ್ನು ಮರೆಮಾಡಿ ಇಡಲಾಗಿದೆ. ಈ ವಿಗ್ರಹದ ಕೈಯಲ್ಲಿ ಸುರಾಪಾತ್ರವಿದೆ. ಶಾಕ್ತ ಸಂಪ್ರದಾಯದ ಪ್ರಭಾವ ಜೋರಾಗಿದ್ದ ದಿನಗಳಲ್ಲಿ ಈ ದೇವತೆಯ ನೈವೇದ್ಯದ ಸಾಮಗ್ರಿಗಳಲ್ಲಿ ಮತ್ತಿಯ ಪಾನದ ಉಲ್ಲೇಖವಿದೆ. ಉತ್ತರಕನ್ನಡ ಜಿಲ್ಲೆಯ ಕೇತಪ್ಪಯ್ಯ ನಾರಾಯಣ ದೇವಾಲಯದ ಜಗಲಿಯಲ್ಲಿ ಸುಖಾಸೀನ ದಂಪತಿಗಳಿಗೆ ಮದ್ಯ ಪೂರೈಕೆಯ ದೃಶ್ಯದ ಉಬ್ಬುಚಿತ್ರವಿದೆ. (ಕ್ರಿ. ಶ. ೧೫೪೫) ತುಮಕೂರು ಜಿಲ್ಲೆಯ ಸೀಬಿಯ ನರಸಿಂಹಸ್ವಾಮಿ ದೇವಸ್ಥಾನ (ಕ್ರಿ.ಶ. ೧೭೯೦) ದ ಮಾಡಿನಲ್ಲಿರುವ ಭಿತ್ತಿಚಿತ್ರದಲ್ಲಿ ಸೆರೆ ಇಳಿಸುವ ವಿವಿಧ ಹಂತಗಳ ಚಿತ್ರಣವಿದೆ. ಒಬ್ಬಾತ, ಎತ್ತರವಾದ ತಾಳೆಮರ ಏರಿ ಮಣ್ಣಿನ ಮಡಕೆಯಲ್ಲಿ ಸಂಚಯವಾದ ಹೆಂಡವನ್ನು ಕೂಡಹಾಕುತ್ತಿದ್ದಾನೆ (ಚಿತ್ರ1). ಇಂಥ ಸೆರೆಯಿಳಿಸುವ ಜನಾಂಗವಾದ ಈಡಿಗರ ಅಥವಾ ಬಿಲ್ಲವರ ಉಲ್ಲೇಖ ಅನೇಕ ಶಾಸನಗಳಲ್ಲಿ ಬರುತ್ತದೆ. ಬಿಲ್ಲ ಮುನೂರ್ವರ ಸಂಖ್ಯೆ ಸಾಂಪ್ರದಾಯಿಕವಾಗಿ ದಾನ ಲೇಖಗಳಲ್ಲಿ ಬರುವದು. ಅವರು ಗಣ್ಯರಾಗಿದ್ದು, ಪ್ರಾಚೀನರ ಸುರಾಪಾನ ಪದ್ಧತಿಯನ್ನು ಅರಿತುಕೊಳ್ಳುವದರಲ್ಲಿ ಗಮನಾರ್ಹ ಅಂಶವಾಗಿದೆ. ಸೀಬಿಯ ಅಂಕಣದಲ್ಲಿ, ಇನ್ನೊಂದೆಡೆಗೆ ಇಳಿಸಿದ ಹೆಂಡವನ್ನು ಹಳ್ಳಿಯ ಹೆಣ್ಣುಮಗಳು ಕೊಡದಲ್ಲಿ ಹೊತ್ತೊಯ್ಯುವದನ್ನು ತೋರಿಸಿದ್ದರೆ (ಚಿತ್ರ2) ಮಗದೊಂದು ಎಡೆಯಲ್ಲಿ ಕತ್ತೆಯ ಬೆನ್ನಿಗೆ ಜೋಡಿಸಿದ ಚರ್ಮದ ಚೀಲಕ್ಕೆ (ಬುಡ್ಡಿ) ಕೊಡದಿಂದ ಹೆಂಡ ಸುರಿಯುವ ಚಿತ್ರವೂ ಇದೆ (ಚಿತ್ರ 3).

ಬಹುಸಂಖ್ಯಾತ ಕನ್ನಡಿಗರು ಪಾನಪ್ರಿಯರಾಗಿರಲಿಲ್ಲ. ಆದರೆ ಪಾನ ಸಹಿಷ್ಣುಗಳಾಗಿ ಬಾಳಿದರು. ಕೆಲವು ಪಂಗಡಗಳಿಗೆ ಮದ್ಯಪಾನ ನಿಷೇಧಿಸಲ್ಪಟ್ಟಿತ್ತು. ಆದರೆ. ಯಾವುದೇ ಯುಗದಲ್ಲಿ, ಯಾವುದೇ ರಾಜ್ಯದಲ್ಲಿ ಪಾನ ಪ್ರತಿಬಂಧ, ಸಂಪೂರ್ಣ ಯಶಸ್ವಿಯಾದ ದಾಖಲೆ ಇಲ್ಲ. ಮಹಾತ್ಮಾ ಗಾಂಧಿಯವರ ಕಟ್ಟಾ ಅನುಯಾಯಿ ಮುರಾರಜಿ ದೇಸಾಯಿ ಅವರು ಮುಂಬೈ ಪ್ರಾಂತದಲ್ಲಿ ಪಾನ ನಿರೋಧ ಹೇರಿದಾಗ, ಕಳ್ಳಭಟ್ಟಿಸೆರೆ, ಅತ್ಯಂತ ಜನಪ್ರಿಯವಾದದ್ದನ್ನು ಮರೆಯುವಂತಿಲ್ಲ. ಗಾಂಧಿಯವರ ಜನ್ಮಭೂಮಿ ಗುಜರಾಥದಲ್ಲಿ

ಪಾನಪ್ರತಿಬಂಧ ಹೇರಿದಾಗ ಗಡಿಯ ಊರಾದ ಮೌಂಟ್ ಅಬು ಅತ್ಯಂತ ಜನಪ್ರಿಯ ಪಾನಭೂಮಿಯಾಗಿ ಮೆರೆಯಿತು. ಮೈಸೂರು ಮಹಾರಾಜರ ಸಂಸ್ಥಾನವಾಗಿದ್ದಾಗ, ಹಿತಮಿತದ ಮದ್ಯಪಾನಕ್ಕೆ ಅವಕಾಶವಿತ್ತು. ಕರ್ನಾಟಕದ ಏಕೀಕರಣದ ಬಳಿಕ ಅಬಕಾರಿ ಸುಂಕ, ಹೇರಳ ಹಣ ತರುವಂತಾದ್ದರಿಂದ ರಾಜ್ಯಸರಕಾರವು ನೀರುಸಿಗದ ಹಳ್ಳಿಯಲ್ಲಿಯೂ ಸೆರೆಯಂಗಡಿ ತೆರೆಯುವಂತೆ ಪ್ರೋತ್ಸಾಹಿಸಿತು. ಕುಡಿತದ ರೂಢಿ, ಆಧುನಿಕತೆಯ ಸಂಕೇತ ! ಎಂದು ತಪ್ಪಾಗಿ ನಂಬಿರುವ ಹೊಸ ಪೀಳಿಗೆಯವರಲ್ಲಿ, ಹೆಂಡದಿಂದ ದೂರವಿರುತ್ತಿದ್ದ ಹಿರಿಯರಿಗೆ ಜೀವನದ ಸವಿ ಸವಿಯುವ ಭಾಗ್ಯವಿಲ್ಲ! ಎಂದು ವಾದಿಸಿದವರಿದ್ದಾರೆ. ಪಾಶ್ಚಾತ್ಯ ಕೋತೀಕರಣ (aping)ದಿಂದ ಮೇಲ್ವರ್ಗದವರು ಕುಡಿತ ರೂಢಿಸಿಕೊಂಡರೆ, ದಾರಿದ್ರ್ಯ, ನಶಾ ಪ್ರೀತಿ ಹಾಗೂ ಸುಲಭ ಲಭ್ಯತೆಗಳು ಶ್ರಮವರ್ಗದವರನ್ನು ಕುಡಿತಕ್ಕೆ ತಳ್ಳುತ್ತವೆ. ಹೀಗಾಗಿ ಕುಡಿಯುವ ಕನ್ನಡಿಗರು ಹಿಂದೆಂದಿಗಿಂದತಲೂ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಿದ್ದಾರೆ. ನಮ್ಮ ಹಿರಿಯರು ಪಾಲಿಸಿಕೊಂಡು ಬಂದ ಪಾನಪದ್ಧತಿಯನ್ನು ಅಂದರೆ ಯಾವಾಗ? ಹೇಗೆ? ಏಕೆ ? ಏನನ್ನು? ಹಾಗೂ ಎಷ್ಟು? ಸೆರೆಯನ್ನು ಕುಡಿಯಬೇಕು? ಅನ್ನುವುದನ್ನು ರೂಢಿಸಿಕೊಂಡರೆ ಮಿತ ಆಹಾರ, ಯೋಗ್ಯ ವ್ಯಾಯಾಮಗಳಂತೆ ಮಿತ ಪಾನವು ಸರ್ವರಿಗೂ ಹಿತಕಾರಿಯಾದೀತು !*



1. ಸೆರೆ ಇಳಿಸುವಾತ



3. ಬುದ್ದಿಗೆ ಸೆರೆ ಸುರಿಯುವುದು



2. ಸುರೆಯ ಸಾಗಾಟ




4. ಸುರಾಮತ್ತನ ಬೋಧನೆ



5. ಪಾನ ಗೋಷ್ಠಿ



6. ಪಾನರತ ದಂಪತಿ



7. ಪಾನಮತ್ತೆಗೆ ವಿಳಲು ನೆರವು

## ಅಡಿ ಟಿಪ್ಪಣಿ

೧. ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ ಮೈಸೂರು ೧೯೭೭ ಚತುರ್ಥಾಶ್ವಾಸಂ, ಪದ್ಯ ೮೮-೮೯

೨. ಶ್ರೀ ಗೊಂದೇಕರ್ ಜಿ.ಕೆ. (ಸಂ) ಮಾನಸೋಲ್ಲಾಸ ಆಫ್ ಕಿಂಗ್ ಸೋಮೇಶ್ವರ ಸಂಪುಟ III ಅಧ್ಯಾಯ : ಪದ್ಯ ೪೨೭-೫೧೪ (ಮಾನ)

೩. ಪಂಪ ಪೂರ್ವೋಕ್ತ ;ಮಾನ IV ಪದ್ಯ ೪೩೭, ೪೪೧

೪. ಪಂಪನು ಮದ್ಯ, ಆಸವ, ಕಳ್ಳುಗಳಲ್ಲಿ ಅಂತರ ಮಾಡಿಲ್ಲ, ಮಾನಸೋಲ್ಲಾಸವು ತಾಳೆಯ ಹೆಂಡವನ್ನೂ ಪರಿಷ್ಕರಿಸಿ ಆಸವವಾಗಿ ಪರಿವರ್ತಿಸುವ ರೀತಿಯನ್ನು ಕೊಡುತ್ತದೆ.ಪರಿಷ್ಕರಿಸಿದ (Processed) ಸುರೆಗಳನ್ನೆಲ್ಲ ಮದ್ಯ ಅಥವಾ ಮದಿರಾ ಎಂದು ಮಾನಸೋಲ್ಲಾಸವು ಪರಿಗಣಿಸಿದಂತೆ ತೋರುತ್ತದೆ.

೫. ಮಾನ :ಪೂರ್ವೋಕ್ತ ಪದ್ಯಗಳು ೪೫೦-೪೬೫

೬. ಹಿರೇಮಠ ಡಾ। ಆರ್.ಸಿ. (ಸಂ) ಕನಕದಾಸರ ಮೋಹನ ತರಂಗಿಣಿ ಧಾರವಾಡ ೧೯೭೩, ಅನಿರುದ್ಧನ ನಗರಶೋಧನೆ :ಪದ್ಯಗಳು ೮೨-೮೮, ಪುಟ ೨೬೫-೩

೭. ಕೇಶವಭಟ್ಟ ಪ್ರೊ.ಟಿ. (ಸಂ) ದೇವಪ್ಪ ಕವಿ ವಿರಚಿತ ರಾಮವಿಜಯ ಕಾವ್ಯ ಬೆಂಗಳೂರು ೧೯೬೯ ಅಧ್ಯಾಯ ೧೦ ಪದ್ಯಗಳು ೫೬-೫೭

೮. ಪಂಪ IV ಪದ್ಯ ೯೦ :ಮಾನ : ಅಧ್ಯಾಯ ೯. ಪದ್ಯ ೪೯-೫೧೦ ವಿರೂಪಾಕ್ಷ ಪಂಡಿತ ಕೃತ ಚೆನ್ನಬಸವಪುರಾಣ ಬೆಂಗಳೂರು ೧೯೭೭, ಸಂಧಿ ೧೦ ಪದ್ಯ ೭೫

೯. ದೇವೀರಪ್ಪ ಎಚ್ (ಸಂ) ನಂಜುಂಡ ಕವಿ ವಿರಚಿತ ರಾಮನಾಥ ಚರಿತ ಮೈಸೂರು ೧೯೫೯ ಪೂರ್ವಾರ್ಧ ೧೯ನೇ ಸಂಧಿ ಪದ್ಯ ೧೧ ಉತ್ತರಾರ್ಧ (೧೯೬೪) ೪೧ನೇ ಸಂಧಿ ಪದ್ಯ ೫೩.

೧೦. ಕರ್ನಾಟಕ ಥ್ರು ದಿ ಏಜಸ್ : (ಕರ್ನಾಟಕ ಸರಕಾರದ ಪ್ರಕಟಣೆ) ೧೯೬೮ ಪುಟ ೨೦೪

* ತೀರ ಈಚೆಗೆ ಜಾರಿಯಲ್ಲಿ ಬಂದ ಸರಾಯಿ ನಿಷೇಧ ಕಾನೂನಿನ ಪರಿಣಾಮವನ್ನು ಈ ಹಿನ್ನೆಲೆಯಲ್ಲಿ, ವಿಚಾರವಂತರು ಮುಂದಾಗಿ ಊಹಿಸಬಹುದಾಗಿದೆ.



# ೧೭. ತ್ರಿವಿಕ್ರಮ ಭಟ್ಟನು ಚಿತ್ರಿಸಿದ ಸಮಾಜ

ಸಂಸ್ಕೃತದ ಚಂಪೂ ಕಾವ್ಯಗಳಲ್ಲಿಯೇ ಮೊದಲನೆ ಕೃತಿಯೆಂಬ ಹೆಗ್ಗಳಿಕೆಗೆ ಪಾತ್ರವಾದ ತ್ರಿವಿಕ್ರಮಭಟ್ಟನ ನಲಚಂಪೂ ಕೃತಿಯು (ದಮಯಂತಿ ಕಥಾ ಎಂಬ ಇನ್ನೊಂದು ಹೆಸರು ಇದಕ್ಕಿದೆ.) ಕರ್ನಾಟಕದಲ್ಲಿಯ ಹತ್ತನೆಯ ಶತಮಾನದ ಜನಜೀವನದ ಕೆಲವು ಇಣುಕು ನೋಟಗಳನ್ನು ಒದಗಿಸುತ್ತದೆ. ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಇಂದ್ರರಾಜನ ಆಸ್ಥಾನ ಕವಿಯಾಗಿರಬಹುದಾದ, ತ್ರಿವಿಕ್ರಮ ಭಟ್ಟನು ಸುಮಾರು ಕ್ರಿ.ಶ.೮೭೫ ರಿಂದ ೯೫೦ರ ವರೆಗೆ ಜೀವಿಸಿರಬಹುದಾಗಿದೆ. ಮೂರನೆಯ ಇಂದ್ರನ ರಾಜ್ಯಾಭಿಷೇಕ ಕಾಲದಲ್ಲಿ ಬಿಡುಗಡೆ ಮಾಡಲ್ಪಟ್ಟ ಕ್ರಿ.ಶ. ೯೧೬ನೇ ವರ್ಷದ ಪ್ರಶಸ್ತಿ ಮತ್ತು ವೃತ್ತಿ ಮತ್ತೂರು ಶಿಲಾಶಾಸನಗಳನ್ನು ರಚಿಸಿದವನು ನೇಮಾದಿತ್ಯನ ಮಗನೆಂದು ಗುರುತಿಸಲ್ಪಟ್ಟ ತ್ರಿವಿಕ್ರಮ ಭಟ್ಟನು. ಶಾಂಡಿಲ್ಯ ವಂಶದ ಶ್ರೀಧರನು ತನ್ನ ಅಜ್ಜ ಹಾಗೂ ನೇಮಾದಿತ್ಯನು ತಂದೆಯೆಂದು ಇವನು ಹೇಳಿಕೊಂಡಿರುವ. ಈ ಪೂರ್ವಜರು, ಮಹಾಭಾರತಿಕರಾಗಿದ್ದರು. ಅರ್ಥಾತ್ ಮಹಾಭಾರತವನ್ನು ವಾಚಿಸಿ ವ್ಯಾಖ್ಯಾನ ಮಾಡುವ ಪಂಡಿತರಾಗಿದ್ದರು.

ಬಹುಶಃ ವಿದರ್ಭದಲ್ಲೇ ಹುಟ್ಟಿ ಬೆಳೆದ ತ್ರಿವಿಕ್ರಮನಿಗೆ ಆ ಪ್ರದೇಶದ ಪರ್ವತ ಬೆಟ್ಟಗಳು, ಹೊಳೆ, ಹಳ್ಳಗಳು, ನದಿ, ಉಪನದಿಗಳು, ಅರಣ್ಯ ಹಾಗೂ ತಟವರ್ತಿ ಪ್ರದೇಶಗಳೆಲ್ಲ ಸುಪರಿಚಿತವಾಗಿದ್ದವು. ಜೊತೆಗೆ ಆತ ವಿಂಧ್ಯಾಚಲದ ಆಚೆಯ ನಾಡುಗಳೆಲ್ಲೆಲ್ಲ ವ್ಯಾಪಕವಾಗಿ ಸಂಚರಿಸಿದ್ದ. ಅಂಗ, ವಂಗ, ಅಯೋಧ್ಯ, ಆರ್ಯಾವರ್ತ, ಕಲಿಂಗ, ಕಾಂಚಿ, ಕಾಮರೂಪ, ಕುರುಕ್ಷೇತ್ರ, ಗುರ್ಜರ, ತ್ರಿಪುಷ್ಕರ, ನಾಸಿಕ, ನಿಷಧ, ಪಾರಸೀಕ, ಪ್ರಭಾಸ, ಭೋಜಕಟ, ಮಗಧ, ಮಧ್ಯದೇಶ, ಮಹಾರಾಷ್ಟ್ರಗಳನ್ನು ಆತ ಹೆಸರಿಸುತ್ತಾನೆ. ಕುಂತಲ ಕರ್ನಾಟಕಗಳಂತೂ ಸರಿಯೇ ! ರಾಷ್ಟ್ರಕೂಟರ ಕಾಲದ ಕರ್ನಾಟಕ, ಕಾವೇರಿಯಿಂದ ಗೋದಾವರಿಗಷ್ಟೇ ಅಲ್ಲದೇ ಇನ್ನೂ ಉತ್ತರ, ಪಶ್ಚಿಮ ಪೂರ್ವಗಳಲ್ಲಿ ವ್ಯಾಪಿಸಿದುದನ್ನು ಸ್ಮರಿಸಿಕೊಳ್ಳಬಹುದು. ಜನಪ್ರಿಯ ಪ್ರಾಚೀನ ಕತೆಯಾದ ನಳ-ದಮಯಂತಿಯರ ಪ್ರಸಂಗವನ್ನು ತನ್ನ ಕೃತಿಗೆ ಅಳವಡಿಸಿಕೊಂಡು ತ್ರಿವಿಕ್ರಮನು ಸಹಜವಾಗಿಯೇ ತನಗೆ ಇಷ್ಟವಿದ್ದ ವಿದರ್ಭಕ್ಕೆ ಕೊಂಚ ದಕ್ಷಿಣದಲ್ಲಿ ದಮಯಂತಿಯ ಊರಾದ ಕುಂಡಿನಪುರ ಅಥವಾ ಕೌಂಡಿನ್ಯಪುರವನ್ನು ರೂಪಿಸಿದ್ದಾನೆ.

"ದೇಶಾನಾಂ ದಕ್ಷಿಣೋ ದೇಶಃ ತತ್ರವೈದರ್ಭ ಮಂಡಲಂ! ತತ್ರಾಪಿ ವರದಾ ತೀರ ಮಂಡಲಂ ಕುಂಡಿನಪುರಂ" ಎಂದು ದಕ್ಷಿಣದ ವಿದರ್ಭ ಮಂಡಲದ ವರದಾ ನದಿಯ ತೀರದಲ್ಲಿ ಈ ಕುಂಡಿನಪುರವನ್ನು ಗುರುತಿಸಿದ್ದಾನೆ. ವರದಾ ನಮ್ಮ ಈಗಿನ ಕರ್ನಾಟಕದ್ದು ಇರದೇ ವರ್ಧಾ ಅಥವಾ ವಿದರ್ಭಾ, ತಾಪೀ ನದಿಯೆಂದು ವಿದ್ವಾಂಸರ ಅಭಿಪ್ರಾಯ. ಗೋದಾವರಿ ನರ್ಮದೆಗಳ ಜೊತೆಗೆ ಯಮುನಾ, ಪಯೋಷ್ಣಿ (ಪೂರ್ಣಾ) ನದಿಗಳನ್ನು ತ್ರಿವಿಕ್ರಮ ಹೆಸರಿಸಿದ್ದಾನೆ. ಇವೆಲ್ಲ ರಾಷ್ಟ್ರಕೂಟರ ಪ್ರಭಾವಲಯದಲ್ಲಿ ಹರಿಯುತ್ತಿದ್ದ ನದಿಗಳಾಗಿದ್ದವು. ಗಂಧಮಾದನ, ಶ್ರೀಶೈಲ, ಕಾವೇರಿಗಳ ಉಲ್ಲೇಖಗಳನ್ನು 'ನಲಚಂಪು'ವಿನಲ್ಲಿ ಕಾಣಬಹುದು. ಶ್ರೀಶೈಲವು ಹಿಮಾಲಯದಂತೆ ಮತ್ತು ಕಾವೇರಿಯು ಗಂಗೆಯಂತೆ ತ್ರಿವಿಕ್ರಮನಿಗೆ ಪವಿತ್ರವಾಗಿದ್ದವು.

ಗದ್ಯಪದ್ಯ ಮಿಶ್ರಿತ ಚಂಪೂ ಶೈಲಿಯ ರಚನೆಗಳು ದಕ್ಷಿಣದಲ್ಲೇ ಹುಟ್ಟಿಕೊಂಡು, ಸಂಸ್ಕೃತ ಹಾಗೂ ಇತರ ಭಾಷೆಗಳಲ್ಲಿ ಬೆಳೆದು ಬಂದವು. ತ್ರಿವಿಕ್ರಮನದು, ಪಾಂಡಿತ್ಯ ಪೂರ್ಣವಾದ, ಗಡಚಾದ ಶೈಲಿ. ಶ್ಲೇಷಾಲಂಕಾರವಂತೂ ಆತನಿಗೆ ಅತಿಪ್ರಿಯವಾದದ್ದು . ಹೀಗಾಗಿ ವರ್ಣನೆಗಳು ಕ್ಲಿಷ್ಟವಾಗಿ, ಕೆಲವೆಡೆ ಕೃತ್ರಿಮವಾಗಿ ಕಂಡರೂ ಕವಿಯ ಸಮಕಾಲೀನ ಜೀವನದ ಕೆಲವು ಹೊಳಹುಗಳನ್ನು ಹೆಕ್ಕಿ ತೆಗೆಯಬಹುದಾಗಿದೆ. ರಾಜಪರಿವಾರದಂತೆಯೇ ವ್ಯಾಧ, ಕಿರಾತ, ನಿಷಾದ ಮುಂತಾದ ವನಜೀವಿಗಳ, ಗ್ರಾಮ ಹಾಗೂ ನಗರವಾಸಿಗಳ, ಸೈನ್ಯ ಸಂಚಾರದ ವಾಸ್ತವ ಚಿತ್ರಗಳನ್ನು ಪಡೆಯಬಹುದಾಗಿದೆ. ಕವಿಯು ಉಲ್ಲೇಖಿಸಿದ ಸಮಕಾಲೀನ ಸಮಾಜದ ಊಟ, ಉಣಿಸು, ವೇಷ-ಭೂಷಣ, ಶಿಕ್ಷಣ, ಲಲಿತಕಲೆಗಳು, ಸೈನ್ಯ ಸಂಚಾರ, ಸ್ತ್ರೀಯರ ಸ್ಥಾನಮಾನಗಳು ಹಾಗೂ ಪರಿಸರ ಪ್ರೀತಿಯ ಕುರಿತಾದ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಭೋಜನ ಪದ್ಧತಿ :** (ಭಾರತದ) ಉತ್ತರ ಪಶ್ಚಿಮ ಹಾಗೂ ಪೂರ್ವದಿಕ್ಕುಗಳ ಜನರು ಮಾಂಸ, ಮತ್ಸ್ಯಗಳಿಲ್ಲದೇ ಊಟ ಮಾಡುವುದನ್ನೇ ಅರಿಯರು! ಪೂರ್ವದವರಿಗೆ ಸಕ್ತು (ಸತ್ತೂ) ಇಷ್ಟ, ದಾಕ್ಷಿಣಾತ್ಯರಲ್ಲಿ ಮಾತ್ರ ಮಾಂಸಹಾರ ವಿರಳ! ಎಂದು ದಾಕ್ಷಿಣಾತ್ಯರ ಆಹಾರ ಪದ್ಧತಿಯ ಭಿನ್ನತೆಯನ್ನು ನಳನ ಪರಿವಾರವು ಉತ್ತರದಿಂದ ದಕ್ಷಿಣದ ಕುಂಡಿನ ಪುರಕ್ಕೆ ಬಂದಾಗ ಅರಿಯುವಂತೆ, ತ್ರಿವಿಕ್ರಮ ಭಟ್ಟ, ಪ್ರಸಂಗವೊಂದನ್ನು ಮೂಡಿಸಿದ್ದಾನೆ. ದಮಯಂತಿಯು, ಹೆಚ್ಚಿನ ಸಂಭ್ರಮದಿಂದ ಸ್ವಂತದ ಮೇಲ್ವಿಚಾರಣೆಯಲ್ಲಿ, ನಳನೊಂದಿಗೆ ಬಂದ ಇಡೀ ಸೈನ್ಯ ಪರಿವಾರಕ್ಕೆ ಸಾಲುವಷ್ಟು ಅಡಿಗೆಯನ್ನು ತಯಾರಿಸಿ ಪೂರೈಸುತ್ತಾಳೆ. ಅದರಲ್ಲಿ 'ಕೂರ' ಎಂಬ ಸಪುರ ಉದ್ದ ಅಗಲಿನ ಸುವಾಸನೆಯ ಅಕ್ಕಿಯ ಅನ್ನವನ್ನು ತುಪ್ಪದಲ್ಲಿ ಬೇಯಿಸಲಾಗಿತ್ತು. (ಆಜ್ಯಪ್ರಾಜ್ಯ) ಬಗೆಬಗೆಯ ತರಕಾರಿಗಳನ್ನು ವಿವಿಧ ಮಸಾಲೆಗಳೊಂದಿಗೆ ಸ್ವಾದಿಷ್ಟಗೊಳಿಸಲಾಗಿತ್ತು. ಗಮುಗಮಿಸುವ ಧೂಪನೀಡಿದ ಶಿಖರಿಣಿ (ಸೀಕರಣೆ) ಹಾಗೂ ಚತುರ್ಜಾತಕ ಅಥವಾ ಏಲಕ್ಕಿ, ಲವಂಗ, ಪತ್ರೆ ಹಾಗೂ ಮೆಣಸುಗಳ ಮಸಾಲೆ ಸೇರಿಸಿದ ಕಬ್ಬಿನರಸವನ್ನು ಕುಡಿಯಲು ಪೂರೈಸಲಾಗಿತ್ತು. ಕೊನೆಯಲ್ಲಿ ಶಾಲಿ (ಗಂಧಸಾಳಿ) ಯ ಅನ್ನವನ್ನು

ಗಟ್ಟಿ ಮೊಸರು ಸೇರಿಸಿ ಊಟಮಾಡಿ! ಎಂದು ದೂತರು ನಳನ ಪರಿವಾರದವರಿಗೆ ದಕ್ಷಿಣ ಪದ್ಧತಿಯ ಊಟದ ಪರಿಚಯ ಕೊಡುತ್ತಾರೆ.

ಕ್ಷತ್ರಿಯ ವರ್ಗದವರಲ್ಲಿ ಮಾಂಸಾಹಾರ ಪ್ರಚಲಿತವಿತ್ತು. ತುಪ್ಪದಲ್ಲಿ ಕರಿದು ತಯಾರಿಸಿದ್ದ ವ್ಯಂಜನಗಳು ಅಶೋಕವರ್ತಿ (ಬಹುಶಃ ಇಂದಿನ ಕಬಾಬ್‌ಗೆ ಹೋಲುವ) ಎಂಬ ಮಾಂಸದ ವಡೆಯನ್ನು, ಹಾಲಿನ ಪಕ್ವಾನ್ನಗಳನ್ನು ಮೋದಕ, ಗಾರಿಗೆಗಳನ್ನು ತ್ರಿವಿಕ್ರಮ ಹೆಸರಿಸಿದ್ದಾನೆ. ಬೆಳ್ಳಿ ಬಂಗಾರದ್ದೇ ಅಲ್ಲದೇ ಶಂಖದ ಚಿಪ್ಪುಗಳನ್ನು ಭೋಜನ ಪಾತ್ರೆಗಳನ್ನಾಗಿ ಬಳಸುತ್ತಿದ್ದರು, ರಾಜವರ್ಗದವರು.

"ಭೋಜನವೇದಿ" ಅಥವಾ ಊಟದ ಕಿರಿದಾದ ಟೇಬಲ್ಲುಗಳು ಅರಸರಲ್ಲಿ, ಸಿರಿಮಂತರಲ್ಲಿ ಬಳಕೆಯಲ್ಲಿದ್ದು ಸೂಪಕಾರರೂ ಅವರ ಅಂಗನೆಯರೂ ಊಟದಲ್ಲಿ ಕ್ರಮವಾಗಿ ವ್ಯಂಜನಾದಿಗಳನ್ನು ಬಡಿಸುತ್ತಿದ್ದರು. ಮುದ್ಗಸೂಪ (ಹೆಸರು ತೊವ್ವೆ) ಯಿಂದ ಕೂಡಿದ ಅನ್ನ ಪ್ರಾರಂಭದ ತುತ್ತಾಗಿದ್ದರೆ ಹೈನದ ಪ್ರಕಾರದಿಂದ ಕೂಡಿ ಕೊನೆಗೊಳ್ಳುತ್ತಿತ್ತು. ಮಾಂಸ ಹಾಗೂ ಪಕ್ವಾನ್ನಗಳು ನಡುವೆ ಬರುತ್ತಿದ್ದವು. ಹಣ್ಣಿನ ರಸಗಳು ಕಬ್ಬಿನರಸ ಹಾಗೂ ಮಜ್ಜಿಗೆಯನ್ನು ಹೀರುತ್ತ ಭುಂಜಿಸುವ ಪ್ರಕಾರವನ್ನು ೧೨ನೇ ಶತಕದ ಮಾನಸೋಲ್ಲಾಸದಲ್ಲಿ ಉಲ್ಲೇಖಿಸಿದ್ದರಿಂದ ಭೋಜನ ಪದ್ಧತಿ, ಶತಶತಮಾನಗಳಲ್ಲಿ ಏಕಪ್ರಕಾರವಾಗಿ ನಡೆದು ಬಂದಿದೆ ಎನ್ನಬಹುದು. ಊಟದ ಬಳಿಕ ಆಚಮನ ಮಾಡಿ ಚಂದನದ ಲೇಪವನ್ನು ಕೈಗೆ ತಿಕ್ಕಿಕೊಳ್ಳುತ್ತಿದ್ದರು. ಹೆಚ್ಚು ಕಡಿಮೆ ತ್ರಿವಿಕ್ರಮನ ಕೆಲವೇ ವರ್ಷಗಳ ಬಳಿಕ ಬಂದ ಪಂಪನ ಕೃತಿಗಳಲ್ಲಿ ಭೋಜನದ ವಿವರಗಳಲ್ಲಿ (ಸಾಮಿಷಹಾರ ಬಿಟ್ಟು) ಹಾಗೂ ಭೋಜನೋತ್ತರ ಯಕ್ಷಕರ್ದಮ ಸುವಾಸನೆಯ ಲೇಪವನ್ನು ಕೈಗೆ ತಿಕ್ಕಿಕೊಳ್ಳುತ್ತಿದ್ದ ಕ್ರಮವನ್ನು ಹೇಳಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಧೂಪದ ಧೂಮ್ರವನ್ನು ಆಘ್ರಾಣಿಸಿ ಬಾಯಿಯ ಊಟದ ವಾಸನೆ ಕಳೆದುಕೊಂಡು, ಷೋಡಶ ತಾಂಬೂಲ ಸೇವಿಸುವುದು ಪದ್ಧತಿಯಾಗಿತ್ತು.

ಆ ಸಮಯದಲ್ಲಿ ಬರುತ್ತಿದ್ದ ಸಾಮಾನ್ಯರಿಗೂ, ಆಗುಂತಕರಿಗೂ ತಾಂಬೂಲ ನೀಡಿ ಸತ್ಕರಿಸುವ ಸೌಜನ್ಯವನ್ನು ಅರಸನಾದವನು ತೋರುತ್ತಿದ್ದ. ದಾಕ್ಷಿಣಾತ್ಯರಿಗೆ ತೀರ ಸಹಜವಾಗಿ ಶಾಕಾಹಾರ ರೂಢಿಯಾಗಿತ್ತು. ಈ ಸಂದರ್ಭದಲ್ಲಿ ನಳನು, ಕುಂಡಿನಪುರಕ್ಕೆ ಕೈಗೊಂಡ ಪ್ರಯಾಣದಲ್ಲಿ, ದಾರಿಯಲ್ಲಿ ಕಂಡ 'ಶಾಕವಾಟಿಕಾ' ಅಥವಾ ತರಕಾರಿ ತೋಟದ ನೋಟವನ್ನು ನೀಡುವದು ಉಚಿತವೆನಿಸುತ್ತದೆ. ನದಿಯ ನೀರನ್ನು ಕಾಲುವೆಗಳಿಂದ ತಂದು ಹರಿನೀರನ್ನಾಗಿಸಿ ಚೆನ್ನಾಗಿ ಸಿಂಚನ ಮಾಡಿ ಸುಪುಷ್ಟವಾದ ಗಡ್ಡೆಗೆಣಸು, ಹಣ್ಣು, ಕಾಯಿ, ಪಲ್ಲೆಗಳನ್ನು ಬೆಳೆಯುತ್ತಿದ್ದುದರಿಂದ ಅವುಗಳು ನಳನಳಿಸಿ ಕಂಗೊಳಿಸುತ್ತಿದ್ದವು. 'ಕಂದಲಿತ' ಕಂದಗಳಾದ ಸೂರಣ, ಗೆಣಸುಗಳು ಹೇರಳವಾಗಿದ್ದಂತೆ 'ಕರ್ಕಟಿಕಾ'(ಕಾಕಡಿ ಅಥವಾ ಸೌತೆಕಾಯಿ)ಗಳು ಕುರುಕುರು ಎನ್ನುವಂತೆ, ಕರ್ಕಶವಾಗಿದ್ದವು! ಕಾಲಿಂಗ ಅಥವಾ ಕಲ್ಲಂಗಡಿ ಹಣ್ಣುಗಳು ಬೃಹದಾಕಾರವಾದವು. ಕುಂಬಳ ಕಾಯಿಗಳಿಂದ ತುಂಬಿದ ಬಳ್ಳಿಗಳು, ಹಂದರಗಳ ಆಧಾರ ಹೊಂದಿದ್ದವು. ದುಂಡುಬದನೆಗಳು ಥಳಥಳಿಸಿದರೆ ಆನೆ ಕಿವಿಗಳಷ್ಟು (ಹಸ್ತಿಕರ್ಣ) ದೊಡ್ಡ

ಪತ್ರೊಡೆ ಎಲೆಗಳು ಬೆಳೆದು ನಿಂತಿದ್ದವು. ಮೂಲಂಗಿಗಳು ತೋರವಾಗಿದ್ದರೆ ದೊಡ್ಡ ಹಿಡಿಯಷ್ಟು ಗಾತ್ರದ ಈರುಳ್ಳಿ (ಪಿಂಡಿತ ಪಲಾಂಡು)ಗಳು ಕಂಡುಬರುತ್ತಿದ್ದವು. ಇದಲ್ಲದೇ ಜೀವಂತಿಕಾ, ಪುನರ್ನವಾ, ರಾಜಿಕಾ (ಹರಿವೆ, ಗೋಳಿ, ರಾಜಗಿರಿ)ಸರ್ಷಪ (ಸಾಸಿವೆ) ಸೊಪ್ಪುಗಳು ಎಲ್ಲೆಲ್ಲೂ ಕಂಗೊಳಿಸುತ್ತಿದ್ದವು. ಹೈನಿನ ಸಮೃದ್ಧಿಯ ಜೊತೆಗೆ ಅವಶ್ಯವಿದ್ದ ಜೀವನ ಸತ್ವಗಳನ್ನೆಲ್ಲ ಪೂರೈಸುವ ಇಂಥ ತರಕಾರಿಗಳ ಮಹತ್ವ ಮತ್ತು ಹೇರಳವಾಗಿ ಅವನ್ನು ಬೆಳೆಯುತ್ತಿದ್ದ ಕನ್ನಡ ಜನಕ್ಕೆ ಮಾಂಸಾಹಾರದ ಅವಶ್ಯಕತೆ ಇರದಿದ್ದರೆ ಅಚ್ಚರಿಯಲ್ಲ!

ಅರಸನ ಬಿಡದಿಯಿದ್ದಲ್ಲಿ 'ಅತಿಥಿ ಸತ್ರ' ವಿರುತ್ತಿತ್ತು. ಭೋಜನ ಸಮಯದ ತಯಾರಿ, ಅವಸರ, ಗದ್ದಲಗಳನ್ನು ತ್ರಿವಿಕ್ರಮ ಸೊಗಸಾಗಿ ಕೊಡಮಾಡಿದ್ದಾನೆ. ಭೋಜನ ಶಾಲೆಗಳನ್ನು ತೊಳೆದು. ಶುಚಿಗೊಳಿಸಲಾಗುತ್ತಿತ್ತು. ಗೋಗ್ರಾಸಕ್ಕೆ ಆಕಳುಗಳನ್ನು ತರಲಾಗುತ್ತಿತ್ತು. ಕಾಕಬಲಿಗಾಗಿ ಕಂಬಗಳ ಮೇಲೆ ತೊಳೆದ ಹಲಿಗೆಗಳ ಮೇಲೆ ತುತ್ತು ಇಡಲಾಗುತ್ತಿತ್ತು. ರಾಜ್ಯದ ಅಧಿದೇವತೆಗಳಿಗೆ, ವೈಶ್ಯದೇವನಿಗೆ ಆಹುತಿಯಿಟ್ಟ ಬಳಿಕ ಬ್ರಾಹ್ಮಣರಿಗೆ ಅಗ್ರಾಶನ, ಜೊತೆಗೆ ದೀನ, ಅನಾಥ, ಭಿಕ್ಷುಕರಿಗೆ ಊಟ ನೀಡಿದ ಬಳಿಕವೇ ಅರಸ ಹಾಗೂ ಪರಿಜನರ ಊಟದ ವ್ಯವಸ್ಥೆ. ರಂಗವಲ್ಲಿ ಹೊಂದಿದ ಭೋಜನ ವೇದಿಗಳಲ್ಲಿ ಏರ್ಪಡುತ್ತಿದ್ದುದ್ದು ವಿಶೇಷ.

**ವೇಷ-ಭೂಷಣಗಳು :** ಯುಗದ ಪದ್ಧತಿಯಂತೆ, ಗಂಡಸರು ಹೆಂಗಸರು ಭುಜ ತೋಳು, ಮುಂಗೈ ಬೆರಳು, ಕೊರಳು ಸೊಂಟ ಹಾಗೂ ಕಾಲುಗಳಲ್ಲಿ ಬಗೆಬಗೆಯ ಆಭರಣಗಳನ್ನು ತೊಡುತ್ತಿದ್ದರು. ಹೆಂಗಸರು ಬೈತಲೆಯಲ್ಲಿ ಮುತ್ತಿನ ಆಭರಣ (ಸೀಮಂತ ಮೌಕ್ತಿಕ) ಇಟ್ಟುಕೊಳ್ಳುತ್ತಿದ್ದರು. ಕಿವಿಗಳಲ್ಲಿ ಚಿಗುರು, ಚಿಕ್ಕ ಹೂಗಳ ಗುಚ್ಛ, ಕಮಲದ ಹೂಗಳನ್ನು ಗಂಡಸರು ಹೆಂಗಸರು ಧರಿಸುವುದನ್ನು ತ್ರಿವಿಕ್ರಮ ಉಲ್ಲೇಖಿಸಿರುವುದನ್ನು ಗಮನಿಸಬೇಕು. ಬಾದಾಮಿಯ ಅಜಂತಾದ ಮತ್ತು ಆ ಬಳಿಕದ ಶಿಲ್ಪ ಅಥವಾ ಚಿತ್ರಗಳಲ್ಲಿ ಬೃಹದಾಕಾರದ ಕರ್ಣಾಭರಣಗಳಿವೆ. ಇವೆಲ್ಲ ಶಿಲ್ಪಗಳು, ಕಲ್ಪನಾ ವಿಲಾಸವಾಗಿರದೇ ಹೂ, ಪರ್ಣ, ಬೆಂಡು, ತಾಳೆಯೋಲೆಗಳಲ್ಲಿ ಕಲಾತ್ಮಕವಾಗಿ ಕೊರೆದ ಹಗುರಾದ ಆಭರಣಗಳಿರಬಹುದೆಂಬ ಊಹೆಗೆ ಅವಕಾಶವಾಗುತ್ತದೆ. (ರತ್ನಖಚಿತ ಸುವರ್ಣಾಭರಣಗಳಾಗಿದ್ದರೆ ಕಿವಿಗಳು ಹರಿದೇ ಹೋಗಬಹುದಿತ್ತು! ಎಂದಿನಂತೆ ಮುತ್ತಿನ ಹಾರಗಳು ಜನಪ್ರಿಯವಾಗಿದ್ದವು.

ಹಾವಿನ ಪರೆಯಂತೆ (ಕೇಚುಲ) ಪಾರದರ್ಶಕವಿದ್ದ ಬಟ್ಟೆಯ ಉಲ್ಲೇಖವಿದ್ದಂತೆ, ರೇಶ್ಮೆಯ ಚೀನಾಂಬರ, ಪಟ್ಟ ಮತ್ತು ನೇತ್ರ ಪ್ರಕಾರಗಳಿದ್ದವು. 'ನೇತ್ರ'ವೆಂದರೆ ಚಿತ್ರಿತ, ಬಣ್ಣಬಣ್ಣದ ನೇಯ್ಗೆಯ ರೇಷ್ಮೆಯ ಬಟ್ಟೆಯಾಗಿದ್ದು ಅದರ ರವಕೆಯನ್ನು ಹೆಸರಿಸಲಾಗಿದೆ. (ಕಂಚುಕ ಮಂಡನೇಷು ನೇತ್ರ ವಿಕರ್ತನಂ) ರವಕೆ ತೊಡುವದು ಸಾಮಾನ್ಯವಾಗಿದ್ದರೂ ಕಪೋಲ, ತೋಳ, ವಕ್ಷಸ್ಥಳದ, ನಡುವಿನ ದೇಹದ ಮುಚ್ಚದೇ ಇದ್ದ ಭಾಗಗಳಲ್ಲಿ ಚಂದನ ಕೇಸರಿ (ಕುಂಕುಮ) ಕಸ್ತೂರಿಗಳಿಂದ ಅಂದಚಂದದ ಹೂಬಳ್ಳಿಗಳನ್ನು ಚಿತ್ರಿಸಿಕೊಳ್ಳುವ ಪದ್ಧತಿ ಇತ್ತು. ಲೇಪಾಕ್ಷಿ ಭಿತ್ತಿ ಚಿತ್ರಗಳಲ್ಲಿ ಇದನ್ನು ಕಾಣಬಹುದಾಗಿದೆ. ಪಾದಗಳಿಗೆ ಅಲಕ್ತಕ

ತೊಡೆದುಕೊಳ್ಳುತ್ತಿದ್ದರು. ಚಂದನ ಶ್ರೀಗಂಧ, ಕರ್ಪೂರ, ಕೇಸರಿ, ಕಸ್ತೂರಿಗಳನ್ನು ಇಷ್ಟವಿದ್ದ ಪ್ರಮಾಣದಲ್ಲಿ ಬೆರೆಸಿದ ಲೇಪವನ್ನು ಮೈಮೇಲೆಲ್ಲ ತೊಡೆದುಕೊಳ್ಳವದು, (ಪಟ್ಟವಾಸ ಪಾಂಸು) ಮೇಲ್ವರ್ಗದವರಲ್ಲಿ ಸಾಮಾನ್ಯವಾಗಿತ್ತು. ಬಗೆಬಗೆಯ ಬಣ್ಣದ ತಿಲಕಗಳನ್ನು ಧರಿಸುತ್ತಿದ್ದರು. ದಮಯಂತಿ ಬಿಳಿ, ಕೆಂಪು ಕಪ್ಪು, (ಶ್ರೀಗಂಧ, ಕುಂಕುಮ, ಕಸ್ತೂರಿಗಳ) ಬಣ್ಣದ ತ್ರಿಪುಂಡ್ರವನ್ನು ಧರಿಸಿದ್ದಳಂತೆ.

ಗ್ರಾಮಯುವತಿಯರಾಗಲಿ, ಅರಣ್ಯವಾಸಿ , ವ್ಯಾಧರಮಣಿಯರಾಗಲಿ ಅಲಂಕಾರದಲ್ಲಿ ಹಿಂದೆ ಬೀಳುತ್ತಿರಲಿಲ್ಲ. ಚಂದನ ಕಸ್ತೂರಿಗಳ ಹಂಗಿಲ್ಲದೇ ಹಿಟ್ಟನ್ನು ನೀರಲ್ಲಿ ಕಲಿಸಿ ಹೂಬಳ್ಳಿಗಳನ್ನು ಕಪೋಲಾದಿಗಳಲ್ಲಿ ಚಿತ್ರಿಸಿಕೊಳ್ಳುವರು. ಸುಗಂಧ ಲೇಪದ ಬದಲಿಗೆ ಅರಿಸಿನವನ್ನೇ ಮುಖಕ್ಕೆ ತೊಡೆದುಕೊಂಡು, ಕಣ್ಣಿಗೆ ಜೋರಾಗಿಯೇ ಕಾಡಿಗೆ ತೀಡಿಕೊಂಡು (ಉಲ್ಬಣಂ ಕಜ್ಜಲಂ) ತೃಪ್ತರಾಗುವರು. ಕೂದಲಲ್ಲಿ ಕರ್ಣಿಕಾರ ಮೊಗ್ಗಿನ ಮಾಲೆ, ಕೊರಳಲ್ಲಿ ಗಾಜಿನ ಮಣಿಸರ, ಕೈಗಳಲ್ಲಿ ಅರಗಿನ ಬಳೆಗಳ ಅಲಂಕಾರದಿಂದಲೇ ಆಕರ್ಷಿತವಾಗಿ ಕಾಣುತ್ತಿದ್ದರು. ವ್ಯಾಧಸ್ತ್ರೀಯರು ಹಸ್ತಿದಂತದ ಓಲೆ, ಗುಲಗಂಜಿಸರ, ಹೂಬಳ್ಳಿಗಳ ತೊಡಿಗೆ ನವಿಲುಗರಿಗಳನ್ನು ಮುಡಿಯಲ್ಲಿ ಧರಿಸಿ ಸಂಭ್ರಮ ಪಡುವರು.

ಕರ್ನಾಟಕದ ಸೈನ್ಯದಲ್ಲಿ ಒಂದು ಬಣ, ಕೈತುಂಬ ಲೋಹದ ಬಳೆಗಳನ್ನು ತೊಟ್ಟು ಕೂದಲನ್ನು ಮೇಲಕ್ಕೆತ್ತಿ ಬಟ್ಟೆಯಲ್ಲಿ ಕಟ್ಟಿ ಅರ್ಧ ತೊಡೆಯವರೆಗಷ್ಟೆ ವೀರಗಚ್ಚೆಯ ಉಡಿಗೆ ತೊಟ್ಟು ಭಲ್ಲೆ ಹಿಡಿದು ಅಶ್ವಾರೋಹಿಗಳ ಜೊತೆಗೆ ವೇಗವಾಗಿ ನಡೆದು ಬರುತ್ತಿದ್ದರು (ಚಿತ್ರ1). ಇಂಥ ಉಡುಗೆ ತೊಡಿಗೆಯನ್ನು ಸಮಕಾಲೀನ ಶಿಲ್ಪಗಳಲ್ಲಿ ಗುರುತಿಸಬಹುದಾಗಿದೆ. ಸೊಂಟದಲ್ಲಿ ಬ್ಚಾಕು ಇರುತ್ತಿತ್ತು (ಚಿತ್ರ 2). ದೇಶದ ತುಂಬ ಓಡಾಡಿ ತೀರ್ಥಾಟನೆ ಮಾಡುತ್ತಿದ್ದ ಬಡ ಪಥಿಕನನ್ನು ತ್ರಿವಿಕ್ರಮ ಮರೆತಿಲ್ಲ. ಈತ ಒಣಗಿದ ಬಳ್ಳಿಯ ನಾರಿನಿಂದಲೇ ಕೂದಲನ್ನು ಕಟ್ಟಿಕೊಂಡಿದ್ದ. ಬಣ್ಣದ ಬಟ್ಟೆಯ ಈ ಕೌಪೀನಧಾರಿ ಮಣ್ಣಿನ ಮಣಿಗಳ ಹಾರವನ್ನು ಕೊರಳಲ್ಲಿ ಧರಿಸಿ ಚಿಂದಿ ಬಟ್ಟೆಗಳನ್ನೇ ಮೋಜುಗಳ ಬದಲಾಗಿ ಕಾಲಿಗೆ ಕಟ್ಟಿಕೊಂಡು ಅಡಿಕೆ ಹಾಳೆಯ ಭಿಕ್ಷಾಪಾತ್ರವನ್ನು ಕೈಯಲ್ಲಿ ಹಿಡಿದಿದ್ದನಂತೆ.

### ರಾಜರ ಶಿಕ್ಷಣ :

ಯುದ್ಧಶಾಸ್ತ್ರದ ಪ್ರಮುಖ ಭಾಗವಾಗಿ ಪ್ರಚಲಿತವಿದ್ದ ವಿವಿಧ ಶಸ್ತ್ರಾಸ್ತ್ರ, ಗಜಶಾಸ್ತ್ರ ಬಾಹುಯುದ್ಧ ಮುಂತಾದವು ರಾಜಕುಮಾರರಿಗೆ ಕಡ್ಡಾಯವಾಗಿದ್ದವು. ಬೌದ್ಧ, ಸಾಂಖ್ಯದರ್ಶನಗಳು ಮೀಮಾಂಸಾ, ಛಂದ: ಶಾಸ್ತ್ರ, ವ್ಯಾಕರಣ, ನಿರುಕ್ತ, ಜ್ಯೋತಿಶ್ಶಾಸ್ತ್ರಗಳನ್ನೂ ಅರಿತಿರಬೇಕಾಗಿತ್ತು. ವಾದ್ಯಗಳನ್ನು ನುಡಿಸುವುದು, ಚತುರಂಗ, ದ್ಯೂತದಂತಹ ಕ್ರೀಡೆಗಳು, ಚಿತ್ರವಿದ್ಯೆ, ಕಾಷ್ಠ ಕರ್ಮ (ಮರಗೆಲಸ)ದ ಲೇಪನ ಕರ್ಮ (ಬಣ್ಣ ಅಥವಾ ಪಾಲಿಶ್ ಮಾಡುವುದು)ಗಳಲ್ಲಿ ಆಸಕ್ತಿ ವಹಿಸಬೇಕಿತ್ತು. ವಿವಿಧ ದೇಶಭಾಷೆಗಳು, ಲೋಕಜ್ಞಾನ ಹಾಗೂ ವ್ಯಾವಹಾರಿಕ ವಿಚಾರಗಳನ್ನು ಅರಸುಮಕ್ಕಳು ಅರಿತಿರಬೇಕೆಂದು ತ್ರಿವಿಕ್ರಮನು ಹೇಳಿದ್ದು ವಿಶೇಷ!

ದಮಯಂತಿಗೆ ದೊರೆತಿದ್ದ ಶಿಕ್ಷಣದ ವಿವರಗಳಿಂದ ಮೊದಲಿನಿಂದಲೂ ರಾಜಮನೆತನದ ಮಹಿಳೆಯರಿಗೆ ಲಭ್ಯವಾಗುತ್ತಿದ್ದ ವಿದ್ಯೆಯ ಹಲಪ್ರಕಾರಗಳು ತಿಳಿಯುತ್ತವೆ. ಎಳೆತನದಿಂದಲೇ ಕುಲಾಚಾರಗಳ ವೈಶಿಷ್ಟ್ಯಗಳನ್ನು ಗುರುಹಿರಿಯರು ಹೇಳಿಕೊಡುತ್ತಿದ್ದರು. ಕೂರ್ಚಿಕ (ಕುಂಚ) ಹಾಗೂ ಶಲಾಕಾ (ಕಂಟ) ಕಲೆ ಅಂದರೆ ತಾಳೆಯೋಲೆ ಮತ್ತು ಇತರ ಮಾಧ್ಯಮಗಳ ಮೇಲೆ ಚಿತ್ರ ಹಾಗೂ ಅಕ್ಷರಗಳನ್ನು ಮೂಡಿಸುವ, ಕೊರೆಯುವ ಕಲೆಯನ್ನು ಕಲಿಸಲಾಗುತ್ತಿತ್ತು. ಚಿಕಿತ್ಸೆಯ ವಿಧಾನಗಳು, ಸಾಕುಪ್ರಾಣಿಗಳ ತರಬೇತಿ, ನೃತ್ಯ, ಸಂಗೀತ, ವಿವಿಧ ವಾದ್ಯಗಳನ್ನು ನುಡಿಸುವುದೇ ಅಲ್ಲದೇ ಅವುಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ರಚಿಸುವ ಪ್ರಬುದ್ಧತೆ ಬರುವಂತೆ ನೋಡಿಕೊಳ್ಳಲಾಗುತ್ತಿತ್ತು. ಹೂಮಾಲೆಗಳ ರಚನೆ, ಪತ್ರಚ್ಛೇದ (ಎಲೆಗಳನ್ನು ಕತ್ತರಿಸಿ ಬಗೆಬಗೆಯ ಪ್ರಾಣಿ, ಪುಷ್ಪ, ಆಕೃತಿಗಳನ್ನು ಮಾಡುವುದು) ಪತ್ರ-ಲೇಖನಗಳನ್ನು ಅಭ್ಯಸಿಸುವುದರ ಜೊತೆಗೆ ಸಂಸ್ಕೃತ ಕಾವ್ಯ - ಪ್ರಬಂಧಗಳ ಪರಿಚಯ ಹಾಗೂ ಪದ್ಯರಚನೆ, ಮುಂತಾದವುಗಳ ತರಬೇತಿ ಸಿಗುತ್ತಿತ್ತು. ಇದಲ್ಲದೇ ಪುರಾಣ, ವ್ಯಾಕರಣ, ಜ್ಯೋತಿಷ್ಯ, ನಿರುಕ್ತ ಕಲ್ಪಗಳ ಕುರಿತಾದ ಶಿಕ್ಷಣವನ್ನು ಬ್ರಾಹ್ಮಣ ಗುರುಗಳು ದಮಯಂತಿಗೆ ಕೊಡಮಾಡಿದರಂತೆ.

**ಲಲಿತ ಕಲೆಗಳು :**

ಹಿಂದಿನ ಕವಿ ಕಾವ್ಯ ಸಂಪ್ರದಾಯದಂತೆ ಕವಿಯಾಗ ಬಯಸಿದವನು. ಪೂರಕವಾಗುವ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ತತ್ವಶಾಸ್ತ್ರಗಳ ಜೊತೆಗೆ ಆಗಮ ರಾಜನೀತಿ, ನಾಟ್ಯಶಾಸ್ತ್ರ, ಕಾಮಶಾಸ್ತ್ರಗಳ ಅಧ್ಯಯನ ಕೈಕೊಳ್ಳಬೇಕಾಗಿತ್ತು. ಲೋಕಾಯತನ (ವಿವಿಧ ಜನಾಂಗಗಳ ರೀತಿ, ನೀತಿ, ಭೌಗೋಲಿಕ ಸ್ವರೂಪ ಇತ್ಯಾದಿ) ವಿರಚನಾ (ಅದ್ಭುತ ರಮ್ಯ ಕಥೆಗಳು) ಹಾಗೂ ಪ್ರಕೀರ್ಣ (ಧನುರ್ವೇದ, ಪಾಲಕಾಪ್ಯ, ರತ್ನಪರೀಕ್ಷೆ ಯೋಗಾದಿಗಳು) ಅವನಿಗೆ ಗೊತ್ತಿರಲೇಬೇಕಿತ್ತು. ಮೇಲಿಂದ ಮೇಲೆ ಆ ಸ್ಥಾನದ ಒಳಗೂ ಹೊರಗೂ ನಡೆಯುವ ಕಾವ್ಯಗೋಷ್ಠಿ, ಶಾಸ್ತ್ರ ಕಥಾ ಪ್ರಸಂಗಗಳಲ್ಲಿ ಪಾಲ್ಗೊಂಡು ಕವಿಯಾದವನು ಮಿಗಿಲೆನಿಸಿಕೊಳ್ಳಬೇಕಿತ್ತಲ್ಲ? ಹುಟ್ಟಾಪಡೆದ ಕವಿತಾಪ್ರತಿಭೆಗೆ ವಿವಿಧ ವಿಷಯಗಳ ಅಧ್ಯಯನವು 'ವ್ಯುತ್ಪತ್ತಿ'ಯನ್ನು ನೀಡುತ್ತದೆ. ಎಂಬುದು ಅಂದಿನ ನಂಬಿಕೆ. 'ವ್ಯುತ್ಪತ್ತಿ' ಅಥವಾ ವಿಶೇಷ ಪರಿಣತಿ. ತನ್ನ ಆಸಕ್ತಿಯ ಕ್ಷೇತ್ರದಲ್ಲಿ ಕವಿಯಾದಾತನು ಮೆರೆದು ಸ್ವಂತಿಕೆಯನ್ನು ತೋರಿಸಬೇಕಿತ್ತು. ತ್ರಿವಿಕ್ರಮ ಭಟ್ಟನಿಗೆ ಸಂಗೀತ ಹಾಗೂ ಚಿತ್ರಕಲೆಗಳಲ್ಲಿ ವಿಶೇಷ ಆಸಕ್ತಿ ಇದ್ದದ್ದು ಆತನ ನಿಸರ್ಗ, ನದಿ, ಪರ್ವತಗಳ ಕುರಿತಾದ ಶ್ಲೇಷಯುಕ್ತ ವರ್ಣನೆಗಳಲ್ಲಿ ಕಂಡುಬರುತ್ತದೆ. ಇಂಥಲ್ಲಿ ಎರಡರ್ಥದ ಪಾರಿಭಾಷಿಕ ಶಬ್ದಗಳನ್ನು ಧಾರಾಳವಾಗಿ ಬಳಸುತ್ತಾನೆ. ಇಂಥ ಪಾರಿಭಾಷಿಕ ಶಬ್ದಗಳು ಬಳಕೆ ಈಗ ಇಲ್ಲವಾದ್ದರಿಂದ ಅವನ ಕವಿತ್ವದ ಹೆಗ್ಗಳಿಕೆ ಗ್ರಹಿಸುವುದು ಕಷ್ಟದ್ದಾದರೂ, ಆಯಾ ಕಲೆಗಳಲ್ಲಿ ಅವನಿಗಿದ್ದ ಪಾಂಡಿತ್ಯದ ಕಲ್ಪನೆ ಬರುತ್ತದೆ. ಅಂದು ಪ್ರಚಲಿತವಿದ್ದ ಪ್ರವರ್ಧಮಾನ, ಸಕಲ, ಶಿಶು, ಸ್ವಸ್ತಿಕ, ಸರ್ವತೋಭದ್ರ, ಭೂಷಣತೆ

ಮೊದಲಾದ ಚಿತ್ರಕಲೆಯ ಹಂತಗಳನ್ನು ಕುಂಡಿನಪುರ ವರ್ಣನೆಯ ಸಂದರ್ಭದಲ್ಲಿ ಬಣ್ಣಿಸುತ್ತಾನೆ. ವರ್ತಿಕಾ, ವರ್ಣಕ, ಶಲಾಕಾ, ಕಂದಲಗಳಂಥ ಉಪಕರಣಗಳ ಜೊತೆಗೆ ಉತ್ಕೀರ್ಣತೆ, ಉತ್ಕಟಿತ ರೂಪ (ಗಟ್ಟಿಗೊಳಿಸಿದ್ದು), ಪಿಚ್ಚಲತೆ ಹಾಗೂ ವಜ್ರಲೇಪದಂತಹ ಘಟ್ಟಗಳನ್ನು ಉಲ್ಲೇಖಿಸುತ್ತಾನೆ.

ಸಂಗೀತದಲ್ಲಿ ಸ್ಥಾನ ಮೂರ್ಛೆ, ವರ್ಧಮಾನ, ಪಾಣಿಕ, ಕೂಟ, ತಾನ, ಘನಗಳ ಆಳ ಪರಿಚಯ, ತ್ರಿವಿಕ್ರಮನಿಗಿತ್ತು. ಆ ಸಾರಿತಕ, ಗೀತಕ, ರಸಗೀತಿ, ಋಚಾ, ಸಾಮಗಾನಗಳನ್ನು ಆತ ಹೆಸರಿಸಿದ್ದಾನೆ. ಸಾಮಗಾನ (ಸಾಮ್ನಾ) ಋಚಾ ಅಥವಾ ಋಕ್‌ಗಳ ಶಾಸ್ತ್ರ ಬದ್ಧ ಗಾಯನದೊಂದಿಗೆ ಗ್ರಾಮರಾಗಗಳನ್ನೂ ಅಂದಿನವರು ಸಾಮಾನ್ಯವಾಗಿ ಗೌರವಿಸುತ್ತಿದ್ದರು. ನೂರೆಂಟು ಕರಣಗಳ ಜೊತೆಗೆ ನೃತ್ಯ ಕಲೆಯ ಹೊಸ ಪ್ರಯೋಗಗಳೂ ತ್ರಿವಿಕ್ರಮನಿಗೆ ಗೊತ್ತಿದ್ದವು. ಪಂಪನಿಗೂ ನೃತ್ಯ ಕಲೆಯ ಕುರಿತಾಗಿದ್ದ ಆಸಕ್ತಿಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ನಗರಗಳಲ್ಲಿ ಬಹುಮಹಡಿಗಳ ಕಟ್ಟಡಗಳು ಸಾಮಾನ್ಯವಾಗಿದ್ದವು. ಶುಭ್ರವಾದ ಸುಣ್ಣದ ಲೇಪದಿಂದ ಥಳಥಳಿಸುವ ಹೊರಗೋಡೆಗಳೊಂದಿಗೆ ಬಣ್ಣ ಬಣ್ಣದ ಗಾಜಿನ ಹಂಚು (ಕಾಚಕುಟ್ಟಿಮ) ಗಳನ್ನು ಅವು ಹೊಂದಿರುತ್ತಿದ್ದವು. ಈ ಧಾಮಗಳ ಒಳಗೋಡೆಗಳನ್ನೆಲ್ಲ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಕಾವ್ಯ-ಪುರಾಣಗಳ ಕಥಾನಕಗಳನ್ನು ನಿರೂಪಿಸುವ ಚಿತ್ರಶಾಲಿಕೆಗಳಿದ್ದ ಧಾಮಗಳು, ಸಾರ್ವಜನಿಕರನ್ನು ಆಕರ್ಷಿಸುತ್ತಿದ್ದವು. ಶರತ್‌ಕಾಲದಲ್ಲಿ ಪೌರರು, ತಂತಮ್ಮ ಸ್ತ್ರೀಯರೊಂದಿಗೆ ಬಂದು ಇಂಥ ಚಿತ್ರಗಳನ್ನು ವೀಕ್ಷಿಸಿ ಆನಂದಿಸುತ್ತಿದ್ದರು.

ನಳ ಹಾಗೂ ದಮಯಂತಿಯ ತಂದೆ ಭೀಮನು, ಕುಳಿತ ಸಿಂಹಾಸನಗಳ ಸ್ತಂಭಗಳಲ್ಲಿ ಅತಿವಿಚಿತ್ರ ತ್ರಿಭಂಗಿಯಲ್ಲಿದ್ದ ಕರ್ನಾಟಕ ರಮಣಿಯರ ಚಿತ್ರಗಳಿದ್ದವು. (ಉತ್ಕೀರ್ಣ ಕರ್ನಾಟಕ ರೂಪರಮಣೀಯ ಸ್ತಂಭ ಕಾವಷ್ಟಂಭಂ)ಆಕಳಿಸುತ್ತಿದ್ದ ಮಕರ ಮುಖಗಳಿಂದ ಮುತ್ತಿನ ಮಾಲೆ ಬೀಳುತ್ತಿರುವ ಚಿತ್ರ ಅಗ್ರಭಾಗದಲ್ಲಿದ್ದು, ವ್ಯಾಳಾವಳಿಗಳ ಮುಖಗಳನ್ನು ಅಪೂರ್ವ ಕಲಾಕೌಶಲದಿಂದ (ಪೂರ್ವಕರ್ಮ ನಿರ್ಮಿತಂ) ಕೆತ್ತಿದ ಚಿತ್ರಗಳು ಆ ಬಂಗಾರದ ಸಿಂಹಾಸನದಲ್ಲಿ ಕಂಗೊಳಿಸುತ್ತಿದ್ದವು.

ಪ್ರಯಾಣ ಯೋಗ್ಯವಾದ 'ಯಂತ್ರ ಚಿತ್ರಶಾಲೆ'ಗಳು ನಳನ ಸೈನ್ಯದೊಂದಿಗೆ ಹೊರಟು ಬಂದು ಬೀಡುಬಿಟ್ಟ ವಿಚಾರವನ್ನು ನಲಚಂಪು ಹೇಳುತ್ತದೆ. ಬಹುಶಃ ಬಂಡಿಗಳಲ್ಲಿ ಜೋಡಿಸಿದ ಈ ಚಲಿಸುವ ಯಂತ್ರ ಚಿತ್ರಶಾಲೆಗಳು ಅನೇಕ ರಂಜಿಸುವ ಕಥೆಗಳನ್ನು ಸನ್ನಿವೇಶಗಳನ್ನು ಯಂತ್ರದ ಸಹಾಯದಿಂದ ಓಡಿಸುವ ವ್ಯವಸ್ಥೆಯನ್ನು ಹೊಂದಿದ್ದವು. ಡೇರೆಗಳನ್ನು ಹೂಡಿ ವಿಶ್ರಮಿಸುವ ಸಂದರ್ಭಗಳಲ್ಲಿ, ಪರಿವಾರದವರ ಮನೋರಂಜನೆಗೆ ಏರ್ಪಟ್ಟ ವಿಧಾನ ಇದು ಎಂಬುದು ಸ್ಪಷ್ಟ. ಹಾಡುವವರು ನರ್ತಿಸುವವರು, ವಿವಿಧ ವಾದ್ಯಗಳನ್ನು ನಡುಸುವವರು ಸೈನ್ಯದೊಂದಿಗೆ ಹೋಗುತ್ತಿದ್ದರು. ಸೈನ್ಯ ನಿತಂಬಿನಿ (ಸೈನಿಕರ ಸ್ತ್ರೀಯರ)ಯರನ್ನು ಉಲ್ಲೇಖಿಸಲಾಗಿದೆ.

**ಸೇನೆಯ ಪಯಣ :**

ಬಹುಶಃ ಅತ್ಯಂತ ವಾಸ್ತವಿಕವಾದ ವರ್ಣನೆಯನ್ನು ಸ್ವಯಂವರಕ್ಕೋಸ್ಕರ ನಳನು ಕುಂಡಿನಪುರಕ್ಕೆ ಕೈಕೊಂಡ ಪ್ರಯಾಣಕಾಲದಲ್ಲಿ ನೊಡಬಹುದಾಗಿದೆ. ದಮಯಂತಿಯ ಸ್ವಯಂವರವು ತ್ರಿವಿಕ್ರಮನಿಗೆ ತನ್ನ ಸಮಕಾಲೀನ (ರಾಷ್ಟ್ರಕೂಟರು) ಸೈನ್ಯದ ಸಂಚಾರದ ಚಿತ್ರವನ್ನು ಕೊಡಮಾಡಲು ನೆಪವಾಯ್ತು! ಜೊತೆಗೆ ತನ್ನ ಪ್ರೀತಿಯ ವಿದರ್ಭನಾಡು ಹಾಗೂ ವಿಂಧ್ಯದ ಈಚೆಯ ಪ್ರದೇಶದ ವರ್ಣನೆಗೆ ಕವಿಯು ಒಳ್ಳೆಯ ಅವಕಾಶವನ್ನು ಕಲ್ಪಿಸಿಕೊಂಡಿದ್ದಾನೆ. ಆನೆ, ಕುದುರೆ, ಒಂಟೆ, ಹೇಸರಗತ್ತೆಗಳ ಜೊತೆಗೆ ಎತ್ತು, ಕೋಣ ಹೂಡಿದ ಬಂಡಿಗಳು ಪ್ರವಾಸ ಸಾಧನಗಳಾಗಿದ್ದವು. ಶ್ವೇತ ಛತ್ರಗಳು, ದಂಡಗಳಿದ್ದ ನವಿಲುಗರಿಗಳ ಕೊಡೆಗಳು, ಧ್ವಜ, ಪತಾಕೆಗಳು ಸೈನ್ಯದ ಇರವನ್ನು ದೂರದಿಂದಲೇ ಗುರುತಿಸುವಂತೆ ಮಾಡುತ್ತಿದ್ದವು. ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಹೊತ್ತ ಸೈನಿಕರೊಂದಿಗೆ ಭೇರಿ, ನಗಾರಿ, ಕಹಳೆಗಳು ಬಾರಿಸಲ್ಪಟ್ಟು ಪಯಣಕ್ಕೆ ಅನುಮತಿ ಇತ್ತೊಡನೆ ಸೈನ್ಯದ ಪಯಣ ಹೊರಡುತ್ತಿತ್ತು. ಸಕಲ ಸಾಮಗ್ರಿಗಳನ್ನು ಹೊತ್ತ ಬಂಡಿಗಳೊಡನೆ ನಿಲ್ಲಿರೋ! ಹೊರಡಿರೋ! ಓಡಿರೋ!.... ಎಲ ಎಲಾ ! ರಸ್ತೆ ಬಿಟ್ಟು ಸರಿಯಿರೋ! ಎಂದೆಲ್ಲ ಗದ್ದಲ ಹಾಕುತ್ತ ತಲವಾರುಗಳನ್ನು ಝಳಪಿಸುತ್ತ ಬಿಲ್ಲುಬಾಣಗಳ ಮೇಲೆ ಕೈಯಾಡಿಸುತ್ತ ಸೈನ್ಯ ಹೊರಡುತ್ತಿತ್ತು, ಲಂಪಟತನದಿಂದ ದಾರಿಯಲ್ಲಿ ಸಿಗುವ ಊರು, ಗ್ರಾಮ, ಹೊಲಗಳನ್ನು ಲೂಟಿ ಮಾಡದೇ ಇರುತ್ತಿರಲಿಲ್ಲ.

ದಾರಿ ನಡೆದು, ದುರ್ಗಮ ಪ್ರದೇಶ ದಾಟಿ ದಣಿದಾಗ ನರ್ಮದಾ ನದಿಯ ತಟದ ಪ್ರಶಸ್ತ ಸ್ಥಳದಲ್ಲಿ ಬೀಡು ಬಿಡುವಂತೆ ಅರಸನು ಆಜ್ಞೆಯಿತ್ತಾಗ ಗದ್ದಲ ಹೆಚ್ಚಾಗುತ್ತಿತ್ತು. "ಉದ್ದವಾಗಿ ಬೆಳೆದ 'ನಳ' ಜಾತಿಯ ಹುಲ್ಲು ಇದ್ದಲ್ಲಿ ಕುದುರೆಗಳನ್ನು ಕಟ್ಟಿ ಹಾಕಿ! ಪಾಚಿ ಕಲ್ಲು ಮುಳ್ಳು, ಸವರಿ ಹಾಕಿ! ನೆಲವನ್ನು ಸಮತಟ ಮಾಡಿ! ಮಲಗಲು ಅನುಕೂಲವಾಗುವಂತೆ ಪಟಕುಟೀ (ಬಟ್ಟೆಯ ಕುಟೀರ /ಡೇರೆ) ಹೂಡಿ! ಆನೆಗಳನ್ನು ಸಾಲ, ಸಲ್ಲಕಿ, ಅರ್ಜುನ, ದಂತಹ ಬಲವಾದ ಮರಗಳಿಗೆ ಕಟ್ಟಿ! ಅವಕ್ಕೆ ಕಪೋಲಗಳನ್ನು ತಿಕ್ಕಿ ಅವು ಕಡಿತವನ್ನು ಕಡಿಮೆ ಮಾಡಿಕೊಳ್ಳಲಿ !"

ಎತ್ತುಗಳನ್ನು ಮೆತ್ತಗಿನ ಹುಲ್ಲುಗಾವಲುಗಳಲ್ಲಿ ಬಿಟ್ಟು ಬಿಡಿ. ಕೋಣಗಳು ತೀರದ ಕೆಸರಿನಲ್ಲಿ ಮುಳುಗಿ ಆನಂದಿಸಲಿ! ಒಂಟೆಗಳನ್ನು ವಿರಾಮವಾಗಿ ನಡೆಸಿ, ವೇಗದಿಂದ ಓಡುವ ಹೇಸರಗತ್ತೆಗಳನ್ನು (ಮರೆಯದೇ) ಕಟ್ಟಿಹಾಕಿ! ಆನೆಗಳನ್ನು ಸ್ನಾನಕ್ಕೆ ಬಿಡಿ. ನಂತರ ಅವು ಮೈಗೆಲ್ಲ ಧೂಳಿ ಬಳಿದುಕೊಳ್ಳುವಂತೆ ನೋಡಿಕೊಳ್ಳಿ. ಬಳಿಕ ಅವು ಬಿದಿರಿನ ಹಿಂಡುಗಳಲ್ಲಿ ಸ್ವಚ್ಛಂದವಾಗಿ ಮೇಯಲು ಬಿಡಿ! ಎಂದೆಲ್ಲ ಸೂಚನೆಗಳು ಕೇಳಿ ಬರುತ್ತಿದ್ದವು.

ವಿಶ್ರಮಿಸಿ, ಪ್ರಯಾಣದ ಆಯಾಸ ಕಳೆದು ಪುನಃ ಹೊರಡುವ ಪ್ರಸಂಗದಲ್ಲಿ ಕೇಳಿ ಬರುವ ಸೂಚನೆಗಳೇ ಬೇರೆ. "ಕುದುರೆ, ಒಂಟೆಗಳನ್ನು ತನ್ನಿ! ಶಕಟ (ಬಂಡಿ)ಗಳನ್ನು ಹೂಡಿ. ಪಟಕುಟಿಗಳನ್ನು ಬೇರ್ಪಡಿಸಿ ಸುತ್ತಿ ಇಡಿ. ಮಂಟಪ (ಶಾಮಿಯಾನಾ)ಗಳನ್ನು ಸಡಿಲಿಸಿ! ಕೀಲಕ (ಗೂಟ)ಗಳನ್ನೆಲ್ಲ ಕಿತ್ತು ಜೋಡಿಸಿ ತನ್ನಿ ! ಒಯ್ಯುವಂಥ ಪಾತ್ರೆ ಪಡಗ ಒಟ್ಟು ಮಾಡಿ

ಪ್ರಾಣಿಗಳ ಮರಿಗಳನ್ನು ಹೊತ್ತು ತನ್ನಿ. ಮುಂದೆ ಸಾಗಿರಿ... ನಡೆಯಲು ಮಾರ್ಗ ನಿರ್ಮಿಸಿರಿ! ನೀರಿಗೆ ಇಳಿಯಿರಿ!" ಎಂದೆಲ್ಲ ಲೋಕ ಕೋಲಾಹಲ ಮೂರುಜಗ ಮುಟ್ಟುವಂತಿತ್ತು. ಭೇರಿಯ ನಾದ ಹಾಗೂ ಶಂಖ ಧ್ವನಿಗಳು ಪುನಃ ಪ್ರಯಾಣ ಕೈಕೊಳ್ಳಲು ಸೂಚನೆ ನೀಡುತ್ತಿದ್ದವು.

ಸೈನಿಕರು ದೂರದ ಮಾರ್ಗ ಕ್ರಮಿಸುವಾಗ, ದಾರಿಯಲ್ಲಿದ್ದ ಗ್ರಾಮದ ಸ್ಥಳಗಳನ್ನು ಲೂಟಿ ಮಾಡುವದು ಸ್ವಾಭಾವಿಕವಾಗಿತ್ತಷ್ಟೆ? ಆದರೂ ಪವಿತ್ರ ಸ್ಥಳದ ಶಾಂತಿ ಕೆಡದಂತೆ ಅರಸರು, ಸೇನಾನಿಗಳು ಸಾಕಷ್ಟು ಎಚ್ಚರ ವಹಿಸುತ್ತಿದ್ದರು. ವಿಶ್ರಾಂತಿಗೆ ನರ್ಮದಾ ನದಿ ದಾಟಿ ಬಂದ ಮೇಲೆ ಆ ಸ್ಥಳವು ಅನುಕೂಲವೆಂದು ಕಂಡುಬಂದಾಗ ಕೊಡಲಾಗಿದ್ದ ನಿರ್ದೇಶನಗಳನ್ನು ಗಮನಿಸಬಹುದು. ದೇವಮಂದಿರಗಳಲ್ಲಿ ಸೈನಿಕರು ನುಗ್ಗಿ ವಿಶ್ರಾಮ ಪಡೆಯದಿರಲಿ! ಮುನಿಗಳ ಕುಟೀರಗಳನ್ನು ಹಾಳುಗೆಡವದಿರಲಿ! ಆಶ್ರಮ ಹಾಗೂ ದೇವಾಲಯಗಳ ಪರಿಸರದ ಗಿಡಮರಗಳನ್ನು ಕಡಿಯದಿರಲಿ!ಎಂದು ಅರಸನು ಆಜ್ಞಾಪಿಸಿದ್ದಾನೆಂದು ಸೇನಾಧಿಕಾರಿ ಎಚ್ಚರಿಸುತ್ತಾನೆ. ಸೈನ್ಯ ಸಂಚಲನೆಯಲ್ಲಿ ಇವೆಲ್ಲ ನಡೆಯುತ್ತಿದ್ದವು. ಪ್ರಯಾಣದಿಂದ ದಣಿದ ಸೈನಿಕರು ಕಾಡಿಗೆ ಹೋಗಿ ಗಿಡ ಮರ ಕಡಿದು ತರುವುದನ್ನು, ಡೇರೆ ಇತ್ಯಾದಿ ಹೂಡುವುದನ್ನು ತಪ್ಪಿಸಿಕೊಳ್ಳಲು ದೇವಾಲಯಗಳನ್ನು ಹೊಕ್ಕು ವಿರಮಿಸುವುದು, ಆಶ್ರಮಗಳಲ್ಲಿ ದೊರೆಯುವ ಸೌದೆ, ಮರ ಸಾಮಾನುಗಳನ್ನು ತಂದು ತಮ್ಮ ಕೆಲಸ ಸಾಗಿಸುವದು, ಸಹಜವಾಗಿತ್ತು. ಸೈನ್ಯದಂತಹ ದೊಡ್ಡ ಮಾನವ ಸಮೂಹವನ್ನು ಅದೂ ಕಾಡು_ಮೇಡುಗಳಲ್ಲಿ ನಿಯಂತ್ರಿಸುವುದು ಪ್ರಯಾಸದ ಕೆಲಸವಾಗಿತ್ತು.

ಸೈನ್ಯ ಸಂಚಾರದ ವರ್ಣನೆಗೆ ತ್ರಿವಿಕ್ರಮನು ಬಾಣನ ಹರ್ಷಚರಿತದಿಂದ ಸ್ಫೂರ್ತಿ ಪಡೆದಿದ್ದಾನಾದರೂ ಆತನು ಬಳಸಿದ ವರ್ಣನಾಕ್ರಮ, ಪ್ರಾಕೃತಿಕ ಸ್ವರೂಪ ಭಾಷಾ-ಪ್ರಯೋಗ ಅವನ ಸ್ವಂತದ್ದೇ ಆಗಿದೆ.

**ಸ್ತ್ರೀಯರ ಸ್ಥಾನಮಾನಗಳು :**

ಪ್ರಾಚೀನ ಕೃತಿಗಳಲ್ಲೆಲ್ಲ ಮೇಲುವರ್ಗದ ಮಹಿಳೆಯರ ಅಥವಾ ವಾರಾಂಗನೆಯರ ಸುಖ ಜೀವನದ ಅಥವಾ ಕಲಾಕೌಶಲ್ಯದ ವೈಭವವನ್ನು, ಹೆಚ್ಚೆಂದರೆ ಅವರ ಚಂಚಲತೆ, ಕುಟಿಲತೆ, ವಿಶ್ವಾಸದ ಘಾತಕತೆಗಳನ್ನು ಎತ್ತಿ ಹಿಡಿಯುವುದು ವಾಡಿಕೆ. ತ್ರಿವಿಕ್ರಮನೇನು ಇದಕ್ಕೆ ಹೊರತಾಗಿಲ್ಲ! ಹಾಗೂ ಸ್ತ್ರೀಗೆ ಶ್ರೀ (ಲಕ್ಷ್ಮಿ)ಯನ್ನು ಹೋಲಿಸಿ, ಈರ್ವರೂ ದಾನಕ್ಕೆ ಹಾಗೂ ಉಪಭೋಗಕ್ಕೆ ಮಾತ್ರ ಯೋಗ್ಯರು! ಎಂದು ಸಾಲಂಕಾಯನನೆಂಬ ಮಂತ್ರಿಯ ಬಾಯಿಂದ ನಳನಿಗೆ ಉಪದೇಶ ಕೊಡಿಸಿದ್ದಾನೆ. ಚಂಚಲತೆ ಅವಿಶ್ವಾಸ, ವಿಶ್ವಾಸಘಾತಕತೆ, ಶೃಂಗಾರ ಪ್ರಿಯತೆಗಳೇ ಸ್ತ್ರೀಗುಣವೆಂದೆಲ್ಲ ಸಾರುತ್ತ, ಸ್ತ್ರೀ ಆಕರ್ಷಣೆಯಿಂದ ದೂರವಿರಲು ಅಂಥ ಸೂಚನೆಯನ್ನು ರಾಜನೀತಿಯ ಭಾಗವಾಗಿ ಸೇರಿಸಿದ್ದಾನೆ. ಆತನ ಮಗ ಶ್ರುತಶೀಲನು, ನಳನ ಮಂತ್ರಿಯಾಗಿ ಆತನೊಂದಿಗೇ ಬೇಟೆ ಪ್ರಯಾಣಗಳಲ್ಲೆಲ್ಲ ಜೊತೆ ಕೊಡುತ್ತಾನೆ. ಸ್ನಾನ ಮಾಡುತ್ತಿದ್ದ ಕಿರಾತಸುಂದರಿಯನ್ನು ಕಂಡು ಚಂಚಲಗೊಂಡ ನಳನನ್ನು ಶ್ರುತಶೀಲನು

ಉಪಾಯವಾಗಿ ಬೇರೆಡೆ ಕರೆದೊಯ್ಯುತ್ತಾನೆ. ಜಾತಿಯಿದ್ದಲ್ಲಿ ರೂಪವಿರುವುದಿಲ್ಲ ರೂಪವಿದ್ದಲ್ಲಿ ಕುಲೀನತೆ ಸಿಗದು! ಒಂದೆಡೆಯಲ್ಲಿ ಎಲ್ಲ ಗುಣಗಳೂ ಇರುವಂತೆ ಮಾಡದ ಬ್ರಹ್ಮನೇ! ನಿನ್ನ ಈ ಸೃಷ್ಟಿಕ್ರಮ ನಷ್ಟವಾಗಲಿ! ಎಂದು ನಳನು ಒಂದೆಡೆ ಪರಿತಪಿಸುತ್ತಾನೆ.

ಅರಮನೆಯಲ್ಲಿ ಹಲವು ಪ್ರಕಾರದ ಊಳಿಗಕ್ಕಾಗಿ ಹೆಂಗಸರನ್ನು ನೇಮಿಸುವುದು ಹಿಂದಿನಿಂದ ಬಂದ ಪರಿಪಾಠ, ವಿಜಯನಗರ ಕಾಲಕ್ಕಂತೂ ಸಹಸ್ರ ಹೆಣ್ಣುಗಳು, ಸಾಮಾನ್ಯವಾಗಿ ಗಂಡಸರು ಕೈಕೊಳ್ಳುತ್ತಿದ್ದ ವೃತ್ತಿಗಳೂ ಸೇರಿದಂತೆ ಮಾಡುತ್ತಿದ್ದ ಕೆಲಸಗಳನ್ನು ಪೋರ್ಚುಗೀಸ್ ಪ್ರವಾಸಿಗಳು ಗಮನಿಸಿದ್ದರು. ತ್ರಿವಿಕ್ರಮನಾದರೂ ದಮಯಂತಿಯ ಅಂತಃಪುರದಲ್ಲಿ ವಾದ್ಯಗಳನ್ನು ನುಡಿಸುವ, ಹಾಡುವ, ಸುಗಂಧಲೇಪ, ಹೂಮಾಲೆಗಳನ್ನು ತಯಾರಿಸುವ ಚತುರ ಸಂಭಾಷಣೆ ಕೈಕೊಂಡು ರಮಿಸುವ, ಹೆಂಗಳೆಯರ ಉಲ್ಲೇಖ ಮಾಡಿದ್ದಾನೆ. ಆದರೆ ಕರ್ನಾಟಕದ ಚೇಟಿಯರ ಬಗ್ಗೆ ಅವನಿಗೆ ಅನಾದರ! ಅವರು ವಾಚಾಳಿಗಳು, ನಯನಾಜೂಕು ಅರಿಯದವರು! ಎಂದು ಸೂಚ್ಯವಾಗಿ ಹೇಳಿದ್ದಾನೆ.

ಗ್ರಾಮದ ದಿನ್ನೆಗಳನ್ನೇರಿ ಗ್ರಾಮವಧುಗಳು ಕೂಡ ನಳನ ಚಿತ್ರವನ್ನು ರಚಿಸುವ ಉದ್ದೇಶದಿಂದ ಕಣ್ಣಲ್ಲಿ ಕಣ್ಣಿಟ್ಟು ಆತನನ್ನು ನೋಡುತ್ತ ನಿಂತಿದ್ದು (ಲೇಖಲೀಲಾಂ ವಹಂತಿ)ಒಂದೆಡೆ ಹೇಳಿದ್ದು ಉತ್ಪ್ರೇಕ್ಷೆಯಿರಲೂ ಸಾಕು!

ಪೌರಪುರಂಧ್ರಿಯರ ಅಥವಾ ನಗರವಧುಗಳ ಉಲ್ಲೇಖ ಬರುತ್ತದೆ. ಬಹುಶಃ ಅರಸರ ಪರೋಕ್ಷ ನಿಯಂತ್ರಣವಿದ್ದ ಈ ವರ್ಗದವರು ವಿವಿಧ ಕಲೆಗಳಲ್ಲಿ ಪರಿಣಿತರಿದ್ದು ದಂಡಪಾಶಿಕನೆಂಬ ಅಧಿಕಾರಿಯ ನಿರ್ದೇಶನದಲ್ಲಿ ಕೆಲಸ ಮಾಡುತ್ತಿದ್ದರು. ರಾಜ್ಯಾಭಿಷೇಕ, ಸ್ವಯಂವರ ಹಾಗೂ ಪ್ರಮುಖ ವ್ಯಕ್ತಿಗಳ ರಾಜ್ಯ ಸಂದರ್ಶನ, ಮುಂತಾದ ವಿಶೇಷ ಸಂದರ್ಭಗಳಲ್ಲಿ ಪುರದ ಬ್ರಾಹ್ಮಣರು ಹಾಗೂ ಪ್ರತಿಷ್ಠಿತ ನಾಗರಿಕರೊಡನೆ ಬಂದು ಮಂಗಲಗೀತ ಹಾಡುತ್ತ ನಗರವಧುಗಳು ಆಮಂತ್ರಿತರನ್ನು ಬರಮಾಡಿಕೊಳ್ಳುತ್ತಿದ್ದರು. ಇದರಿಂದಾಗಿ ಅವರ ಉಚ್ಚಸ್ಥಾನದ ಕಲ್ಪನೆ ಬರುತ್ತದೆ. ಸಂಗೀತಗಳಲ್ಲಿ ನೃತ್ಯಗಳಲ್ಲಿ ವಾದ್ಯ ವಾದನಗಳಲ್ಲಿ ವಿಶೇಷ ಪರಿಣತಿ ಅವರಿಗಿರುತ್ತಿತ್ತು.

ಉಚ್ಚಕುಲದಲ್ಲಿ ಅಪರೂಪಕ್ಕೆ ಅವಗುಂಠನದ ಉಪಯೋಗ ಇತ್ತು. ಕಿರಾತಕಾಮಿನಿಯರ (ಚಿತ್ರ 3)ಸ್ವಚ್ಛಂದ ಜೀವನದ ನೋಟವೊಂದು ಅವರು ನರ್ಮದಾ ನದಿಯಲ್ಲಿ ಸ್ನಾನಕ್ಕಿಳಿದಾಗ ಕವಿ ಕೊಡಮಾಡಿದ್ದಾನೆ. ಸಾಕಿದ ಹರಿಣಮರಿಗಳಿಂದ ಸುತ್ತಿವರಿಯಲ್ಪಟ್ಟ ಕೆಲವರು ಚಪ್ಪಟೆ ಮೂಗಿನವರು ಇದ್ದು ಕೆಂಪು ಬಳ್ಳಿಗಳನ್ನು ಸೊಂಟಕ್ಕೆ ಬಿಗಿದುಕೊಂಡು ಮುಂಗೈ ಬಳೆಗಳ ಅಧಿಕ ಸದ್ದು ಮಾಡುತ್ತ ಗಟ್ಟಿಯಾಗಿ ಮಾತನಾಡಿ ನಗುತ್ತಿದ್ದರು. ಕದಂಬ (ಮಹುವಾ?)ಹೂಗಳ ಮದ್ಯಪಾನದಿಂದ ಅವರ ಕಣ್ಣುಗಳಿ ಮತ್ತವಾಗಿದ್ದವು. ನೀರಿಗಿಳಿದು ಬಾಯಲ್ಲಿ ನೀರು ತುಂಬಿಕೊಂಡು ಬೆರಳು ಸಂದಿಗಳಿಂದ ಅದನ್ನು ದೂರಕ್ಕೆ ಬಿಡುತ್ತಿದ್ದು ಜಲಯಂತ್ರ ಪುತ್ತಳಿಕೆಗಳಂತೆ ಕಂಡರು. ಕೆಲವರು ನೀರಿನಲ್ಲಿ ಅನಾಯಾಸವಾಗಿ ಈಜಿದರು. ಕೆಲವರು ತೇಲಬಲ್ಲವರಾಗಿದ್ದರು. (ವಾರಿತರಣಾ!).

ಉಡುಗೊರೆಯ ರೂಪದಲ್ಲಿ ಹಾಡುವ ಕುಣಿಯುವ ಹೆಣ್ಣುಗಳನ್ನು ಕೊಡಮಾಡುವ ಪದ್ಧತಿ ಇತ್ತು. ಶತಕಗಳಲ್ಲಿ ಇದು ಕರ್ನಾಟಕದಲ್ಲಿ ಉಳಿದು ಬಂದಿತು.

ನಿಸರ್ಗಕ್ಕೆ ತುಂಬ ನಿಕಟವಾಗಿ ಬಾಳಿ, ಪ್ರಕೃತಿಪ್ರೇಮ ತಾಳಿ ಬಹುಶಃ ನಿಸರ್ಗದ ವರ್ಣನೆಯಲ್ಲಿ ಸೂರ್ಯೋದಯ ಸೂರ್ಯಾಸ್ತ, ಕಾಡುಗಳ, ನದಿಯ, ಸರೋವರದ, ಪ್ರಾಣಿಗಳ, ಪಕ್ಷಿಗಳ ಇತ್ಯಾದಿ ವರ್ಣನೆಯಲ್ಲಿ ತ್ರಿವಿಕ್ರಮ ಮಿಗಿಲಾಗಿದ್ದಾನೆ. ಇವೆಲ್ಲ ಕವಿಸಮಯವಾಗಿದ್ದು ಅಷ್ಟಾದಶವರ್ಣನೆಗಳು ಕಾವ್ಯದಲ್ಲಿ ಕಡ್ಡಾಯವಾಗಿ ಬರಲೇ ಬೇಕಾದರೂ ಶಬ್ದಗಳಿಂದ ಅದೂ ಶ್ಲೇಷಯುಕ್ತ ಭಾಷೆಯಿಂದ ಆತ ಕಣ್ಣೆದುರು ಚಿತ್ರ ಮೂಡುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾನೆ. ಕಾಡಿನಲ್ಲಿ ಬೆಳೆಯುತ್ತಿದ್ದ ಬಹಳ ಮರಗಳನ್ನು ಆತ ಹೆಸರಿಸಿದಂತೆ ಕುಂಡಿನಪುರದ ಪುಷ್ಪೋದ್ಯಾನಗಳಲ್ಲಿ, ನಾಗರಿಕರು ಬೆಳೆಯುತ್ತಿದ್ದ ಹೂಗಳನ್ನೂ ಉಲ್ಲೇಖಿಸಿರುವ ಭಿಲ್ಲರ ಹಳ್ಳಿಗಳನ್ನು, ಗೋದಿ ಬತ್ತದ ತೆನೆಗಳಿಂದ ಬಾಗಿದ ಹೊಲಗಳನ್ನು ಸವಿರಸದ ಕಬ್ಬಿನ ತೋಟಗಳನ್ನು ಮರೆತಿಲ್ಲ. ವಿಂಧ್ಯಾಟವಿಯು ರೌದ್ರವಾಗಿರದೇ ರಮಣೀಯತೆ, ಕೋಮಲತೆಗಳಿಂದ ನಳನನ್ನು ಎಷ್ಟೊಂದು ಆಕರ್ಷಿಸಿತೆಂದರೆ, ಅದನ್ನು ದಾಟಿ ಮುಂದೆ ಹೋಗುತ್ತಿರುವಾಗ ಪುನಃ ಪುನಃ ತಿರುಗಿ ನೋಡುತ್ತ ಬಿಟ್ಟು ಹೋಗುವದೇ ಕಷ್ಟದ್ದಾಗಿದೆ! ಎಂಬ ಉದ್ಗಾರವನ್ನು ತೆಗೆಯುತ್ತಾನೆ. (ದುಸ್ತ್ಯಜಾ! ಖಲು ಅಮೀ, ವಿಂಧ್ಯತಟೀತರವಃ) ದಮಯಂತಿಯ (ಪರೋಕ್ಷ ಪ್ರೇಮದಲ್ಲಿ) ಸಿಕ್ಕಿಕೊಂಡ ನಳನಿಗೆ ವಿಂಧ್ಯ ಅರಣ್ಯದ ಪಕ್ಕದ ಸ್ಥಳಗಳೆಲ್ಲ ಕಿರಾತಕಾಂತೆಯರ ವಿಲಾಸಗೃಹಗಳು, ಭ್ರಮರ ಸಂಗೀತ ಮೊರೆಯುವ ತಾಣಗಳು ಹೂಹಣ್ಣುಗಳಿಂದ ತುಂಬಿದ ಗಿಡಮರಗಳು, ಸಾಲವನದ ಏಕಾಂತ, ತುಂಬ ಪ್ರಿಯವಾಗಿದ್ದವು. ತನ್ನ ಪ್ರಿಯತಮೆಯನ್ನು ಮುಂದೊಂದು ದಿನ ಅಲ್ಲಿ ಕರೆತರುವ ಆಶಯವನ್ನು ಆತ ಹೊಂದಿದ್ದ.

ಕರ್ನಾಟಕದ ಸಾಮಾಜಿಕ ಇತಿಹಾಸದ ಅಧ್ಯಯನಕ್ಕೆ ಸಮಕಾಲೀನ ಕಾವ್ಯಗಳು, ತಕ್ಕಮಟ್ಟಿಗೆ ಸಾಮಗ್ರಿ ಪೂರೈಸುತ್ತವೆ. ಶಿಲಾಶಾಸನಗಳು ರಾಜಕೀಯ ಇತಿಹಾಸದ ಪುನಾರಚನೆಗೆ ಆಧಾರ ನೀಡುತ್ತವೆಯಾದರೂ ಜನಜೀವನದ ಹೆಚ್ಚಿನ ವಿವರಗಳಿಗೆ ಆಕರಗಳಾಗಿ ಅವುಗಳ ಪರಿಮಿತಿಯಿದ್ದದ್ದನ್ನು ಕೆಲವೊಮ್ಮೆ ಕಾವ್ಯಗಳು ಪೂರೈಸುವ ಸಾಧ್ಯತೆ ಇದೆ. ತ್ರಿವಿಕ್ರಮ ಭಟ್ಟನ ನಳಚಂಪೂ ಏಳು ಉಚ್ಛ್ವಾಸಗಳ, ಅಪೂರ್ಣಕಾವ್ಯವಾದರೂ, ಹತ್ತನೆಯ ಶತಕದ ಪೂರ್ವಾರ್ಧದ ಜನಜೀವನದ ಹಲವಾರು ಇಣುಕು ನೋಟಗಳನ್ನು ಪೂರೈಸುತ್ತದೆ. ಈ ಗ್ರಂಥದ ಜೊತೆಗೆ ಕೇವಲ ೨೫ ವರ್ಷಗಳ ನಂತರ ಬಂದ ಪಂಪನ ಎರಡು ಮಹಾಕೃತಿಗಳು ಹಾಗೂ ಕ್ರಿ.ಶ. ೯೫೯ರಲ್ಲಿ ಬರೆದ ಸೋಮದೇವ ಸೂರಿಯ ಯಶಸ್ತಿಲಕ (ಸಂಸ್ಕೃತ) ಚಂಪೂ ಕಾವ್ಯದ ತೌಲನಿಕ ಅಧ್ಯಯನ ಕೈಕೊಂಡಲ್ಲಿ ಕರ್ನಾಟಕದಲ್ಲಿ ಹತ್ತನೆಯ ಶತಮಾನದ ಧಾರ್ಮಿಕ, ಸಾಮಾಜಿಕ ಜೀವನದ ಸ್ಪಷ್ಟವಾದ ಚಾರಿತ್ರಿಕ ಚಿತ್ರವೊಂದು ಮೂಡಿ ಬರಲು ಸಾಧ್ಯವಿದೆ.




1. ಭಲ್ಲೆಯ ವೀರ

2. ಭಲ್ಲೆ ಕಾಳಗ

3. ಕಿರಾತ ತರುಣಿ

## ಆಧಾರ ಸೂಚಿ

೧. ಮಹಾಕವಿ ಶ್ರೀ ತ್ರಿವಿಕ್ರಮಭಟ್ಟ ವಿರಚಿತ ನಳಚಂಪು (ಸಂಸ್ಕೃತ) ಸಂಪಾದಕರು : ಶ್ರೀ ಕೈಲಾಸಪತಿ ತ್ರೀಪಾಠೀ ಚೌಖಂಬಾ ಪ್ರಕಟಣೆ ವಾರಣಾಸಿ ಮೂರನೆಯ ಮುದ್ರಣ (೧೯೭೭)

೨. ಪಂಪ ಮಹಾಕವಿಯ ಆದಿಪುರಾಣಂ ಕನ್ನಡಸಾಹಿತ್ಯ ಪರಿಷತ್ತು ಬೆಂಗಳೂರು ೧೯೭೭

೩. ಪಂಪ ಮಹಾಕವಿಯ ಪಂಪಭಾರತ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೧೯೭೭

೪. Handiqui K.K. **Yashastilaka and Indian Culture** : Sholapur 1949.

★★★

# ೧೮. 'ಮಿತಾಕ್ಷರಾ'ದಲ್ಲಿ ಸಮಾಜ ವ್ಯವಸ್ಥೆ

ಭಾರತದಲ್ಲಿ ಮನು ಮತ್ತು ಯಾಜ್ಞವಲ್ಕ್ಯ ಸ್ಮೃತಿಗಳಿಗೆ ಬರೆದ ಟೀಕಾ ಗ್ರಂಥಗಳು ಹಲವಾರು ಇದ್ದರೂ ಹನ್ನೊಂದನೇ ಶತಮಾನದಲ್ಲಿ ಕರ್ನಾಟಕದಲ್ಲಿ ರೂಪತಾಳಿದ, ಯಾಜ್ಞವಲ್ಕ್ಯ ಸ್ಮೃತಿಯ ಟೀಕಾ ಗ್ರಂಥವಾದ 'ಮಿತಾಕ್ಷರಾ' ಅಥವಾ 'ಪ್ರಮಿತಾಕ್ಷರಾ' ಮಹತ್ವ ಪೂರ್ಣವಾದದ್ದು. ಸ್ವತಂತ್ರ ಭಾರತ, ತನ್ನದೇ ಸಂವಿಧಾನಾತ್ಮಕ, ಸರ್ವಮಾನ್ಯ ಕಾನೂನು ವ್ಯವಸ್ಥೆಯನ್ನು ಜಾರಿಗೊಳಿಸುವ ತನಕ, ದೇಶವ್ಯಾಪಿ ಮನ್ನಣೆ ಪಡೆದ ಧರ್ಮಶಾಸ್ತ್ರದ ಗ್ರಂಥವು ಇದಾಗಿತ್ತು, ಎಂಬುದನ್ನು ನೆನೆಸಿಕೊಂಡರೆ ಭಾರತೀಯರ ಮಾನಸದ ಮೇಲೆ (ಕೆಲವೇ ಪ್ರದೇಶಗಳನ್ನು ಬಿಟ್ಟರೆ), ಮಿತಾಕ್ಷರಾ ಗ್ರಂಥದ ಪ್ರಭಾವದ ಕಲ್ಪನೆ ಬರುವಂತಿದೆ. ಮೊದಲಿಗೆ ಈಸ್ಟ್ ಇಂಡಿಯಾ ಕಂಪನಿ, ನಂತರ ಬ್ರಿಟಿಶರು ಆಸ್ತಿವಿಭಜನೆ, ದತ್ತು ಸ್ವೀಕಾರ, ಸ್ತ್ರೀಧನಗಳಂತಹ ವಿಚಾರಗಳಲ್ಲಿ ಮಿತಾಕ್ಷರ ಸಂಹಿತೆಯನ್ನೆ ಪ್ರಮಾಣ ಗ್ರಂಥವಾಗಿ ಸ್ವೀಕರಿಸಬೇಕೆಂದು ಬನಾರಸದ ಪಂಡಿತರನ್ನಾಗಲಿ, ಗವರ್ನರ್ ಜನರಲ್‌ರ ಸಲಹಾ ಸಮಿತಿಯ ಸದಸ್ಯರನ್ನಾಗಲಿ ಕೇಳಿಕೊಳ್ಳುತ್ತಿದ್ದುದು ಅದರ ಸಾಮಾಜಿಕ ಮನ್ನಣೆಯ ವ್ಯಾಪ್ತಿಯನ್ನು ತೋರಿಸುತ್ತದೆ. ಒಂಬತ್ತು ಶತಮಾನಗಳ ಕಾಲ ಭಾರತೀಯರ ದೈನಂದಿನ ಜೀವನದ ಹಲವಾರು ಸಮಸ್ಯೆಗಳಿಗೆ ಉತ್ತರ ಒದಗಿಸಲೆತ್ನಿಸಿ ಎಲ್ಲರಿಗೂ ಮಾನ್ಯವಾಗುವಂಥ, ನ್ಯಾಯಶಾಸ್ತ್ರದ ವ್ಯಾಖ್ಯಾನ ನೀಡಿದ ಕನ್ನಡಿಗ ವಿಜ್ಞಾನೇಶ್ವರ, ಕಲ್ಯಾಣದ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನ ಕಾಲದಲ್ಲಿ ಬಾಳಿದವ (ಕ್ರಿ. ಶ. ೧೦೫೦ ರಿಂದ ೧೧೩೦).

ಸ್ಮೃತಿಗ್ರಂಥಗಳು ಧಾರ್ಮಿಕ, ಸಾಮಾಜಿಕ, ನೈತಿಕ ವಿಚಾರಗಳನ್ನೆಲ್ಲ ಒಳಗೊಂಡು ಭಾರತೀಯ ಸಮಾಜಕ್ಕೆ ದೈನಂದಿನ ವ್ಯವಹಾರಗಳಲ್ಲಿ ಪಾಲಿಸಬೇಕಾದ ಕಟ್ಟುಪಾಡುಗಳನ್ನು ಕೊಡಮಾಡಿವೆ. ಆಳರಸರಿಗೆ ತಮ್ಮ ವಿವಿಧ ಹೊಣೆಗಳ ಮತ್ತು ಅವುಗಳ ನಿರ್ವಹಣೆಯ ಕುರಿತಾದ ಮಾರ್ಗದರ್ಶನ ನೀಡುತ್ತವೆ. ಸಾಮಾನ್ಯರಿಗೆ ಸಂಕಟ ಪ್ರಸಂಗಗಳಲ್ಲಿ, ಬಿಕ್ಕಟ್ಟಿನ ಸಂದರ್ಭಗಳಲ್ಲಿ, ವ್ಯಾವಹಾರಿಕ ಸಲಹೆ, ಸೂಚನೆಗಳನ್ನು ಒದಗಿಸುತ್ತವೆ. ಮುಖ್ಯವಾದ ಮನಸ್ಮೃತಿಯ ಕಾಲ ಕ್ರಿಸ್ತಶಕ ಪೂರ್ವ ೨೦೦ ನೇ ವರ್ಷವಾದರೆ ಯಾಜ್ಞವಲ್ಕ್ಯ ಸ್ಮೃತಿಯು ಮನುಸ್ಮೃತಿಯ ಹಲವು ಅಂಶಗಳನ್ನು ಹೊಂದಿ, ಹೆಚ್ಚು ಕಡಿಮೆ ಇದೇ ಅಂದರೆ ೨೦೦ ರ ಪೂರ್ವದಿಂದ ಕ್ರಿ.ಶ. ೨ನೇ ಶತಮಾನದ ರಚನೆ ಎಂಬ ಅಭಿಪ್ರಾಯವಿದೆ. ಈ ಅವಧಿಯಲ್ಲಿ ಭಾರತೀಯ ಸಮಾಜ, ಹಲವಾರು ಏರು-ಪೇರುಗಳನ್ನು ಕಂಡಿತು. ನಂತರದ ಶತಮಾನಗಳವರೆಗೂ

ವಿದೇಶೀಯರ ಆಕ್ರಮಣ, ಕಾಡುಜನಾಂಗಗಳ ಎಡಬಿಡದ ಹಾವಳಿ, ಭಿನ್ನ ಭಿನ್ನ ಆಂತರಿಕ ವ್ಯವಹಾರಗಳಿಂದಾಗಿ ಭಾರತೀಯತೆಯ ಮೂಲಚೌಕಟ್ಟು ಒಡೆದು ಚೂರಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ಸ್ಮೃತಿಕಾರರ ಮೇಲೆ ಇತ್ತು. ಆ ಚೌಕಟ್ಟಿನೊಳಗಿನ ಆಚರಣೆ, ದುಸ್ಸಹವಾಗದಂತೆ, ಸಾಮಯಿಕ ಬದಲಾವಣೆಗಳಿಗೂ ಕೊಂಚ ಮಟ್ಟಿಗೆ ಅವಕಾಶ ಮಾಡಿಕೊಟ್ಟು ಅವಕ್ಕೆ ಸ್ಮೃತಿಯ ಆಧಾರ ಕಲ್ಪಿಸುವ ಹೊಣೆ ವ್ಯಾಖ್ಯಾನಕಾರರ ಮೇಲಿತ್ತು. ವ್ಯಾಖ್ಯಾನಕಾರರಲ್ಲೆಲ್ಲ ವಿಜ್ಞಾನೇಶ್ವರ, ತುಂಬ ಮನ್ನಣೆಗಳಿಸಿದ. ಮಿತಾಕ್ಷರಾ, ಕಡಿಮೆ ಶಬ್ದಗಳಲ್ಲಿ ವಿಪುಲ ಅರ್ಥಕ್ಕೆ ಎಡೆಮಾಡಿಕೊಡುವ ಸಾಧ್ಯತೆ ಹೊಂದಿದ್ದು. ಅಂದಿನ ಯುಗದ ಹಿನ್ನೆಲೆ ಗಮನಿಸಿದರೆ, ಎಷ್ಟೋ ವಿಷಯಗಳಲ್ಲಿ ಔದಾರ್ಯ ಪೂರ್ಣ ವಿಶ್ಲೇಷಣೆಯನ್ನು ನೀಡಲು ಹವಣಿಸಿದೆ, ಎನ್ನಬೇಕು. ಟೀಕಾಕಾರರು ಹೊಸ ವಿಚಾರಗಳಿಗೆ ಹುಟ್ಟು ಹಾಕುವಂತೆ ಇರಲಿಲ್ಲ!

ಯಾವ ಸಮಾಜವೂ ನಿಂತ ನೀರಾಗಲಾರದು! ಬದಲಾವಣೆಯ ಅವಕಾಶವಿರುವಲ್ಲಿ ಅದಕ್ಕೆ ಅನುವು ಮಾಡಿಕೊಡುವಂತೆ ಪ್ರಾಚೀನ ಸ್ಮೃತಿಗಳ ಪ್ರಮಾಣವನ್ನು ಉಲ್ಲೇಖಿಸಿ ಜನರಿಗೆ ಮನದಟ್ಟು ಮಾಡಿಕೊಡಬೇಕಾಗುತ್ತಿತ್ತು. ವಿಜ್ಞಾನೇಶ್ವರನ ನಂತರ ಒಂದೂವರೆ ಶತಮಾನ ಕಳೆಯುವದರೊಳಗೆ ಮುಸ್ಲಿಂ ದಾಳಿ, ದಕ್ಷಿಣಕ್ಕೆ ಕಾಲಿಟ್ಟಿತು. ಇಸ್ಲಾಂ ಮತ ಪ್ರಚಾರ, ಹರಡ ತೊಡಗಿತು. ಜನಜೀವನ ಅಸ್ತವ್ಯಸ್ತವಾಯಿತು. ಇಷ್ಟಾದರೂ ಸನಾತನ ಸಂಸ್ಕೃತಿ ಪೂರಾ ಮಣ್ಣುಗೂಡದೇ ಇರುವದಕ್ಕೆ ಭಾರತೀಯ ಜನಜೀವನಕ್ಕೊಂದು ಸ್ಥಿರವಾದ ಕಟ್ಟುಪಾಡುಗಳನ್ನು ಕಲ್ಪಿಸಿಕೊಟ್ಟು ಧರ್ಮಶಾಸ್ತ್ರಗಳು ಬಹುಮಟ್ಟಿಗೆ ಕಾರಣವಾದವೆಂಬುದನ್ನು ಅಲ್ಲಗಳೆಯುವಂತಿಲ್ಲ. ಜಾತಿ ಪದ್ಧತಿ, ವೃತ್ತಿ ಸ್ವಾತಂತ್ರ್ಯ, ನೀತಿ ಸಂಹಿತೆಯ ಅರಿವು, ಸಾಮಾಜಿಕ ಹೊಣೆಗಾರಿಕೆಯ ಪರಿಕಲ್ಪನೆಯನ್ನು ಮೈಗೂಡಿಸಿಕೊಳ್ಳುತ್ತಲೇ ಹೊಸ ಹೊಸ ಆಕ್ರಮಣಗಳನ್ನು ಎದುರಿಸುವ ದಿಟ್ಟತನವನ್ನು ಭಾರತೀಯ ಸಮಾಜ ಈ ಮಧ್ಯೆ ತೋರ್ಪಡಿಸಲು ಸಾಧ್ಯವಾದದ್ದು, ದೇವಲ ಸ್ಮೃತಿ ಹಾಗೂ ಮಿತಾಕ್ಷರಾಗಳು ಕೈಕೊಂಡಂಥ ಸ್ಮೃತಿಗಳ ವಿಶಾಲ ದೃಷ್ಟಿಕೋನದ ವ್ಯಾಖ್ಯಾನದಿಂದ ಇರಬಹುದೇ! ಎಂಬ ಅಂಶ ಈ ವಿಷಯದ ಕುರಿತಾದ ಹೆಚ್ಚಿನ ಅಧ್ಯಯನಕ್ಕೆ ಗ್ರಾಸ ಒದಗಿಸಬಹುದು.

ಈ ಪ್ರಬಂಧದಲ್ಲಿ ಮುಖ್ಯವಾಗಿ ಸಮಾಜ ವ್ಯವಸ್ಥೆ, ಗೃಹಜೀವನ, ಸ್ತ್ರೀಯರ ಸ್ಥಾನಮಾನಗಳು, ಸ್ತ್ರೀಧನ, ದಾಸ ಪದ್ಧತಿ ಮುಂತಾದ ಕೆಲವೇ ವಿಷಯಗಳನ್ನು ಸೇರಿಸಲಾಗಿದೆ. ಕೆಲ ವಿಚಾರಗಳು ಸಮಕಾಲೀನ ಶಾಸನಗಳಲ್ಲಿ ಬಿಂಬಿತವಾಗಿವೆ. ಅವನ್ನು ಉಲ್ಲೇಖಿಸುವ ಪ್ರಯತ್ನ ಮಾಡಿದಂತೆ ಇತರ ಬೆಳವಣಿಗೆಗಳನ್ನೂ ಗಮನಿಸಲಾಗಿದೆ. ಇದರಿಂದಾಗಿ ಸಮಕಾಲೀನ ಸಮಾಜವನ್ನು ಕೆಲಮಟ್ಟಿಗೆ ಅರಿಯಲು ಪ್ರಬಂಧದ ವಿವರಗಳು, ಸಹಾಯ ಮಾಡಬಹುದು.

೧. **ಸಮಾಜವ್ಯವಸ್ಥೆ :** ಪ್ರಾಚೀನ ಕಾಲದಿಂದಲೂ ನಡೆದು ಬಂದ ವರ್ಣಾಶ್ರಮ ವ್ಯವಸ್ಥೆಯನ್ನೇ ಪೂರ್ವಸ್ಮೃತಿಗಳ ಮಾದರಿಯಲ್ಲಿ ಮಿತಾಕ್ಷರಾ ಉಲ್ಲೇಖಿಸುತ್ತದೆ. ಬ್ರಾಹ್ಮಣರಿಗೆ ಯಜನ, ಯಾಜನ, ಅಧ್ಯಯನ, ದಾನ, ಪ್ರತಿಗ್ರಹಗಳೇ ಗತಿ! ಪ್ರಜಾಪಾಲನೆ,

ಕ್ಷತ್ರಿಯರ ಹೊಣೆ ಆದ್ದರಿಂದ ಸೈನ್ಯದ ಮೂಲಕ ರಕ್ಷಣೆ ಮತ್ತು ಆಡಳಿತ ಅವರಿಗೆ ಸೇರಿದ್ದು. ಕೃಷಿ, ವಾಣಿಜ್ಯ, ಪಶುಪಾಲನ, ವೈಶ್ಯರಿಗೆ ಮೀಸಲು. ಶೂದ್ರನಿಗೆ ಸವರ್ಣಿಯರ ಸೇವೆಯೇ ಗತಿ ಎಂಬುದು ಸಾರ್ವತ್ರಿಕ ನಂಬಿಗೆಯಾದರೂ ಇಷ್ಟರಿಂದಲೇ ಜೀವನ ನಡೆಯದು! ಎಂದು ಮನಗಂಡ ವಿಜ್ಞಾನೇಶ್ವರನು ಚತುರ್ಥ ವರ್ಗದವರು ಯಾವ ಯಾವ ವೃತ್ತಿಗಳನ್ನು ಕೈಕೊಳ್ಳಬಹುದು? ಎಂದು ಸ್ಪಷ್ಟೀಕರಿಸಿದ್ದಾನೆ. ವಣಿಕ್ ವೃತ್ತಿ ಅಂದರೆ ವ್ಯಾಪಾರವನ್ನು ಕೈಕೊಳ್ಳುವದಲ್ಲದೇ ನಾನಾ ವಿಧ, ಶಿಲ್ಪ ಮತ್ತು ಕೈಗಾರಿಕೆಗಳನ್ನು ಅವರು ರೂಢಿಸಿಕೊಳ್ಳಬಹುದು, ಎಂದು ದೇವಲ ಋಷಿಯ ಅಭಿಪ್ರಾಯವನ್ನು ಎತ್ತಿ ಹಿಡಿಯುತ್ತಾನೆ. ಕೃಷಿ, ಪಶುಪಾಲನ, ಸಾಮಾನುಗಳ ಸಾಗಾಟ, ಹಣಕಾಸಿನ ವ್ಯವಹಾರ ಇತ್ಯಾದಿ ವೈಶ್ಯರ ಕಸುಬುಗಳಲ್ಲದೇ ಚಿತ್ರಕರ್ಮ, ನೃತ್ಯ ಗೀತಾದಿಗಳು, ವೇಣು-ವೀಣಾ, ಮುರಜ-ಮೃದಂಗಾದಿ ವಾದನಗಳನ್ನು ಅರ್ಥಾತ್ ಯಾವತ್ತೂ ಲಲಿತ ಕಲೆಗಳನ್ನು ಉಪಜೀವನಕ್ಕಾಗಿ ಶೂದ್ರರು ಕೈಕೊಳ್ಳಬಹುದಿತ್ತು. ಸಂಗೀತ ಸೇವೆಯಿಂದ (ವೀಣಾವಾದನ) ದೇವರನ್ನು ಭಕ್ತಿ ಪೂರ್ವಕವಾಗಿ ಒಲಿಸಿಕೊಳ್ಳಬಹುದು ಎಂದು ವಿಜ್ಞಾನೇಶ್ವರ ಹೇಳಿದ್ದಾನೆ (ಚಿತ್ರಗಳು 119-122)

ಅಂದ ಮೇಲೆ ಇಂದು, ಹಿಂದುಳಿವರೆಂದು ಭಾವಿಸಲಾಗುವ ಬಹುಸಂಖ್ಯಾತ ವರ್ಗಕ್ಕೆ ಸಾಮಾಜಿಕ ನಿರ್ಬಂಧಗಳನ್ನು ಎಲ್ಲಿ ಹಾಕಿದಂತಾಯಿತು? ಅಂದಿನವರ ಜೀವನೋಪಯೋಗಿ ಹಲವಾರು ಕೈಗಾರಿಕೆಗಳು ಅವರಿಗೆ ಮುಕ್ತವಿದ್ದವು. ಉಚ್ಚವರ್ಗದವರೆನಿಕೊಳ್ಳುವ ಬ್ರಾಹ್ಮಣಕ್ಷತ್ರಿಯ ವೈಶ್ಯರಂತೆ, ಶೂದ್ರರಿಗೂ ಹಲವು ಕಸಬುಗಳು ತೆರೆದು ಕೊಂಡಿದ್ದವು. ಸಮಕಾಲೀನ ಶಾಸನಗಳನ್ನು ನೋಡಿದರೆ ಧನಗರರು (ಕುರುಬರು) ನಾಪಿತರು, ತೆಲ್ಲಿಗರು, ಅಂದರೆ ಇಂದಿನ ಹಿಂದುಳಿದ ವರ್ಗದವರೆನಿಸಿಕೊಳ್ಳುವವರಲ್ಲಿ ಹಲವರು ಹಿಂದೆಯೂ ವಿದ್ಯೆ ಪಡೆದು ಸುಸಂಸ್ಕೃತರಾಗಿದ್ದರು. ದಾನಧರ್ಮಗಳಲ್ಲಿ ಮಿಗಿಲಾಗಿ, ದೇಗುಲಗಳನ್ನು ಕಟ್ಟಿಸುವಲ್ಲಿ ಮುಂದಾಗಿ ಇಷ್ಟದೇವತೆಗೆ ತಮ್ಮ ಹೆಸರನ್ನೋ ಕುಲದ ವ್ಯಕ್ತಿಯ ಹೆಸರನ್ನೋ ಕೊಟ್ಟುಬಿಡುತ್ತಿದ್ದರು. ದಾನ ಮಾಡಿ ಶಾಸನ ನಿಲ್ಲಿಸುವಾಗ ಜಾತಿ, ಕುಲ, ವಂಶ ಪರಂಪರೆಗಳನ್ನು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದರು.

"ಶೂದ್ರೋಪಿ ವಾರ್ಧಕೆ ಮಾನಮರ್ಹತಿ" "ವಿದ್ಯೆ, ಕರ್ಮ, ವಿತ್ತ, ಬಂಧುಬಲವಿದ್ದ ವೃದ್ಧಶೂದ್ರನೂ ಮನ್ನಣೆಗೆ ಅರ್ಹನು" ಎಂಬ ಯಾಜ್ಞವಲ್ಕ್ಯ ವಾಕ್ಯವನ್ನು ಮಿತಾಕ್ಷರಾ ಎತ್ತಿ ಹಿಡಿಯುತ್ತದೆ ಆಡಳಿತ ವರ್ಗದಲ್ಲಿ ತಮ್ಮ ಜನರ ಪ್ರತಿನಿಧಿಯಾಗಿ ಶೂದ್ರ ಜನಾಂಗದ ಸಾಮಾಜಿಕ ಸ್ಥಾನ ಮಾನಕಾಯ್ದು ಕೊಳ್ಳಲು ಆ ಕುಲದ ಹಿರಿಯನಿಗೆ ವಿದ್ಯೆ, ಕರ್ಮ, ಧನ ಮತ್ತು ಬಂಧುಗಳ ಬಲದ ಅಗತ್ಯವಿರುತ್ತಿತ್ತು. ಇದರಿಂದ ಮನ್ನಣೆ ದೊರೆಯುತ್ತಿತ್ತು.

ಸೈನ್ಯವಂತೂ ಜಾತಿಭೇದವಿಲ್ಲದೇ ಸರ್ವರಿಗೂ ತೆರೆದ ಬಾಗಿಲು ಆಗಿತ್ತು. ಬರೇ ಕ್ಷತ್ರಿಯರು ಮಾತ್ರ ಯುದ್ಧಮಾಡಿ ಸಾಯುತ್ತಿರಲಿಲ್ಲ! ಗೆರಿಲ್ಲಾ ತಂತ್ರದ ಯುದ್ಧಗಾರಿಕೆಯಲ್ಲಿ ಗುಡ್ಡಗಾಡು ಮತ್ತು ಕಾಡಿನ ಪ್ರದೇಶದ ಚನ್ನಾಗಿ ಪರಿಚಯವಿದ್ದ ವ್ಯಾಧ, ನಿಷಾದ, ಬೇಡ ಜನಾಂಗಗಳನ್ನು ನಿರ್ಲಕ್ಷಿಸಿ ಯಾವ ಅರಸು ತಾನೇ ಯುದ್ಧವನ್ನು ಗೆಲ್ಲಲು ಸಾಧ್ಯವಿತ್ತು?

ಅವರೆಲ್ಲ ಉತ್ತಮ ಯೋಧರಾಗುವದರ ಜೊತೆಗೆ ಅವರ ತಂಡಗಳ ನಾಯಕರು ಅರಸರ ಆಪ್ತ ಬಂಟರಾಗಿರುತ್ತಿದ್ದರು. ಚಾಲುಕ್ಯರ ಸಮಕಾಲೀನ ಹೊಯ್ಸಳ ಅರಸು, ವೀರಬಲ್ಲಾಳನ ಪ್ರಸಿದ್ಧ ದಂಡನಾಯಕನು ಅಮಿತೆಯನಾಯಕ. ಅವನ ನೆನಪಿಗೆ ಅಮೃತೇಶ್ವರ ದೇವಾಲಯ ರೂಪಗೊಂಡಿತು (ಶಿವಮೊಗ್ಗ ಜಿಲ್ಲೆಯ ತರಿಕೆರೆ) ಅಲ್ಲಿಯ ಶಾಸನದಲ್ಲಿ ಅಮಿತೆಯ ನಾಯಕ ಚತುರ್ಥಕುಲದವ ಎಂದು ಹೇಳಿದೆಯಲ್ಲದೇ ಬಲ್ಲಾಳನ ಬಲಗೈಯಾಗಿದ್ದ ಎಂಬ ಉಲ್ಲೇಖವಿದೆ. ಶಸ್ತ್ರ ಹಿಡಿದ ಕಲಿ ಕ್ಷತ್ರಿಯನಾಗಿ ಬಿಡುತ್ತಿದ್ದ!

ಇನ್ನು ಆಳುವ ವರ್ಗವಂತೂ ಯಾವಜಾತಿ? ಎಂದು ಕೇಳುವ ಮಿತಿಯನ್ನು ದಾಟಿರುತ್ತಿದ್ದರು. ಸಂಕಟಕಾಲದಲ್ಲಿ ಊರು, ಪ್ರದೇಶ, ಜನಗಳನ್ನು ರಕ್ಷಿಸಿದ ಕಡುಗಲಿ, ಕೊನೆಗೊಮ್ಮೆ ಊರವರ ಬೆಂಬಲದಿಂದ ತುಂಡರಸನೋ ದೊಡ್ಡರಸನೋ ಆದಾಗ ಜಾತಿಯ ಪ್ರಶ್ನೆ ಬರುತ್ತಿರಲಿಲ್ಲ. ಆತನ ಮುಂದಿನ ತಲೆಮಾರಿನವರು, ಇತರ ರಾಜರ ಕನ್ಯೆಯರನ್ನು ಮದುವೆಯಾಗುತ್ತಿದ್ದರು. ಸೂರ್ಯ ಅಥವಾ ಚಂದ್ರವಂಶದ ಕ್ಷತ್ರಿಯರೆಂದು ಕೊನೆಗೊಮ್ಮೆ ಗುರುತಿಸಲ್ಪಡುತ್ತಿದ್ದರು. ಕರ್ನಾಟಕದ ಎಷ್ಟೋ ರಾಜ ಮನೆತನಗಳ ಮೂಲ ಪುರುಷರು ಇಂಥವರೇ! ಕದಂಬರು ಬ್ರಹ್ಮಕ್ಷತ್ರಿಯರು, ಹೊಯ್ಸಳರು ಗುಡ್ಡಗಾಡು ಮಲೆಯರು. ವಿಜಯನಗರದ ಸ್ಥಾಪಕರು ಕುರುಬರು. ಮದಕರಿ ನಾಯಕರ ಚರಿತ್ರೆ ಎಲ್ಲರಿಗೂ ಗೊತ್ತು. ಇದೆಲ್ಲ ರೂಢಿಗತವಾಗಿ ಶಾಸ್ತ್ರ ಸಮ್ಮತವಾಗಿದ್ದ ಪದ್ಧತಿ. ಸ್ಮೃತಿಗ್ರಂಥಗಳಲ್ಲಿ ಉಲ್ಲೇಖಿತವಾಗಿದ್ದ ವರ್ಣವ್ಯವಸ್ಥೆ ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿರಲಿಲ್ಲ ವೆಂಬುದು ಸ್ಪಷ್ಟ. ಪ್ರಾದೇಶಿಕ ಭಿನ್ನತೆಗನುಸಾರವಾಗಿ ಆಡಳಿತ ವರ್ಗ ಹಾಗೂ ಅರಸುವರ್ಗ ರೂಪಗೊಳ್ಳುತ್ತಿತ್ತು, ಬಹುವರ್ಗಗಳ ಮನ್ನಣೆ ಪಡೆದಾತ, ನಾಯಕನಾಗಿ ಅರಸನಾಗಿ ವಂಶ ಸ್ಥಾಪಿಸುವದು ಅಪರೂಪವಾಗಿರಲಿಲ್ಲ.

**ವ್ಯಾಪಾರ ಮಾರುಕಟ್ಟೆಗಳು :** ಬಂಗಾರ ಬೆಳ್ಳಿ, ತಾಮ್ರ, ಹಿತ್ತಾಳೆ, ಸತುವು, ಸೀಸ, ಕಬ್ಬಿಣಗಳ ಬಳಕೆಯ ಉಲ್ಲೇಖ ಮಿತಾಕ್ಷರದಲ್ಲಿ ಬರುತ್ತದೆ. ಇವನ್ನೆಲ್ಲ ಕರಗಿಸಿದಾಗ ತ್ರುಟಿ ಎಷ್ಟು ಬರುತ್ತದೆ? ಎಂದು ನಿರ್ದಿಷ್ಟಪಡಿಸಲಾಗಿದೆ. ಅದರಂತೆ ನಾರು, ನೂಲು, ರೇಶಿಮೆ, ಉಣ್ಣೆಗಳ, ಅಭಿವೃದ್ಧಿಗಳನ್ನು ತಿಳಿದುಕೊಳ್ಳಲು ತಜ್ಞರು ಇರುತ್ತಿದ್ದರು. ಪ್ರತಿ ವಸ್ತುವಿನ ಉತ್ಪನ್ನದ ಲಾಭ ನಷ್ಟಗಳನ್ನು ಅರಸನಿಗೆ ತಿಳಿಸಲು ಸಹಾಯ ಮಾಡುತ್ತಿದ್ದರು. ಅಂದಿನ ಮಾರು ಕಟ್ಟೆಗಳಲ್ಲಿ ಬಗೆ ಬಗೆಯ ವಸ್ತುಗಳು ದೊರೆಯುತ್ತಿದ್ದವು, ಶ್ರೀಗಂಧ, ಸುಗಂಧ ದ್ರವ್ಯಗಳು, ಹತ್ತಿ, ಬತ್ತ, ಅಕ್ಕಿ, ಮೆಣಸಿನ ಹೇರು, ಇಂಗು, ಅಲ್ಲ, ಅರಿಸಿನ, ಎಣ್ಣೆ, ಅಡಕೆ, ಎಲೆ, ತೆಂಗು, ಓಲೆಗರಿಗಳ ಹೇರು, ಬೆಲ್ಲ, ಬಾಳೆ, ನೆಲ್ಲಿ, ಕಬ್ಬು, ಬಳಪ ಮುಂತಾದವನ್ನು ರಟ್ಟರ ೧೦೩೪ನೇ ವರ್ಷದ ಸಮಕಾಲೀನ ಶಾಸನವೊಂದು ಹೆಸರಿಸುತ್ತದೆ. ಅದರಂತೆ ಚಿನ್ನದ ಜರಿಯ ಕೆಲಸಮಾಡಿದ ಹತ್ತಿ, ರೇಶ್ಮೆಯ ಬಟ್ಟೆಗಳೂ ಹೇರಳವಾಗಿ ಹೊರಗಿನ ದೇಶಗಳಿಂದ ಬರುತ್ತಿದ್ದವು. ವಸ್ತ್ರದ ನೇಯ್ಗೆಯಲ್ಲಿ ಬಗೆ ಬಗೆಯ ಹೂಬಳ್ಳಿ, ಚಿತ್ರಾಕೃತಿಗಳನ್ನು ಉಲ್ಲೇಖಿಸಿದ

ವಿಜ್ಞಾನೇಶ್ವರ ಇವನ್ನು ಕಾರ್ಮಿಕ ವಸ್ತ್ರಗಳೆಂದು ಕರೆದಿದ್ದಾನೆ. ಇಲ್ಲಿಯ ರತ್ನಗಂಬಳಿಗಳೂ ಹೆಸರಾಗಿದ್ದವು. ಮಿತಾಕ್ಷರಾಗಿಂತ, ಕೆಲವೇ ವರ್ಷ ನಂತರದ ಕೃತಿಯಾದ ಚಾಲುಕ್ಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಬಟ್ಟೆ ಬರೆಗಳ ಸೊಗಸಾದ ವರ್ಣನೆಯಿದೆ. ಯಂತ್ರಗಳಿಂದ ಬಟ್ಟೆಗೆ ಬಣ್ಣಹಾಕುವ ಕಲೆ ಅಂದಿನವರಿಗೆ ಸಾಧಿಸಿತ್ತು (ರಂಜಿತಾನಿ ಸುಯಂತ್ರಕೈ) ಒಗೆದಂತೆ ಅಚ್ಚಬಣ್ಣ ಪಡೆಯುವ ಬಟ್ಟೆಗಳಿದ್ದವು. ಜೊತೆಗೆ ಆಂಧ್ರ, ಕಲಿಂಗ, ಅನಹಿಲವಾಡ (ಗುಜರಾಥ) ತೊಂಡೈಮಂಡಲ (ತಮಿಳುನಾಡು)ಗಳಿಂದಲೂ ದೊಡ್ಡ ಪ್ರಮಾಣದಲ್ಲಿ ಕರ್ನಾಟಕಕ್ಕೆ ಬಟ್ಟೆಗಳು ಬರುತ್ತಿದ್ದವು.

ಇದೇ ಸಮಯದಲ್ಲಿ ಕರ್ನಾಟಕದ ವರ್ತಕರು ಭಾರತವರ್ಷ್ಟೇ ಅಲ್ಲ ಮಲಯಾ, ಜಾವಾ, ಕಾಂಬೋಜಗಳಂತೆ ಪಶ್ಚಿಮದ ಬರ್ಬರ, ಪಾರಸ (ಅರಬ್‌ದೇಶ, ಪರ್ಶಿಯ) ದೇಶಗಳಿಗೆ ಹೋಗುತ್ತಿದ್ದರು ಐಯಾವೊಳೆಯ ಐನೂರು ಎಂಬ ವರ್ತಕರ ಮಹಾಸಂಘವು, ವಜ್ರ ವೈಡೂರ್ಯ, ಬೆಳ್ಳಿಬಂಗಾರಾದಿಗಳಿಂದ ಹಿಡಿದು ದೈನಂದಿನ ಆವಶ್ಯಕತೆಯ ಯಾವತ್ತೂ ಸಾಮಾನುಗಳ ಯಾತಾಯಾತವನ್ನು ನಿಯಂತ್ರಿಸುತ್ತಿತ್ತು. ಅರಸರಿಗೂ ಸಾಲಕೊಡುವಷ್ಟು ಮತ್ತು ಅದನ್ನು ಶಾಸನಗಳಲ್ಲಿ ಬರೆಸುವಷ್ಟು ಶ್ರೀಮಂತ ಬಣಜಿಗರಿದ್ದರು ನೆರೆನಾಡುಗಳಿಂದಲೂ ಕರ್ನಾಟಕಕ್ಕೆ ಈ ಸಮಯದಲ್ಲಿ ಬಂದು ನೆಲೆಸಿ ವ್ಯಾಪಾರ ಬೆಳೆಸಿದ ಶ್ರೇಷ್ಠಿ (ಸೆಟ್ಟಿ) ಜನಾಂಗದ ಪಾತ್ರ ದೊಡ್ಡದು. ಸಮುದ್ರಯಾನಕ್ಕೆ ನಿಷೇಧವಾಗಲಿ, ವಿದೇಶ ಪ್ರಯಾಣ ಕೈಕೊಳ್ಳುವವರಿಗೆ ಬಹಿಷ್ಕಾರವಾಗಲೀ ಸೂಚಿಸುವ ಯಾವ ಸಂದರ್ಭವೂ ಮಿತಾಕ್ಷರದಲ್ಲಿ ಇಲ್ಲ. ಆದ್ದರಿಂದ ಈ ಕಟ್ಟುಪಾಡುಗಳೆಲ್ಲ ನಂತರದ ಶತಮಾನದ್ದು ಇರಬಹುದು.

**೨. ದಾಸ ಪದ್ಧತಿ**

ಪಶ್ಚಿಮ ದೇಶಗಳಲ್ಲಿ ಪ್ರಚಲಿತವಿದ್ದ ಗುಲಾಮರ ಪದ್ಧತಿ ಭಾರತದಲ್ಲಿ ಇಲ್ಲವಾದ್ದರಿಂದ ಗ್ರೀಕ್ ರಾಯಭಾರಿ ಮೆಗಸ್ಥಾನೀಸನು ಭಾರತದಲ್ಲಿ ಗುಲಾಮರ (ಮಾರಾಟ?) ಪದ್ಧತಿಯಿಲ್ಲವೆಂದು ಉದ್ಗರಿಸಿದ್ದ. ಆದರೆ ದಾಸಪದ್ಧತಿ ಅನಾದಿಕಾಲದಿಂದ ಇಲ್ಲಿ ನಡೆದುಬಂದಿದೆ. ಬಹುಶಃ ಇತರ ದೇಶಗಳಂತೆ ಮುಕ್ತ ಮಾರಾಟ ಮತ್ತು ಕ್ರೌರ್ಯದ ಮಾದರಿಗಳು ಈ ವಿದೇಶೀಯರಿಗೆ ನೋಡಲು ಸಿಕ್ಕಿರಲಿಲ್ಲ. ಸೇವಕರನ್ನು ಮನೆಯ ಸದಸ್ಯರಂತೆ ಕಾಣುತ್ತಿದ್ದುದು, ಅವರ ಕಷ್ಟ ಸುಖಗಳನ್ನು ಗಮನಿಸುವದು, ಈ ದೇಶದ ವಾಡಿಕೆಯಾಗಿತ್ತು. ಬಹುಶಃ ಶತಮಾನಗಳಿಂದ ನಡೆದುಬಂದ ಪದ್ಧತಿಯೇ ಮಿತಾಕ್ಷರಾದಲ್ಲಿ ಬಿಂಬಿತವಾಗಿದೆ.

ಬಾಲಸ್ವವಾಸಿನೀ ವೃದ್ಧಗರ್ಭಿಣ್ಯಾತುರ ಕನ್ಯಕಾ
ಸಂಭೋಜ್ಯಾತಿಥಿ ಭೃತ್ಯಾಂಶ್ಚ ದಂಪತ್ಯೋ: ಶೇಷಭೋಜನಂ

(ಗೃಹಸ್ಥ ಧರ್ಮ ಪ್ರಕರಣ ೩೭- ೧೦೫)

ಬಾಲಕ, ವಿವಾಹದ ನಂತರ ತಂದೆಯ ಮನೆಯಲ್ಲಿದ್ದ ಕನ್ಯೆ ವೃದ್ಧ, ಗರ್ಭಿಣಿ,

ರೋಗಿ, ಕುಮಾರಿ, ಅತಿಥಿ, ಸೇವಕ ಮೊದಲಾದವರಿಗೆ ಮುಂಚಿತವಾಗಿ ಊಟಕ್ಕೆ ಹಾಕಿ ನಂತರವೇ ದಂಪತಿಗಳು ಭೋಜನ ಮಾಡಬೇಕಂದು ಯಾಜ್ಞವಲ್ಕ್ಯನ ನಿರ್ದೇಶನ. ಬಳಗ ಮತ್ತು ಅತಿಥಿಗಳ ಜೊತೆಗೇ ಸೇವಕರನ್ನು ಉಲ್ಲೇಖಿಸಿದ್ದು ವಿಶೇಷ! ಆದರೆ ಈ ಪದ್ಧತಿ ಸಾರ್ವತ್ರಿಕವಾಗಿ ಬಳಕೆಯಾಗುವ ಸಂಭವ ಕಡಿಮೆಯಾಗಿತ್ತು. ದಾಸರು, ಸೇವಕರ ರೂಪದಲ್ಲಿ ಯಾವತ್ತೂ ಸೇವೆಯನ್ನು ಸಲ್ಲಿಸುತ್ತಿದ್ದರು. ವಿಜ್ಞಾನೇಶ್ವರನು ದಾಸರಲ್ಲಿ ಮೂರು ವರ್ಗಗಳನ್ನು ಗುರುತಿಸಿದ್ದಾನೆ. ಉತ್ತಮ, ಮಧ್ಯಮ ಮತ್ತು ಕನಿಷ್ಟರು. ಮೊದಲನೆಯವರು ಆಯುಧಗಳನ್ನು ಬಳಸಬಲ್ಲವರು. ಖಾಸಗಿ ಜಮೀನುದಾರರು ಇವರನ್ನು ಪೋಷಿಸುತ್ತಿದ್ದಿರಬೇಕು. ಪಹರೆಯಲ್ಲಿ, ಹೊಲ, ಬೇಟೆಯ ಅರಣ್ಯಗಳ ಗಸ್ತಿಯಲ್ಲಿ ಇವರ ಬಳಕೆಯಾಗುತ್ತಿತ್ತು. ಎರಡನೆಯ ವರ್ಗದವರು ಕೃಷಿ ಕಾರ್ಯದಲ್ಲಿ ಸಹಾಯಕರು. ಮೂರನೆಯವರು, ಭಾರ ಹೊರುವವರು ಮತ್ತು ಕೂಲಿಕೆಲಸದವರಾಗಿದ್ದರು.

ಅರಸರೊಳಗೆ ನಡೆಯುವ ಯುದ್ಧಗಳು, ಬರಗಾಲ, ನೆರೆ ಮುಂತಾದ ರಾಜಕೀಯ ಮತ್ತು ನೈಸರ್ಗಿಕ ವಿಪತ್ತುಗಳು ಸಂಭವಿಸಿದಾಗ ಬಡವರ್ಗದವರಿಗೆ ಸುರಕ್ಷಿತತೆಯಿರಲಿಲ್ಲ. ಗುಳೇ ಹೋಗುವದು ಸಾಮಾನ್ಯವಾಗಿತ್ತು. ಆಕ್ರಮಿತ ಅಥವಾ ಗೆದ್ದುಕೊಂಡ ಪ್ರದೇಶದಿಂದ ಅಸಹಾಯಕರನ್ನು ನಂಬಿಸಿಯೋ, ವಂಚಿಸಿಯೋ, ಕದ್ದೊ, ಬೇರೆಡೆ ಒಯ್ದು ಮಾರಾಟ ಮಾಡುವದು ಸಾಮಾನ್ಯವಾಗಿದ್ದಿರಬೇಕು. "ಅಭ್ಯುಪೇ ತ್ಯಾಶುಶ್ರೂಷಾ ಪ್ರಕರಣ" ಎಂಬ ಚಿಕ್ಕ ಅಧ್ಯಾಯವೇ ಇಂಥ ದುರ್ದೈವಿಗಳಿಗೆ ಮೀಸಲಾಗಿದೆ.

ಬಲತ್ಕಾರದಿಂದ ದಾಸರನ್ನಾಗಿಸಿದವರನ್ನು, ಅನ್ಯಾಯದಿಂದ ಅಪಹರಿಸಿದವರನ್ನು, ಅಡವು ಇಟ್ಟು ಹೋದವರನ್ನು, ಯಜಮಾನನು ಬಿಟ್ಟು ಬಿಡಬೇಕು. ಇದು ಸಾಧ್ಯವಾಗದಿದ್ದರೆ, ರಾಜನೇ ಮಧ್ಯ ಪ್ರವೇಶಿಸಿ ಅವರನ್ನು ವಿಮುಕ್ತರನ್ನಾಗಿಸಬೇಕು. ಸಾಲಕ್ಕಾಗಿ ಒತ್ತೆಯಿಡಲ್ಪಟ್ಟವರು, ಅಥವಾ ಋಣದಾಸರು ತಮ್ಮ ಸಲುವಾಗಿ ಕೊಟ್ಟು ಹಣ ವಾಪಸ್ಸು ಮಾಡಿದರೆ ದಾಸ್ಯದಿಂದ ಮುಕ್ತರಾಗುತ್ತಿದ್ದರು. ದುರ್ಭಿಕ್ಷೆ ಕಾಲಕ್ಕೆ ತಾವಾಗಿ ಜೀತದಾಳುಗಳಾಗಿ ಬಂದು ಸೇರಿಕೊಂಡವರು. ಪರಿಸ್ಥಿತಿ ಸುಧಾರಿಸಿದ ನಂತರ, ಗೋವುಗಳ ಒಂದು ಜೋಡಿಯನ್ನು ಯಜಮಾನನಿಗೆ ಕೊಡ ಮಾಡಿ ದಾಸ್ಯ ವಿಮುಕ್ತಿಯನ್ನು ಪಡೆಯಬಹುದಿತ್ತು.

ಕೆಲವು ಹೆಂಗಸರು, ಮಕ್ಕಳು ಮತ್ತು ಸ್ತ್ರೀಯರ ಅಪಹರಣವನ್ನೆ ಕಾಯಕವನ್ನಾಗಿ ಮಾಡಿಕೊಂಡಂತೆ ತೋರುತ್ತದೆ. 'ವಡವಾ'ಸ್ತ್ರೀ ಎಂದು ಇವರನ್ನು ಕರೆಯಲಾಗಿದೆ. ಇವರು ಮಕ್ಕಳನ್ನು ಮಾರಿ ಪಡೆದ ಹಣ ವಾಪಸು ಮಾಡಿದರೆ ಸ್ವಾತಂತ್ರ್ಯ ಸಾಧ್ಯವಿತ್ತು. ಅಡವು ಇಟ್ಟವರು ಕೊಟ್ಟ ಹಣ ಹಿಂದಿರುಗಿಸುವ ಸಾಧ್ಯತೆಯಿದ್ದರೆ ಮುಕ್ತರಾಗುತ್ತಿದ್ದರು. (ಕನ್ನಡದ ಭಡವ ಬೈಯುವಿಕೆಯ ಶಬ್ದ ಮೂಲ ಇಲ್ಲಿದೆ!)

ಇಂದು ಇಪ್ಪತ್ತೊಂದನೆಯ ಶತಮಾನದ ಪ್ರಾರಂಭದಲ್ಲಿ, ಮಾನವ ಹಕ್ಕುಗಳ ಪ್ರತಿಪಾದನೆ ಜೋರಾದ ದಿನಗಳಲ್ಲಿ, ನಾವಿನ್ನೂ ಜೀತದಾಳುಗಳ (ಹಿಂದಿನ ಋಣದಾಸರು)

ವಿಮುಕ್ತಿ ಮತ್ತು ಜೀತ ನಿರ್ಮೂಲನ ಪದ್ಧತಿಯ ಪ್ರಚಾರ ಹಾಗೂ ಪತ್ರಿಕಾವರದಿಗಳನ್ನು ಓದುತ್ತಲೇ ಇರುತ್ತೇವೆ! ಈ ಕುರಿತಾದ ಕ್ರಮಗಳನ್ನು ಕೈಕೊಂಡ ಸರಕಾರೀ ಹೇಳಿಕೆಗಳು ಬರುತ್ತಲೇ ಇರುತ್ತವೆ. ಕಾಗದದ ಮಟ್ಟಿಗೆ ಜೀತ ಪದ್ಧತಿ ನಿರ್ಮೂಲನವೂ ಆಗಿದೆ. ಆದರೆ ಜೀತವಿಮುಕ್ತರಿಗೆ ಪರ್ಯಾಯ ವ್ಯವಸ್ಥೆಯಾದ ಬಗ್ಗೆ ಯಾವ ಸಮಾಚಾರವೂ ಇರುವದಿಲ್ಲ. ಪರಿಹಾರ ಕ್ರಮಗಳೂ ಕಂಡು ಬರುವದಿಲ್ಲ. ಇಂಥವರ ಪುನರ್ನಿವೇಶನವಾದ ವಿಚಾರವಾಗಲಿ, ಅವರು ಮುಂದೆ ಜೀವನದಲ್ಲಿ ಯಶಸ್ವಿಗಳಾದ ಸುದ್ದಿಯಾಗಲಿ ನಮಗೆ ತಲುಪುವದಿಲ್ಲ. ಆ ಕುರಿತಾದ ಅಧ್ಯಯನ ನಡೆದದ್ದೂ ತಿಳಿಯುವದಿಲ್ಲ. ದಾಸ ಅಥವಾ ಜೀತ ಪದ್ಧತಿ, ನಿಜಕ್ಕೂ ನಿರ್ಮೂಲವಾಗಿದೆಯೇ?

ವಿಜ್ಞಾನೇಶ್ವರ ಉಲ್ಲೇಖಿಸಿದ ಒಂದು ಮಾನವೀಯ ವಿಚಾರವನ್ನು ಹೇಳಬಹುದು. ಡಕಾಯಿತರು, ಹಿಂಸ್ರಪಶುಗಳ ಆಕ್ರಮಣ, ಜಲಸಮಾಧಿಯಂತಹ ಅನಾಹುತಗಳಿಂದ ಯಜಮಾನನನ್ನು ರಕ್ಷಿಸಿದ ದಾಸನನ್ನು ಬಿಡುಗಡೆ ಮಾಡಬೇಕು. ಅಷ್ಟೇ ಅಲ್ಲ. ಆಸ್ತಿಯಲ್ಲಿ ಪುತ್ರನ ಪಾಲನ್ನು ಕೊಡಬೇಕು ಎಂದು ನಾರದ ಸ್ಮೃತಿಯ ವಾಕ್ಯಗಳನ್ನು ಆತ ಉದ್ಧರಿಸಿದ್ದಾನೆ. ಜೀವ ಉಳಿಸಿದ ಕೃತಜ್ಞತೆಯನ್ನು ಉದಾತ್ತತೆಯಿಂದ ತೋರ್ಪಡಿಸುವ ಜನ ಇದ್ದೇ ಇರುತ್ತಾರೆ. ಆದರೆ ಸ್ಮೃತಿ ಗ್ರಂಥದಲ್ಲಿ ಈ ಅಂಶವನ್ನು ಸೇರಿಸಬೇಕಾದರೆ ಹೆಚ್ಚಿನ ಮಾಲಕರು ಎಂಥವರು ಇರುತ್ತಿದ್ದರು ಎಂಬ ಸೂಚನೆ ದೊರೆಯುತ್ತದೆ! ಅಸಹಾಯಕರ ಶೋಷಣೆ ಯಾವ ಕಾಲಕ್ಕೂ ಇದ್ದದ್ದೇ! ಆದರೆ ಇಂಥವರಿಗೂ ಬಿಡುಗಡೆಯ ಅವಕಾಶವನ್ನು ಮಿತಾಕ್ಷರಾ ಕಲ್ಪಿಸಿಕೊಟ್ಟಿದೆ. ಇಂದಿನ ಪ್ರಜಾಪ್ರಭುತ್ವದಲ್ಲಿ ಸಹ ಕಾಗದ ಹಾಗೂ, ವಾಸ್ತುವಿಕತೆಗಳಲ್ಲಿ ಇರಬಹುದಾದ ಅಂತರವನ್ನು ತೋರಿಸುತ್ತದೆ.

ಇದೇ ಅಧ್ಯಾಯದಲ್ಲಿ ವಿವಿಧ ಶಿಲ್ಪಗಳು ಮತ್ತು ಆಯುರ್ವೇದ ವಿದ್ಯೆಯ ಅಭ್ಯಾಸದ ಅಂತೇವಾಸಿಗಳ ಅಥವಾ ಉಮೇದುವಾರರ ಪ್ರಸ್ತಾಪ ಬರುತ್ತದೆ. ಆಚಾರ್ಯನಾದವನು ಶಿಷ್ಯರಿಗೂ ಇಂಥ ಉಮೇದುವಾರರಿಗೂ ಊಟ ವಸತಿಯ ಏರ್ಪಾಡಿನೊಂದಿಗೆ ವಿದ್ಯಾದಾನವನ್ನೂ ನೀಡಬೇಕಾಗಿತ್ತು. ಕಲಿಕೆಯ ಅವಧಿ ನಿರ್ದಿಷ್ಟವಾಗಿತ್ತು. ಕಲಿಕೆ, ಅವಧಿಗೂ ಮುಂಚಿತವಾಗಿ ಮುಗಿದರೂ ಶಿಷ್ಯನಾದವನು ಕೂಡಲೇ ಹಿಂದಿರುಗುವಂತಿರಲಿಲ್ಲ. ಗುರುವಾದವನು ಶಿಷ್ಯ ಮತ್ತು ಅಂತೇವಾಸಿಗಳನ್ನು ಮಗನಂತೆ ನೋಡಿಕೊಳ್ಳಬೇಕು. ಬೇರೆ ಮನೆಗೆಲಸಗಳನ್ನು ಮಾಡಿಸಬಾರದು, ಎಂದು ಎಚ್ಚರಿಸುವದರ ಜೊತೆಗೆ ಉಡಾಳ ಶಿಷ್ಯರು ಓಡಿಹೋದರೆ ದಂಡಿಸಬೇಕು! ಎಂಬ ಸೂಚನೆಯೂ ಇದೆ.

ವೇದಾಭ್ಯಾಸಿ ಶಿಷ್ಯರು, ಶಿಲ್ಪಗಳನ್ನು ಕಲಿಯುತ್ತಿದ್ದ ವಿದ್ಯಾರ್ಥಿಗಳು, ಭೃತ್ಯರು, ದಾಸರು, ಒಂದೇ ಆಶ್ರಮದೊಳಗೆ ವಿದ್ಯಾರ್ಜನೆ ಮಾಡುತ್ತಿದ್ದದ್ದು ನಿಜವಾದರೆ ಸ್ಮೃತಿ ವ್ಯಾಖ್ಯಾನಕಾರರು ಅಂದಿನ ದಿನಗಳಲ್ಲಿ ಶ್ರಮಗೌರವಕ್ಕೆ ಕೊಡುತ್ತಿದ್ದ ಮಹತ್ವದ ಜೊತೆಗೆ ಸಾಮಾಜಿಕ ಸಮಾನತೆ ಸಾಧಿಸಲು ಮಾಡುತ್ತಿದ್ದ ಪ್ರಯತ್ನದ ಅರಿವು ಆಗುತ್ತದೆ.

೩. **ವಿವಾಹ, ಗೃಹಜೀವನ :** ಮನುಷ್ಯ ಜೀವನದಲ್ಲಿ ಅತಿ ಮುಖ್ಯ ಘಟ್ಟವಾದ ವಿವಾಹ ವ್ಯವಸ್ಥೆಯ ಬಗ್ಗೆ ನಮ್ಮ ಪೂರ್ವಜರು ವಿಶೇಷ ಲಕ್ಷ್ಯ ಪೂರೈಸಿದ್ದರು. ಆರೋಗ್ಯವಂತ ಸಂತತಿ ಪಡೆಯಲು ರಕ್ತಸಂಬಂಧಿ ವಿವಾಹಗಳು ನಿಷಿದ್ಧವೆಂದು ಸಾರಿ ಶತಮಾನಗಳೇ ಕಳೆದಿದ್ದವು. ಸಗೋತ್ರ ಮತ್ತು ಸಪಿಂಡ ವಿವಾಹಗಳನ್ನು ವಿರೋಧಿಸಲಿಕ್ಕೆ ಕಾರಣ ಹೊಸ ಹೊಸ ಜನಾಂಗಗಳು ವರ್ಣವ್ಯವಸ್ಥೆಯನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಿದ್ದು, ದೊಡ್ಡ ಸಂಖ್ಯೆಯಲ್ಲಿ ವೈದಿಕ ಸಂಸ್ಕೃತಿ ಹರಡುತ್ತಿದ್ದರಿಂದ ಎಲ್ಲರನ್ನು ಸನಾತನ ಧರ್ಮದಲ್ಲಿ ಸೇರ್ಪಡೆ ಹೊಂದಲು ಅವಕಾಶ ಕಲ್ಪಿಸಿಕೊಡಲಾಯಿತು. ವಿದ್ಯಾಭ್ಯಾಸ ಮುಗಿಸಿ ಸ್ನಾತಕನಾದ ಯುವಕನನ್ನು ಅಸಪಿಂಡಾ, ಅರೋಗಿಣಿ, ಭ್ರಾತೃಮತಿ (ಸೋದರನಿದ್ದವಳು) ವಯಸ್ಸಿನಲ್ಲಿ ಕಿರಿಯಳು ಮತ್ತು ಅನ್ಯಋಷಿ ಗೋತ್ರದ ಕನ್ಯೆಯನ್ನು ವರಿಸಬೇಕಾಗಿತ್ತು.

ಸಪಿಂಡತೆಯನ್ನು ನಿವಾರಿಸಲು ಮುಖ್ಯಕಾರಣವಿತ್ತು. ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡಾರ್ಪಣ ಕ್ರಿಯೆ ಅತಿ ಮುಖ್ಯವಾಗಿತ್ತು. ಅನ್ನ ಪಿಂಡದ ಅರ್ಹತೆ ಬರಬೇಕಿದ್ದರೆ ಸಪಿಂಡತೆ ಇರಬಾರದು. ಸಪಿಂಡರು ಯಾರು ಅಂದರೆ ಮೂಲ ಪುರುಷನಿಂದ ಉದ್ಭೂತರಾದ ಸಂತತಿ. ತಂದೆ, ಮಗ, ಮೊಮ್ಮಗ, ಮರಿ-ಮಗ ಎಲ್ಲರೂ ಸಪಿಂಡರಾಗುತ್ತಾರೆ. ಇದರಲ್ಲಿ ಸ್ತ್ರೀಸಂತಾನವೂ ಸೇರ್ಪಡೆಯಾಗುತ್ತದೆ. ಮನುವಿನ ಕಾಲದಿಂದಲೂ ತಾಯಿಯ ಕಡೆಯಿಂದ ಐದು ತಲೆಮಾರಿನ ಮತ್ತು ತಂದೆಯ ಕಡೆಯಿಂದ ಏಳು ತಲೆಮಾರಿನ ಅಂತರವಿರಬೇಕು, ಎಂಬುದು ನಡೆದು ಬಂದ ಪದ್ಧತಿಯಾಗಿತ್ತು. ತಂದೆ. ತಾಯಿಯ ಕಡೆಯಿಂದ ಸಮಾನ ತಲೆಮಾರುಗಳ ಅಂತರದ ಮೇಲೆ ಒತ್ತು ಕೊಟ್ಟಿದ್ದನ್ನು ಯಾಜ್ಞವಲ್ಕ್ಯನೂ ಸೇರಿದಂತೆ ಹಲವಾರು ಸ್ಮೃತಿಕಾರರು ಎತ್ತಿ ಹಿಡಿದರು. ದಕ್ಷಿಣ ಭಾರತದಲ್ಲಿ ಸೋದರಿಕೆಯ ಸಂಬಂಧ ಅಥವಾ ಸೋದರ ಮಾವನ ಮಗಳನ್ನು (ಮಾತುಲ ಸುತಾ) ಮದುವೆಯಾಗುವ ಪದ್ಧತಿ ಇದ್ದರೂ ಬರೇ ಪಿಂಡಗಳ ಅಥವಾ ತಲೆಮಾರುಗಳ ಅಂತರದ ವಿವಾಹದ ವ್ಯವಸ್ಥೆ ವಿಜ್ಞಾನೇಶ್ವರನ ಕಾಲದಲ್ಲೂ ರೂಢಿಯಲ್ಲಿರಲಿಲ್ಲ. ಉತ್ತರ ಕರ್ನಾಟಕದ ಒಂದು ಬ್ರಾಹ್ಮಣ ಉಪಪಂಗಡ, ವಿಜ್ಞಾನೇಶ್ವರನ ಕುಲದ್ದೆಂದು ಹೇಳಿಕೊಳ್ಳುತ್ತದೆ. ಅವರಲ್ಲಿ ಸೋದರ ಮಾವನಿಗೇ ಹುಡುಗಿಯನ್ನು ಕೊಡುವ ಪದ್ಧತಿ ಇದೆ. ಇದು ಸ್ಮೃತಿ ನಿಷ್ಕಿದ್ಧವಾಗಿತ್ತು. ೧೪ನೇ ಶತಕದ ನಂತರ ಈ ಪದ್ಧತಿ ಹೆಚ್ಚು ಬಳಕೆಯಲ್ಲಿ ಬಂದಿರಬೇಕು. ಪರಾಶರ ಮಾಧವೀಯ (೧೪ನೇ ಶತಕ) ಸಂಸ್ಕಾರ ಕೌಸ್ತುಭ (೧೭ ನೇ ಶತಕ), ಧರ್ಮಸಿಂಧು, (೧೮ ನೇ ಶತಕ) ಗ್ರಂಥಗಳು ಮಾತುಲ ಸುತಾ ಮತ್ತು ಮಾತುಲ ವಿವಾಹಗಳಿಗೆ ಸಮ್ಮತಿ ನೀಡಿವೆ. ಈ ಕಲಿಯುಗದಲ್ಲಿ ಇಂಥ ಮದುವೆಗಳು ನಡೆಯುತ್ತವೆ ಎಂಬ ಟೀಕೆ ಸಹಿತ! ಸಾಮಾಜಿಕ ಸುರಕ್ಷಿತತೆ ಕಡಿಮೆಯಾಗುತ್ತ ಬಂದಂತೆ, ಕಟ್ಟು ಪಾಡುಗಳು ಬಿಗಿಯಾಗಿ ಕನ್ಯಯರಿಗೆ ವರಶೋಧ ಕಠಿಣವಾಗುತ್ತ ಬಂದಿತ್ತು. ಮದುವೆ ಆದಾಕ್ಷಣ ಹೆಣ್ಣು ಗೋತ್ರ ಮತ್ತು ಸಪಿಂಡತೆ ಕಳೆದುಕೊಂಡು ಬಿಡುತ್ತಾಳೆ! ಎಂಬುದು ಸಮರ್ಥನೀಯ ಅಂಶವಾಯಿತು. ಉತ್ತರಭಾರತದಲ್ಲಿ ಮಾತ್ರ ಈಗಲೂ ಈ ಪ್ರಕಾರದ ಎರಡೂ ಸಂಬಂಧಗಳಿಗೆ ನಿಷೇಧವಿದೆ. ತಾಯಿಯ ಕಡೆಯ ಭ್ರಾತೃಸಂಬಂಧಿಗಳಲ್ಲಿ ಸಾಪಿಂಡ್ಯವಿಲ್ಲವೆಂದೂ ಸಮುದಾಯ

ಶಕ್ತಿಯು ರೂಢಿಹಾಕಿಕೊಂಡಿರುವ ಸಾಧ್ಯತೆಯನ್ನೂ ಅರೆಮನಸ್ಸಿನಿಂದ ಒಪ್ಪಿಕೊಂಡಂತೆ, ವಿಜ್ಞಾನೇಶ್ವರ ಹೇಳಿದ್ದಾನೆ. ಸಮುದಾಯ ಶಕ್ತಿಯೆ ಮುಖ್ಯ! ಅದರಿಂದಾಗಿ ಹಿಂದಿನಿಂದ ನಡೆದು ಬಂದ ರೂಢಿಯೇ ಪಾಲನೆಗೆ ಯೋಗ್ಯವಾಗಿತ್ತು ಎಂಬುದು ಸಮರ್ಥನೆಯಾಗಿದೆ - ಸೋದರಿಯ ಮಗಳನ್ನು ಮದುವೆಯಾಗಲಿಕ್ಕೆ!

**ವಿವಾಹದ ವಯಸ್ಸು :** ವಿಜ್ಞಾನೇಶ್ವರನು ಕನ್ಯೆಯ ವಿವಾಹದ ವಯಸ್ಸು ಎಷ್ಟು ಇರಬೇಕು ಎಂದು ಖಚಿತವಾಗಿ ಹೇಳುವದಿಲ್ಲ! ತಂದೆ ಅಜ್ಜ, ಸೋದರರು ತಂದೆಯ ಕುಲದವರು, ತಾಯಿ ಇವರಿಗೆಲ್ಲ ಕನ್ಯದಾನದ ಅಧಿಕಾರವಿದ್ದು ಅದನ್ನು ಚಲಾಯಿಸದಿದ್ದರೆ ಭ್ರೂಣಹತ್ಯೆಯ ಪಾಪಕ್ಕೆ ಒಳಗಾಗುತ್ತಾರೆ! ಎಂಬ ಯಾಜ್ಞವಲ್ಕ್ಯ ವಾಕ್ಯವನ್ನು ವಿವರಿಸಿದರೂ ಅದಾಗಲೇ ಬಾಲವಿವಾಹ ಪ್ರಚಲಿತವಿತ್ತು ಎಂಬುದು ಸ್ಪಷ್ಟ. ೮ ವರ್ಷಕ್ಕೆ ಹುಡುಗರಿಗೆ ಉಪನಯನದ ಸಂಸ್ಕಾರದ ವಯಸ್ಸು. ಹೆಣ್ಣು ಮಕ್ಕಳಿಗೆ ಆ ಸಂಸ್ಕಾರವಿಲ್ಲದ್ದರಿಂದ ಅದೇ ವಯಸ್ಸಿನ ವಿವಾಹ ಆದರ್ಶಪ್ರಾಯವೆನಿಸಿಕೊಂಡಿತ್ತು ಆದರೆ ಸ್ಮೃತಿ ವಾಕ್ಯವನ್ನು ಎಲ್ಲ ವರ್ಣದವರೂ ಕಟ್ಟು ನಿಟ್ಟಾಗಿ ಪಾಲಿಸುತ್ತಿದ್ದರೆಂದು ಹೇಳಲಾಗದು! ಬ್ರಾಹ್ಮಣರಲ್ಲಿ ಮತ್ತು ಅವರನ್ನು ಎಲ್ಲ ವಿಧದಲ್ಲಿ ಅನುಕರಿಸುತ್ತಿದ್ದ ವೈಶ್ಯವರ್ಣದಲ್ಲಿ ಬಾಲವಿವಾಹ ಸರ್ವಸಾಮಾನ್ಯವಿರಲು ಸಾಕು. ದೊಡ್ಡವಳಾಗುವ ತನಕ ಕನ್ಯೆ, ಪಿತೃಗೃಹದಲ್ಲಿರುತ್ತಿದ್ದಳು. ಇಂಥ ಹುಡುಗಿಯನ್ನು ಸ್ವವಾಸಿನಿ ಎಂದು ಮಿತಾಕ್ಷಾರಾ ಬೇರೊಂದು ಸಂದರ್ಭದಲ್ಲಿ ಹೆಸರಿಸುತ್ತಿದೆ. ಈಗಲೂ ಗ್ರಾಮಾಂತರ ಪ್ರದೇಶಗಳಲ್ಲಿ ಬಾಲ ವಿವಾಹವೇ ರೂಢಿಯಲ್ಲಿದೆ. ಬಿಹಾರ, ರಾಜಸ್ಥಾನ, ಮಧ್ಯಪ್ರದೇಶಗಳಲ್ಲಿ ಅಂತೂ ರಾಜಾರೋಷವಾಗಿ ಬಾಲವಿವಾಹಗಳು ನಡೆಯುತ್ತವೆ. ಕರ್ನಾಟಕವೂ ಹೊರತಾಗಿಲ್ಲ.

ಆದರೆ ಕ್ಷತ್ರಿಯರ ಮಟ್ಟಿಗೆ ಯುವಾವಸ್ಥೆಯ ಮದುವೆಗಳೇ ಸಾಮಾನ್ಯವಿದ್ದವು. ವಿಜ್ಞಾನೇಶ್ವರನ ಸಮಕಾಲೀನ ಬಿಲ್ಹಣಕವಿಯ ವಿಕ್ರಮಾಂಕ ದೇವ ಚರಿತದಲ್ಲಿ ಚಂದಲೆಯ 'ಶೃಂಗಾರಮಿತ್ರ ವಯಸ್ಸಿ'ನಲ್ಲಿ ಆಕೆಯ ಸ್ವಯಂವರದ ಏರ್ಪಾಡು ನಡೆಯಿತು, ಎಂಬ ವಿಚಾರ ಬರುತ್ತದೆ. ೧೬ ರಿಂದ ೧೮ ವರ್ಷದವಳಿರಬಹುದಾದ ಆಕೆ, ವಿಕ್ರಮಾದಿತ್ಯನನ್ನೇ ವರಿಸುತ್ತಾಳೆ. ಕೊಂಚ ನಂತರದ ಕಾಲದ 'ಮಾನಸೋಲ್ಲಾಸ'ದಲ್ಲೂ ಮದುವೆಯಾದೊಡನೆ ರಾಜದಂಪತಿಗಳು ವೈವಾಹಿಕ ಜೀವನವನ್ನು ಪ್ರಾರಂಭಿಸಬೇಕೆಂದು ಹೇಳಿದೆ. ಹತ್ತನೆಯ ಶತಮಾನದ ಸೋಮದೇವ ಸೂರಿಯ ಯಶಸ್ತಿಲಕ ಮತ್ತು ನೀತಿ ವಾಕ್ಯಾಮೃತಗಳಲ್ಲಿ ಹುಡುಗನಿಗೆ ಹದಿನಾರು, ಹುಡುಗಿಗೆ ೧೨ ವರ್ಷ, ವಿವಾಹ ಯೋಗ್ಯ ವಯಸ್ಸು, ಎಂದು ಹೇಳಿರುವದರಿಂದ ಬಾಲ ಮತ್ತು ಕಿಶೋರಾವಸ್ಥೆಯ ಮದುವೆಗಳು ಸಾಮಾನ್ಯವಾಗಿದ್ದವು, ಎಂದು ಹೇಳಬಹುದು.

**ವಿಧವೆಯರ ಪಾಡು :** ಈ ಬಾಲವಿವಾಹದ ಅನಿಷ್ಟಪದ್ಧತಿ ಹೆಣ್ಣುಮಕ್ಕಳನ್ನು ಜೀವನದುದ್ದಕ್ಕೂ ಕಾಡುತ್ತಿದ್ದುದು ದುರ್ದೈವ ವಶಾತ್ ಆಕೆ ವಿಧವೆಯಾದಾಗ. ವಿಶ್ವದ ಯಾವುದೇ ಜನಾಂಗದಲ್ಲಿ ಹಿಂದೂ ಮೇಲು ವರ್ಗದ ಬಾಲವಿಧವೆಯಂತೆ ನಿರಂತರ ದುಃಖದ ಬಾಳುವೆಗೆ ಹೆಣ್ಣು ಗುರಿಯಾದದ್ದು ನೋಡಲು ಸಿಗುವದಿಲ್ಲ. ನಂತರದ ಶತಮಾನಗಳಲ್ಲಿ

ಕೇಶವಪನ ಅಥವಾ ಮುಂಡನದ ಘೋರ ಪದ್ಧತಿಯೂ ಕಾಣಿಸಿಕೊಂಡು ಮುಂಡನದ ಸನ್ಯಸನ ಜೀವನ, ಅಥವಾ ಸಹಗಮನ ಎರಡು ಅಮಾನುಷ ಪದ್ಧತಿಗಳಲ್ಲಿ ಒಂದನ್ನು ಆ ವಿಧವೆ ಹೆಣ್ಣು ಆರಿಸಬೇಕಾಗಿತ್ತು. ತೀರ ಕನಿಷ್ಟ ದರ್ಜೆಯ ಶುದ್ಧಕನ್ನಡ ಬೈಗಳು ಹೆಣ್ಣಿನ ಮುಂಡನಕ್ಕೆ ಸಂಬಂಧಪಟ್ಟದೆಂದು ನೆನೆಸಿಕೊಂಡರೆ ಹೆಣ್ಣಿನ ದುಃಖದ ಆಳ ಅರ್ಥವಾದೀತು! ಆದರೆ ಮಿತಾಕ್ಷರಾದಲ್ಲಿ ಮುಂಡನದ ಪ್ರಸ್ತಾಪವೇ ಇಲ್ಲ!.

"ವಿದ್ವತ್ ವಿಪ್ರನೃಪ, ಸ್ತ್ರೀಣಾಂ ನೇಷ್ಯತೆ ಕೇಶವಪನಂ ಋತೇ ಮಹಾಪಾತಕಿನೋ ಗೋಹಂತಾ ಚ ಅವರೇನ! ಇತಿಮನು ಸ್ಮರಣಾತ್" ಎಂದರೆ ಮಹಾಪಾತಕ ಮಾಡಿದರೂ ಸಹ ವಿದ್ವಾಂಸರು ವಿಪ್ರರು, ಅರಸು ಮತ್ತು ಸ್ತ್ರೀಯರ ತಲೆ ಬೋಳಿಸತಕ್ಕದಲ್ಲ! ಎಂದು ಮನುವಿನ ವಾಕ್ಯವನ್ನು ವಿಜ್ಞಾನೇಶ್ವರ ಎತ್ತಿ ಹಿಡಿದಿದ್ದಾನೆ. ಬಹುಶಃ ೧೪ನೇ ಶತಕದ ನಂತರ, ಮುಸ್ಲಿಂ ಆಕ್ರಮಣ ಹೆಚ್ಚುತ್ತ ಹೋದಂತೆ, ಸಾಮಾಜಿಕ ಕಟ್ಟುಗಳು ಬಿಗಿಯಾಗುತ್ತ ಬಂದಂತೆ, ಈ ರೂಢಿ, ಬಳಕೆಯಾಗಿರಬೇಕು. ವಿಧವೆಯಾದಾಕೆ ಸನ್ಯಾಸಿಯ ಕಠಿಣವ್ರತವನ್ನು ಆಚರಿಸಬೇಕಿತ್ತು. ಸನ್ಯಸನ ಪದ್ಧತಿಗೆ ಅತ್ಯವಶ್ಯವಿದ್ದ ಕೇಶವಪನ ಪದ್ಧತಿಯನ್ನು ಸಲೀಸಾಗಿ ವಿಧವೆ ಹೆಂಗಳೆಯರಿಗೆ ಅನ್ವಯಿಸಲಾಯಿತು.

೪. **ಸಹಗಮನ :** ಸತಿ ಹೋಗುವ ವಿಚಾರದಲ್ಲಿ ವಿಜ್ಞಾನೇಶ್ವರ ಮೀರಿದ ಔದಾರ್ಯ ತೋರಿಸಿದ್ದಾನೆ! ಜಾತಿ -ಭೇದವಿಲ್ಲದೇ ಎಲ್ಲಾ ವರ್ಣಗಳ ಅದೇಕೆ ಪಂಚಮವರ್ಗದ ಚಾಂಡಾಲಿಯರೂ ಕೂಡ ಸಹಗಮನ ಮಾಡಲಿ! ಎನ್ನುವ ವಿಶಾಲ ಮನೋಭಾವ ಅವನದು. ಕೆಲವು ಸ್ಮೃತಿಕಾರರ ಪ್ರಕಾರ ಬ್ರಾಹ್ಮಣಿಗೆ ಸಹಗಮನ ನಿಷಿದ್ಧವಿತ್ತು. ಆದರೆ, ಮಿತಾಕ್ಷರದ ಅಭಿಪ್ರಾಯದಲ್ಲಿ ಅದೊಂದು ಸರ್ವರಿಗೂ ಮಹಾಭ್ಯುದಯದ ಉಪಾಯ. ವ್ಯಾಸ, ಶಂಖ, ಅಂಗೀರಸ, ಹಾರೀತ ಎಲ್ಲಾ ಸ್ಮೃತಿಕಾರರನ್ನೂ ವಿಜ್ಞಾನೇಶ್ವ ತನ್ನ ವಾದ ಸಮರ್ಥನೆಯ ಸಂದರ್ಭದಲ್ಲಿ ಉದ್ಧರಿಸುತ್ತಾನೆ. "ಸತಿ ಹೋಗುವವಳ ತಾಯಿಯ ಕುಲ, ತಂದೆಯ ಕುಲ, ಪತಿಯ ಕುಲದ ಯಾವತ್ತೂ ಪಿತೃಗಳು ಶಾಶ್ವತವಾಗಿ ಸ್ವರ್ಗದಲ್ಲಿ ನಲಿಯುತ್ತಾರೆ. ಆವರಿಗೆ ನರಕದಲ್ಲಿ ಕೊಳೆಯುವ ಹಿಂದಿನ ಎಲ್ಲ ಪಿತೃಗಳಿಗೂ ಸಹ ಅದು ಸ್ವರ್ಗಕ್ಕೆ ದಾರಿ ಮಾಡಿಕೊಡುತ್ತದೆ. ಒಬ್ಬ ಸ್ತ್ರೀ, ಪತಿಯ ಶವದೊಂದಿಗೆ ಸುಟ್ಟುಕೊಂಡು ಸತ್ತರೆ ಶಾಶ್ವತ ಸ್ವರ್ಗ. ಆಕೆ, ತನಗೂ ಇತರರಿಗೂ ಸ್ವರ್ಗ ಸಿಗುವದನ್ನು ತಪ್ಪಿಸದಿರಲಿ! ಅದು ಆತ್ಮಘಾತವಲ್ಲ. ಮೋಕ್ಷ ವಿಧಾನ! ಎಂದು ವಿಧವಿಧವಾಗಿ ಸಹಗಮನ (ಇದರಲ್ಲಿ ಅನುಗಮನ, ಅನ್ವಾರೋಹಣಗಳೂ ಸೇರ್ಪಡೆಯಾಗಿವೆ)ವನ್ನು ಪ್ರೋತ್ಸಾಹಿಸಿದ್ದಾನೆ. ಮಹಾಮಹೋಪಾಧ್ಯಾಯ ಪಿ.ವಿ.ಕಾಣೆಯವರು. The reasoning of Mitakshara looks like special plea" ಎಂದು ಉದ್ಗರಿಸಿದ್ದಾರೆ! ಗರ್ಭಿಣಿ ಮತ್ತು ಚಿಕ್ಕಮಕ್ಕಳಿದ್ದವರು ಮಾತ್ರ ಸತಿ ಹೋಗಬೇಕಾಗಿಲ್ಲ ಎಂಬ ಅಂಶವನ್ನು ವಿತಾಕ್ಷರದಲ್ಲಿ ಸೇರಿಸಲಾಗಿದೆ. ಗಂಡ ಸತ್ತಾಗ, ಸಾವನ್ನು ಎದುರಿಸುವವಳೇ ನಿಜವಾದ ಪತಿವ್ರತೆ ಎಂದು ಸಾರಿ ಹೇಳಿದಾಗ ಈ ಆದರ್ಶಕ್ಕಾಗಿ ಸತಿ ಹೋಗುವ ಧೈರ್ಯಶಾಲಿ ಮಹಿಳೆಯರು ಇದ್ದೇ ಇದ್ದರು.

ಇಷ್ಟೆಲ್ಲ ಸಹಗಮನವನ್ನು ವೈಭವೀಕರಿಸಿದರೂ ಜನಸಾಮಾನ್ಯರಲ್ಲಿ ಹೆಚ್ಚಿನವರು ಸಹಗಮನ, ಅನ್ವಾರೋಹಣ ಅಥವಾ ಅನುಗಮನವನ್ನು ಕೈ ಕೊಳ್ಳುತ್ತಿದ್ದರು ಎಂದು ನಂಬುವಂತಿಲ್ಲ! ಕ್ಷತ್ರಿಯರಲ್ಲಿ ಅದು ಸಾಮಾನ್ಯವಾಗಿತ್ತು. ಬ್ರಾಹ್ಮಣ-ವೈಶ್ಯರಲ್ಲಿ ಆಯಾ ಮಹಿಳೆಯರು ಆಳುವ ವರ್ಗಕ್ಕೆ ಸೇರಿದ್ದಾದರೆ ಸತಿ ಹೋಗುತ್ತಿದ್ದರು. ಅವರನ್ನು ಅನುಕರಿಸಿಲು ಯತ್ನಿಸುವ ಮತ್ತು ಮಹಾಸಯಾದವಳು ದೇವತ್ವವನ್ನು ಪಡೆಯಲೆತ್ನಿಸುವ ಕಲ್ಲು ಮನಸ್ಸಿನ ಇತರ ಮಹಿಳೆಯರೂ ಸತಿ ಹೋಗುತ್ತಿದ್ದರು. ಇಂಥವರ ಸಂಖ್ಯೆ ಪತ್ತೆ ಹಚ್ಚುವದು ಕಷ್ಟ ಸಾಧ್ಯ! ಯಾಜ್ಞವಲ್ಕ್ಯನು ಈ ಪದ್ಧತಿಯನ್ನು ಎತ್ತಿ ಹಿಡಿದಿಲ್ಲ. ಮನವೂ ಹೇಳಿಲ್ಲ. ಅನಾರ್ಯವಾದ ಈ ದುಷ್ಟಪದ್ಧತಿ ಹೇಗೋ ತೀರ ಪ್ರಾಚೀನ ಕಾಲದಲ್ಲೇ ಭಾರತವನ್ನು ಪ್ರವೇಶಿಸಿ ಮಧ್ಯಯುಗದ ಹೊತ್ತಿಗೆ ಭಾರತದಾದ್ಯಂತ ಜನಪ್ರಿಯವಾಗಿಬಿಟ್ಟಿತು. ದಾನ ಚಿಂತಾಮಣಿ ಅತ್ತಿಮಬ್ಬೆಗೆ ಕಿರಿಯ ವಯಸ್ಸಿನ ಮಗನಿದ್ದು ಆಕೆಯ ತಂಗಿ ಗುಂಡಮಬ್ಬೆಯೇ ಮುಂದಾಗಿ ಸಹಗಮನ ಮಾಡಿದ್ದು ಈ ಸಂದರ್ಭದಲ್ಲಿ ನೆನೆಸಿಕೊಳ್ಳಬಹುದು. ಹೆಗ್ಗಡೆ ದೇವನ ಕೋಟೆಯ ಬೆಳತೂರಿನ ದೇಕಬ್ಬೆಯೆಂಬವಳ ಸತಿಯ ಕುರಿತು ಹೇಳುವದು ಉಚಿತವೆನಿಸುತ್ತದೆ. ಈ ದೇಕಬ್ಬೆ, ನುಗುನಾಡಿನ ಅಧಿಪತಿ ರವಿಗನ ಮಗಳಾಗಿದ್ದಳು. ನವಿಲೆ ನಾಡಿನ ಅರಸು ಏಚನನ್ನು ಮದುವೆಯಾಗಿದ್ದಳು. ಚೋಳ ಅರಸನ ವ್ಯಕ್ತಿಗತ ವೈರದ ಪ್ರಸಂಗದಲ್ಲಿ ಏಚನು ಕೊಲ್ಲಲ್ಪಟ್ಟಾಗ ದೇಕಬ್ಬೆ ತನ್ನ ಊರಿನಲ್ಲಿ ಸತಿಹೋಗಲು (ಅನುಮರಣ) ನಿರ್ಧರಿಸುತ್ತಾಳೆ. ಆಕೆಯ ತಂದೆ, ತಾಯಿ, ಸಂಬಂಧಿಕರೆಲ್ಲ ಅವಳ ಮನಸ್ಸನ್ನು ತಿರುಗಿಸಲು ಎಷ್ಟು ಪ್ರಯತ್ನಿಸಿದರೂ ಆಕೆ ಕೇಳದೇ ತಾನು ಹುಟ್ಟಿದ ಮತ್ತು ಕೊಟ್ಟ ಕುಲಕ್ಕೆ ಕೆಟ್ಟ ಹೆಸರು ತರುವವಳಲ್ಲವೆಂದು ಚಿತೆಯನ್ನು ಹೊಕ್ಕು ದೇವಲೋಕಕ್ಕೆ ಹೋದಳೆಂದು ವಿಜ್ಞಾನೇಶ್ವರನ ಸಮಕಾಲೀನ ಶಾಸನವೊಂದು ಸಾರುತ್ತದೆ. (ಕ್ರಿ. ಶ. ೧೦೫೭) ದೇಕಬ್ಬೆ ಕುಡಿಯರ ವಂಶಕ್ಕೆ ಸೇರಿದವಳಿದ್ದಳು. ಶೂದ್ರಕುಲದ ಮಹಿಳೆಯೊಬ್ಬಳು ಸತಿ ಹೋದ ಮೊದಲ ನಿದರ್ಶನ ಇದೆಂದು ಈ ಶಾಸನವನ್ನು ಸಂಪಾದಿಸಿದ ರೆವೆರಂಡ್ ಕಿಟ್ಟೆಲ್ ಹೇಳುತ್ತಾರೆ. ಮಿತಾಕ್ಷರಾ ರೂಪಗೊಳ್ಳುತ್ತಿದ್ದ ಕಾಲಕ್ಕೆ ವರ್ಣಭೇದವಿಲ್ಲದೇ ಸ್ತ್ರೀಯರು ಸತಿ ಹೋಗುತ್ತಿದ್ದುದು ಸಾಮಾನ್ಯವಾಗಿದ್ದಿರಬೇಕು. ಆದರೆ ಇದಕ್ಕೆ ಸಮಾಜದ ಪ್ರೋತ್ಸಾಹ ಅಷ್ಟೊಂದು ಇರಲಿಲ್ಲವೆಂದು ದೇಕಬ್ಬೆಯ ಶಾಸನದಿಂದ ಊಹಿಸಬಹುದು. ಕೆಲ ಸ್ಮೃತಿ ವ್ಯಾಖ್ಯಾನಕಾರರು, ಈ ಪದ್ಧತಿ ಕಲಿವರ್ಜಿತ ಎಂದು ಸಾರಿದ್ದರಿಂದ ವಿಜ್ಞಾನೇಶ್ವರನ ನಂತರದ ಶತಕಗಳಲ್ಲಿ ಸತಿ ಹೋಗುವವರ ಸಂಖ್ಯೆ ಗಾಬರಿಪಡಿಸುವಷ್ಟು ಹೆಚ್ಚಿ ಅದಕ್ಕೆ ಕಡಿವಾಣ ಹಾಕುವ ಪ್ರಯತ್ನ ಇದ್ದರೂ ಇರಬಹುದು.

೫. ಸ್ತ್ರೀಯ ಪರಾಧೀನತೆ : "ಕ್ವಚಿದಪಿ ಸ್ತ್ರೀಣಾಂ ನೈವ ಸ್ವಾತಂತ್ರ್ಯಂ" ಎಂದು ಯಾಜ್ಞವಲ್ಕ್ಯ ಸ್ಮೃತಿ, ಮನುವಿನ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಅಭಿಪ್ರಾಯವನ್ನೇ ಎತ್ತಿಹಿಡಿಯುತ್ತದೆ. ಮದುವೆಗೆ ಮೊದಲು ತಂದೆ, ನಂತರ ಪತಿ, ಮುಪ್ಪಿನಲ್ಲಿ ಮಕ್ಕಳು ಇವರೆಲ್ಲರ ಅಭಾವದಲ್ಲಿ ಜ್ಞಾತಿಗಳು ರಕ್ಷಣೆ ನೀಡಬೇಕು. ಯಾರೂ ಇಲ್ಲದಿದ್ದರೆ "ರಾಜಾ ಭರ್ತಾ

ಪ್ರಭುಃ ಸ್ತ್ರೀಯಃ" ಅಂದರೆ ಅಂತಹ ಸ್ತ್ರೀಯರ ರಕ್ಷಣೆ ಅರಸನ ಜವಾಬ್ದಾರಿ! ಎಂದು ಸ್ಪಷ್ಟವಾಗಿ ಮಿತಾಕ್ಷರಾ ಹೇಳುತ್ತದೆ. ರಕ್ಷಣೆ ಅಂದರೆ ತಂದೆ, ಪತಿ, ಮುಂತಾದವರು ಅಕಾರ್ಯ ಕರಣಾತ್ ರಕ್ಷೇದ್ ಅಂದರೆ ಸಲ್ಲದ ಚಟುವಟಿಕೆಗಳಿಂದ ಸ್ತ್ರೀಯರನ್ನು ರಕ್ಷಿಸಬೇಕು! ಎಂದು ಹೇಳಿದೆಯಾದರೂ ಆ ಅಲ್ಲಸಲ್ಲದ ಚಟುವಟಿಕೆಗಳು ಯಾವವು? ಎಂಬುದನ್ನು ಹೆಸರಿಸಿಲ್ಲ. ಅವನ್ನು ನಿರ್ಧರಿಸುವವರೂ ಗಂಡಸರೇ ಅಲ್ಲವೇ?

ಬಹುಪತ್ನಿತ್ವ. ರೂಢಿಯಲ್ಲಿತ್ತು. ಆದರೂ ಬಲವಾದ ಕಾರಣಗಳಿಲ್ಲದೇ ಎರಡನೇ ಮದುವೆ ಮಾಡಿಕೊಳ್ಳುವಂತಿರಲಿಲ್ಲ. ಮದ್ಯಪಾನದ ಚಟವಿದ್ದವಳು, ರೋಗಿಷ್ಟೆ, ಧೂರ್ತೆ, ಬಂಜೆ, ಹಣ ದುಂದು ಮಾಡುವವಳು, ಬರೇ ಹೆಣ್ಣು ಹಡೆಯುವವಳು ಪುರುಷ ದ್ವೇಷಿಣೆ ಮುಂತಾದವು ದೋಷಗಳೆಂದು ಪರಿಗಣಿಸಲ್ಪಡುತ್ತಿದ್ದವು. ಬಂಜೆತನಕ್ಕೆ ಕೇವಲ ಹೆಣ್ಣೇ ಕಾರಣವಲ್ಲ! ಎಂದು ಗೊತ್ತಿಲ್ಲದ ಮತ್ತು ಹೆಣ್ಣು ಸಂತಾನವನ್ನು ತಪ್ಪಿಸಲು ಸಾಧ್ಯವಾಗದ ಯುಗದಲ್ಲಿ ಹೆಣ್ಣಿಗೇ ಅನ್ಯಾಯ ಕಟ್ಟಿಟ್ಟದ್ದು. ಆದರೂ ಬೇಕುಬೇಕಾದಂತೆ ಹೆಣ್ಣನ್ನು ತ್ಯಜಿಸುವಂತಿರಲಿಲ್ಲ. ಆಕೆಗೆ ಸಲ್ಲಬೇಕಾದ ಸ್ತ್ರೀಧನದ ವ್ಯವಸ್ಥೆ ಮಾಡಬೇಕಾಗುತ್ತಿತ್ತು. ಗಂಡು ಸಂತತಿ ಅತಿ ಮುಖ್ಯ. ಪಿಂಡದಾನ ಕಡ್ಡಾಯ. ಮನೆತನ ಮುಂದುವರಿಯಬೇಕು. ಸಮಾಜ ದುರ್ಬಲವಾಗಬಾರದು. ಈ ವಿಚಾರಗಳೇ ಸ್ಮೃತಿಕಾರರಿಗೆ ಮುಖ್ಯವಾಗಿದ್ದವು. ಸಜೀವ ಹೆಂಡತಿಯನ್ನು ಗಂಡನ ಶವದೊಟ್ಟಿಗೇ ಸುಡಲು ಸಿದ್ಧರಿದ್ದ ಜನ, ಹೆಂಡತಿ, ಯೇನಕೇನ ಕಾರಣದಿಂದ ಮೃತಳಾದರೆ ಅವಳನ್ನು ದಹನ ಮಾಡಿ ಬಂದು ಆ ಕೂಡಲೇ (ಅವಿಲಂಬಯನ್) ಮರುಮದುವೆಯನ್ನು ಗಂಡನಾಗಿದ್ದವನು ಮಾಡಿಕೊಳ್ಳಬೇಕು ಎಂದು ವಿಧಿಸಿದ್ದಾರೆ. ಅದಕ್ಕೆ ಕಾರಣವನ್ನೂ ಮಿತಾಕ್ಷರಾ ಕೊಡುತ್ತದೆ. ಸಂಸಾರದ ಬಗೆಗೆ ವ್ಯಕ್ತಿಯು ಪೂರ್ಣ ವಿರಕ್ತನಾಗಿರುವದಿಲ್ಲ ಆತನ ಗುರುತರ ಗೃಹಸ್ಥನ ಜವಾಬ್ದಾರಿ ನಿರ್ವಹಿಸಲು ಗೃಹಿಣಿಯ ಸಹಾಯ ಬೇಕೇ ಬೇಕು. ವಿಧುರನು ಯಜ್ಞ-ಯಾಗ-ಅಗ್ನಿಹೋತ್ರಾದಿ ವಿಧಿಗಳನ್ನು ಒಬ್ಬನೇ ನಿರ್ವಹಿಸಲಾರ. ದಾನ ಧರ್ಮಗಳನ್ನು ಸ್ವೀಕರಿಸಲಾರ, ಹೀಗಾಗಿ ಮರುಮದುವೆಯು ಅವಸರವಂತೆ!

ನಿಯೋಗ ಮತ್ತು ವಿಧವಾ ವಿವಾಹಗಳ ಉಲ್ಲೇಖ ಇದ್ದರೂ ಅವುಗಳ ವಿವರಣೆಯಿಲ್ಲ. ಇವೆರಡೂ ನಿಂತು ಹೋಗಿ ಶತಮಾನಗಳೇ ಕಳೆದು ಹೋಗಿದ್ದವು. ಅದರಂತೆ ಸ್ವಯಂವರದ ಪ್ರಸ್ತಾಪವಿದ್ದರೂ ಬಾಲವಿವಾಹವೇ ಪ್ರಚಲಿತವಿದ್ದ ಯುಗದಲ್ಲಿ ಅದನ್ನು ಚಲಾಯಿಸುವದಾದರೂ ಹೇಗೆ?

ಇಷ್ಟೆಲ್ಲ ಹೀನಾಯವಾಗಿ ಕಂಡರೂ ಸ್ತ್ರೀಯರಿಗೆ ಸಮಾಜದಲ್ಲಿ ಗೌರವಾನ್ವಿತ ಸ್ಥಾನವಿದೆಯೆಂದು ಮತ್ತೆ ಮತ್ತೆ ಸ್ಮೃತಿಕಾರರು ನೆನಪಿಸುತ್ತಾರೆ. ಯಾಜ್ಞವಲ್ಕ್ಯನು ಮನುವನ್ನು ಅನುಸರಿಸಿ ಹೇಳಿದ ಕೆಲವು ಅಂಶಗಳು ಇಂತಿವೆ.

೧) ರಸ್ತೆಯಲ್ಲಿ ಹೆಂಗಸರಿಗೆ ದಾರಿ ಬಿಡಬೇಕು. ವೃದ್ಧ, ಭಾರ ಹೊರುವವ ರಾಜ, ಸ್ನಾತಕ, ರೋಗಿ, ವಾಹನಗಳಂತೆಯೇ ಹೆಣ್ಣು.

೨) ಕನ್ಯೆಯ ಕುರಿತು ದೋಷಾರೋಪ ಮಾಡಿದರೆ, ರೋಗಿಷ್ಟೆ ಎಂದು ಸುಳ್ಳು ಸುದ್ದಿ ಹರಡಿದರೆ, ಶಿಕ್ಷೆಯಾಗುತ್ತಿತ್ತು.

೩) ಹೆಣ್ಣು ಮಕ್ಕಳಿಗೆ ಗಲ್ಲು ಶಿಕ್ಷೆ ಇರಲಿಲ್ಲ.

೪) ಯಾವ ವರ್ಣದ ಹೆಂಗಸೂ ಕರ (ಟ್ಯಾಕ್ಸ್) ಕಟ್ಟಬೇಕಾಗಿರಲಿಲ್ಲ.

೫) ದಿವ್ಯ ಪರೀಕ್ಷೆಗಳಲ್ಲಿ ಕ್ರೂರವಾದುದನ್ನು ಸ್ತ್ರೀ ಗೆ ಕೊಡುತ್ತಿರಲಿಲ್ಲ.

೬) ಪತಿತನ ಮಗಳು ಪತಿತಳಲ್ಲ. ಮಗ ಪತಿತ! ಮಗಳಿಗೆ ಯಾವತ್ತೂ ಸಲ್ಲಬೇಕಾದ ಒಡವೆ- ವಸ್ತ್ರಗಳನ್ನು ಕೊಡಮಾಡಿ ಸವರ್ಣೀಯನಿಗೆ ಕೊಟ್ಟು ಮದುವೆ ಮಾಡಬೇಕು ಎಂದು ಸ್ಪಷ್ಟವಾಗಿ ಹೇಳಿದೆ. ಅರ್ಥಾತ್ ತಂದೆಯ ಮಹಾಪರಾಧಕ್ಕೆ ಮಗಳಿಗೆ ಕಷ್ಟ ಕೊಡುವಂತಿರಲಿಲ್ಲ.

ಪತಿಯು ದೇಶಾಂತರಕ್ಕೆ ಹೋದಾಗ ಪತ್ನಿಯು ಸಂಯಮ ಪಾಲಿಸಬೇಕಿತ್ತು. ಉತ್ಸವ, ಜಾತ್ರೆ, ಆಟ ಪಾಟಗಳಲ್ಲಿ ಭಾಗವಹಿಸಬಾರದು. ಮದುವೆ, ವಿನೋದ, ಸಮಾರಂಭಗಳಲ್ಲಿ ಭಾಗವಹಿಸಬಾರದು ಎಂದಿದೆ. ಅರ್ಥಾತ್ ಪತಿಯು ಊರಲ್ಲಿ ಇದ್ದರೆ ಸಾಮಾಜಿಕ ಜೀವನ ಅವಳಿಗೆ ಲಭಿಸುತ್ತಿತ್ತು. ಕ್ಷತ್ರಿಯ ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯ ಇತ್ತು. ಮಾನಸೋಲ್ಲಾಸದಲ್ಲಿ ಅರಸನ ಓಲಗಕ್ಕೆ ಬೇರೆ ಬೇರೆ ವರ್ಗಗಳ ಸ್ತ್ರೀಯರು ಆನೆ, ಕುದುರೆ, ಮೇಣೆಗಳಲ್ಲಿ ಅಥವಾ ರಾಜ ಮಾರ್ಗಗಳಿಂದ ನಡೆದು ಬರುತ್ತಿದ್ದ ಉಲ್ಲೇಖವಿದೆ. ಮುಸ್ಲಿಂ ಆಕ್ರಮಣದ ನಂತರ ಪರ್ದಾ ಪದ್ಧತಿ ಜಾರಿಗೆ ಬಂದಿರಬೇಕು.

ಹೊಯ್ಸಳ ಹಾಗೂ ಚಾಲುಕ್ಯ ರಾಣಿಯರೆಲ್ಲ ವಿವಿಧ ಕಲೆಗಳಲ್ಲಿ ಕುಶಲೆಯರಿರುವಂತೆ ಆಡಳಿತದಲ್ಲೂ ಮುಂದಾಗಿದ್ದರು. ವಿಜ್ಞಾನೇಶ್ವರನ ಆಶ್ರಯದಾತ, ಚಾಲುಕ್ಯ ವಿಕ್ರಮಾದಿತ್ಯನಿಗೆ ಹಲವಾರು ಹೆಂಡಂದಿರು. ಅವರೆಲ್ಲ ಗ್ರಾಮ, ಊರು, ಪ್ರದೇಶಗಳನ್ನು ಆಳುತ್ತಿದ್ದರಲ್ಲದೇ ನೆಲೆವೀಡು, ಅಥವಾ ಯುದ್ಧಕ್ಕೆ ಬೀಡು ಬಿಟ್ಟಲ್ಲಿಯೂ ಅರಸನ ಜೊತೆಗೆ ಹೋಗುತ್ತಿದ್ದರು. ಬೇಟೆ, ವಿಜಯ ಯಾತ್ರೆಗಳಲ್ಲೂ ಅವನೊಡನಿರುತ್ತಿದ್ದರು. ಸ್ಮೃತಿ ಗ್ರಂಥಗಳಲ್ಲಿ ಚಿತ್ರಿಸಲ್ಪಟ್ಟ ಭಾರೀ ಕಟ್ಟುನಿಟ್ಟುಗಳು, ದೈನಂದಿನ ಜೀವನದಲ್ಲಿ ಅಕ್ಷರಶಃ ಪಾಲಿಸಲ್ಪಡುತ್ತಿದ್ದವೇ? ಎಂಬುದು ಅನುಮಾನಸ್ಪದ!

ಬ್ರಾಹ್ಮಣವರ್ಗದಲ್ಲಿ ಮಾತ್ರ ಸ್ಮೃತಿವಾಕ್ಯವನ್ನು ವೇದವಾಕ್ಯದಂತೆ ಪರಿಗಣಿಸುವ ವೃತ್ತಿ ಬೆಳೆದು ಶತಮಾನಗಳು ಜಾರಿದಂತೆ ಮಹಿಳೆಯರ ಸ್ಥಿತಿ ದಯನೀಯವಾಗುತ್ತ ನಡೆಯಿತು. ಬಾಲವಿವಾಹ, ಬಹುಸಂತಾನ, ವಿಧವಾಜೀವನದ ದುಸ್ಸಹ ಪರಿಸ್ಥಿತಿಗಳಿಗೆ ವಿದ್ಯೆಯ ಅಭಾವ, ಪರಾವಲಂಬನೆಗಳು ಸೇರಿಕೊಂಡರೆ ಏನು ಸಾಧನೆಯಾಗಬಲ್ಲದು? ರಾಜಕೀಯ ಗೊಂದಲವು ಸಾಮಾಜಿಕ ಅರಕ್ಷಿತತೆಗೆ ದಾರಿ ಮಾಡಿಕೊಡುತ್ತದೆ. ಹೊರಗಿನ ಸಹಾಯ ದುರ್ಲಭವಾದಾಗ ಇದ್ದದ್ದನ್ನೇ ಹೇಗಾದರೂ ಕಾಪಾಡಿಕೊಂಡು ಜೀವನಿರ್ವಹಣೆ ಸಾಗಿಸುವದು ಮಾನವ ಪ್ರವೃತ್ತಿ. ಸೋತ ಪ್ರದೇಶದಲ್ಲಿ ಕೊಲೆ ಸುಲಿಗೆಗಳು ಸಾಮಾನ್ಯವಿದ್ದಾಗ, ಸ್ತ್ರೀಯರ ಪರಿಸ್ಥಿತಿ ಅತ್ಯಂತ ಅಸಹಾಯಕವಾಗುತ್ತದೆಯಾದ್ದರಿಂದ ಅವರನ್ನು ಕಾಯ್ದು ಕೊಳ್ಳುವದು ಅದ್ಯ ಕರ್ತವ್ಯ ಎಂದು

ಭಾವಿಸಿರಲು ಸಾಕು. ಸ್ತ್ರೀಯ ನಿಕೃಷ್ಟ ಸ್ಥಾನ, ಭಾರತಕ್ಕೆ ಮಾತ್ರ ಸೀಮಿತವಾಗಿರದೇ ಸಮಕಾಲೀನ ವಿಶ್ವದ ವಿವಿಧ ಸಮಾಜಗಳಲ್ಲೂ ಕಂಡುಬರುತ್ತಿತ್ತು. ದಮನದ ಪದ್ಧತಿಗಳು ಮಾತ್ರ ಬೇರೆ ಬೇರೆಯಾಗಿದ್ದವು.

ಸ್ತ್ರೀಧನ :ಬಹುಚರ್ಚಿತವಾದ ಈ ವಿಷಯ ಶತಕದಿಂದ ಶತಕಕ್ಕೆ ವಿವಿಧ ರೂಪತಾಳಿ ಈ ಶತಕದಲ್ಲೂ ಚರ್ಚಾಸ್ಪದವಾಗಿಯೇ ಮುಂದುವರಿದಿದೆ. ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಸ್ತ್ರೀಧನದ ವ್ಯಾಪ್ತಿ ವಿಶಾಲವಾಗಿತ್ತು. ಕಾತ್ಯಾಯನನ ವ್ಯಾಖ್ಯೆ ನೋಡಿದರೆ, ಮಹಿಳೆಯು ಮದುವೆಗೆ ಮೊದಲು, ಮತ್ತು ನಂತರ ಹೊಂದಿದ ಚರಾಚರ ಆಸ್ತಿಯೆಲ್ಲ ಸ್ತ್ರೀಧನದಲ್ಲಿ ಸೇರ್ಪಡೆಯಾಗಿತ್ತು. ಹೆಣ್ಣುಮಕ್ಕಳು ಸಮಾಜದ ಅವಿಭಾಜ್ಯ ಮತ್ತು ಸ್ವತಂತ್ರ ಸದಸ್ಯರೆಂದು ಗುರುತಿಸಲ್ಪಟ್ಟ ದಿನಗಳಲ್ಲಿ ಅರ್ಥಿಕ ನಿರ್ಭರತೆಯೂ ಮುಖ್ಯವಾಗಿತ್ತು. ಈ ಆರ್ಥಿಕ ಅನುಕೂಲವನ್ನು ಮೊದಲು ಸೂತ್ರಕಾರರು, ನಂತರ ಸ್ಮೃತಿಕಾರರು ಎತ್ತಿಹಿಡಿದರು. ಮಗಳಾಗಿ, ಮಡದಿಯಾಗಿ, ತಾಯಿಯಾಗಿ, ಅಕಸ್ಮಾತ್ ವಿಧವೆಯದರೂ ಅವಳ ಆಸ್ತಿಯ ಹಕ್ಕಿಗೆ ಚ್ಯುತಿಬಾರದಂತೆ ಕೆಲನಿಯಮಗಳನ್ನು ಹಾಕಿಕೊಟ್ಟರು. ಕಾಣೆಯವರ ಅಭಿಪ್ರಾಯದಲ್ಲಿ ಶತಕಗಳಲ್ಲಿ ಸ್ತ್ರೀಯರ ಪಾಲಿನ ಆಸ್ತಿಯೂ ಬೆಳೆಯುತ್ತ ಹೋಗಿ ಅವಿಭಕ್ತ ಕುಟುಂಬದಲ್ಲಿ ಅದಕ್ಕೆ ಕಡಿವಾಣ ಹಾಕಿಬೇಕಾದ ಕಾಲವೊದಗಿ ಸ್ತ್ರೀಧನದ ಮೂಲಕಲ್ಪನೆ ಬದಲಾಗಿರಬೇಕು. ಕೊನೆಗೊಮ್ಮೆ ಅವಳ ಪಾಲಿನ 'ಸ್ಥಿರ' ಆಸ್ತಿಯನ್ನೇ ಕೈಬಿಟ್ಟು ಸ್ತ್ರೀಧನದ ವಿಚಾರ 'ಚ'ರಕ್ಕೆ ಸೀಮಿತವಾಗಿರುವಂತಾಯಿತು. (ಚರ=ಸುಲಭವಾಗಿ ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯಬಹುದಾದದ್ದು.)

ಸ್ತ್ರೀಧನದಲ್ಲಿ 'ಪ್ರಾಪ್ತ', 'ಲಬ್ಧ', ಮತ್ತು 'ದತ್ತ' ಭಾಗಗಳಿವೆ. ಗಂಡುಮಕ್ಕಳಂತೆ ತಂತಾನೆ ಪಾಲಿಗೆ ಬಂದದ್ದು 'ಲಬ್ಧ'ವಾದರೆ ಮದುವೆಯ ಸಮಯದಲ್ಲಿ ಒಡವೆ, ಬಟ್ಟೆ, ಬರೆ, ಪಾತ್ರೆಗಳು 'ಪ್ರಾಪ್ತ' ವೆನಿಸಿಕೊಳ್ಳುತ್ತಿದ್ದವು. 'ದತ್ತ'ವೆಂಬುದು ಕಾಣಿಕೆಗಳ ರೂಪ ಇತ್ತು. ವರನಾದವನು ಗೋವುಗಳ ರೂಪದಲ್ಲಿ ಅಥವಾ ತತ್ಸಮ ಇನ್ನೊಂದು ಉಡುಗೊರೆಯನ್ನು 'ಗುಡ್‌ವಿಲ್' ರೂಪದಲ್ಲಿ ಕಾಣಿಕೆ ಸಲ್ಲಿಸಬೇಕಿತ್ತು. ಅದು ಕೂಡ ಮದುವೆಯ ನಂತರ ಮಗಳಿಗೇ ಸೇರುತ್ತಿತ್ತು. ಸ್ತ್ರೀಧನದ ಮೊತ್ತ ಸಾಕಷ್ಟು ಇರುತ್ತಿತ್ತು. ಮನುಧರ್ಮಶಾಸ್ತ್ರದಲ್ಲಿ ಸ್ತ್ರೀಧನ ಎತ್ತಿಹಾಕಿದವನನ್ನು ಅರಸನಾದವನು ಪತ್ತೆ ಹಚ್ಚಿ, ಶಿಕ್ಷೆ ವಿಧಿಸಬೇಕೆಂದು ಹೇಳಿದೆ. ಅದೇ ಅಭಿಪ್ರಾಯವನ್ನು, ಯಾಜ್ಞವಲ್ಕ್ಯ ಸ್ಮೃತಿ ಮತ್ತು ಮಿತಾಕ್ಷರಾ ಸಮರ್ಥಿಸುತ್ತವೆ.

'ಯದಿ ಹ್ಯೇತರೋ ಹ್ಯೇಷಾಂ ಸ್ತ್ರೀಧನಂ ಭಕ್ಷಯೇತ್ ಬಲಾತ್ । ಸವೃದ್ಧಿಕಂ ಸದಾಪ್ಯಃ ಸ್ಯಾದ್ ದಂಡಂ ಚೈವ ಸಮಾಪ್ನುಯಾದ್॥'

ಸ್ತ್ರೀಧನ ಎತ್ತಿಹಾಕಿದವರಿಗೆ ಅದರ ಬಡ್ಡಿಯ ಜೊತೆಗೆ ದಂಡವನ್ನೂ ವಿಧಿಸಲಾಗುತ್ತಿತ್ತು. ಇಲ್ಲಿ 'ವೃದ್ಧಿ' ಅಥವಾ ಬಡ್ಡಿಯ ಉಲ್ಲೇಖ ಇರುವುದರಿಂದ ಒಡವೆ-ವಸ್ತ್ರಗಳ ಸ್ತ್ರೀಧನದಲ್ಲಿ ಜೊತೆಗೆ ದುಡ್ಡೂ ಸಂದಾಯವಾಗುತ್ತಿತ್ತು ಎಂಬುದು ಸ್ಪಷ್ಟ.

ತಂದೆಯು ತನ್ನ ಆಸ್ತಿಯನ್ನು ಸ್ವಂತ ಇಚ್ಛೆಯಿಂದ ಸಮಾನ ವಿಭಾಗ ಮಾಡಿ ಪುತ್ರನಿಗೆ ಕೊಡಮಾಡಿದಾಗ ಪತ್ನಿಗೂ ಅಷ್ಟೇ ಪಾಲನ್ನು ಕೊಡಬೇಕು ಎಂಬ ಯಾಜ್ಞವಲ್ಕ್ಯನ ನಿರ್ದೇಶನವನ್ನು ಮಿತಾಕ್ಷರಾ ಎತ್ತಿ ಹಿಡಿದಿದೆ. ಸ್ಮೃತಿಕಾರ ಯಾಜ್ಞವಲ್ಕ್ಯ ಮತ್ತು ಟೀಕಾಕಾರ ವಿಜ್ಞಾನೇಶ್ವರರ ನಡುವೆ ೮.೧೦ ಶತಮಾನಗಳ ಅಂತರವಿದ್ದರೂ ಸ್ತ್ರೀಧನದ ಮಟ್ಟಿಗೆ ತನ್ನ ಯುಗಧರ್ಮಕ್ಕೆ ಮೀರಿಯೇ ವಿಜ್ಞಾನೇಶ್ವರ ಉದಾರ ಮನೋಭಾವ ತೋರಿದ್ದಾನೆ, ಎಂದು ಹೇಳಬೇಕಾಗುತ್ತದೆ.

ಸ್ತ್ರೀಧನವು ಪತಿ ಅಥವಾ ಮಾವನಿಂದ ದತ್ತ ಅಥವಾ ಕೊಡಲ್ಪಡದೇ ಇದ್ದಿದ್ದರೆ ಈ ಸಮಾನಾಂಶದ ಭಾಗ ಪತ್ನಿಗೆ ಸಿಗುತ್ತಿತ್ತು. ಸ್ತ್ರೀಧನ ಪ್ರಾಪ್ತವಾಗಿದ್ದರೆ. ಆ ಪಾಲಿನ ಅರ್ಧಾಂಶ ದೊರೆಯುತ್ತಿತ್ತು. ಸ್ತ್ರೀಧನ ನೇರವಾಗಿ ಆಕೆಯ ಹೆಣ್ಣುಮಕ್ಕಳಿಗೇ ಹೋಗುತ್ತಿತ್ತು. ಕನ್ಯೆಯರು ಇರದಿದ್ದರೆ ಮಾತ್ರ ಗಂಡುಮಕ್ಕಳಿಗೆ. ಋಣ ಅಥವಾ ಸಾಲವಿದ್ದರೂ ಗಂಡು ಮಕ್ಕಳು ಹಂಚಿಕೊಳ್ಳಬೇಕು ಹೆಣ್ಣು ಮಕ್ಕಳು ಋಣಭಾರದಿಂದ ಮುಕ್ತರು. ಗಂಡನಿಗೆ ಕೂಡ ಸ್ತ್ರೀಧನದ ಮೇಲೆ ಅಧಿಕಾರವಿರಲಿಲ್ಲ. ಬರಗಾಲ, ಧರ್ಮಕಾರ್ಯ, ಕಾಯಿಲೆ ಮುಂತಾದ ಸಂಕಟ ಸಮಯಗಳಲ್ಲಿ ಮಾತ್ರ ಸ್ತ್ರೀಧನ ಬಳಸಿಕೊಳ್ಳಬಹುದಾಗಿತ್ತು.

ಈಗಿನ ಸೆಕ್ಯುಲರ್ ಪದಕ್ಕೆ ಬಹಳ ಹತ್ತಿರದ ನಿಲುವನ್ನು ಆಸ್ತಿಯ ದಾಯಭಾಗದ ಸಂದರ್ಭದಲ್ಲಿ ವಿಜ್ಞಾನೇಶ್ವರನು ತಳೆದಿದ್ದಾನೆ. ಆಸ್ತಿ (ಸೊತ್ತು) ಎಂಬುದು (ಲೌಕಿಕಂ ಏವ ಸತ್ವಂ) ಲೌಕಿಕವಾದದ್ದು ಅದಕ್ಕೆ ಧಾರ್ಮಿಕ ಹಿನ್ನೆಲೆ ಇಲ್ಲ ಎಂಬುದನ್ನು ಸ್ಪಪಡಿಸಿದ್ದಾನೆ. ಆಸ್ತಿಯುಳ್ಳ ಜನರ ಸ್ವಂತ ಸಂಪಾದನೆ, ದಾಯಾದಿಗಳಿಗೆ ಹೋಗುವದಿಲ್ಲ ಇತ್ಯಾದಿ ಹಲವಾರು ವ್ಯಾವಹಾರಿಕ ಸಲಹೆಗಳನ್ನು ಕೊಟ್ಟಿದ್ದಾನೆ. ಅರ್ಥಾತ್ ಅದು ಸ್ತ್ರೀ ಸಂತಾನಕ್ಕೆ ಸಲ್ಲಬೇಕು! ಸಂಬಂಧಿಕರಿಗೆ ಅಲ್ಲ.

ತಾಯಿಯಿಂದ ಮಗಳಿಗೆ ಸ್ತ್ರೀತ್ವದ ಅಂಶ ಹರಿದು ಬರುತ್ತದೆಯಾದ್ದರಿಂದ ಅವಳ ಸಂಪತ್ತಿಗೆ ಹೆಣ್ಣು ಮಕ್ಕಳು ಬಾಧ್ಯಸ್ಥರು. ಯುರೋಪಿನಲ್ಲಿ ವಿವಾಹಿತ ಮಹಿಳೆಯ ಆಸ್ತಿಹಕ್ಕು (Married Women's property act) ಬಳಕೆಯಲ್ಲಿ ಬಂದದ್ದು ೧೮೮೭ರಲ್ಲಿ. 'ಕೋಡ್ ನೆಪೋಲಿಯನ್' ಮಹಿಳೆಯರ ಮೂಲಭೂತ ಹಕ್ಕುಗಳನ್ನು ಗುರುತಿಸುವ ಪ್ರಥಮ ಪ್ರಯತ್ನವಾಗಿದೆ. ಆ ತನಕ ಪಾಶ್ಚಾತ್ಯ ಹೆಂಗಳೆಯರಿಗೆ, ಕಾಯದೆ ಪ್ರಕಾರ, ಯಾವ ಆಸ್ತಿ ಅಥವಾ ಹಣಕ್ಕೂ ಹಕ್ಕು ಇರಲಿಲ್ಲ ಎಂಬುದನ್ನು ನೆನೆಸಿಕೊಂಡಾಗ ನಮ್ಮ ಸ್ಮೃತಿಕಾರರು ಸಹಸ್ರಾರು ವರ್ಷ ಮೊದಲೇ ಅದನ್ನು ಗುರುತಿಸಿದ್ದರು. ಮತ್ತು ತಲೆ ತಲಾಂತರವಾಗಿ ಹೆಣ್ಣಿನಿಂದ ಹೆಣ್ಣಿಗೆ ಆಸ್ತಿ ಸೇರುವ ವ್ಯವಸ್ಥೆ ಮಾಡಿದ್ದರು. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ಸ್ವಲ್ಪವಾದರೂ ಆರ್ಥಿಕ ಭದ್ರತೆ ನೀಡಲು ಸಹಾಯ ಮಾಡಿದರಲ್ಲ! ಶತಕದಿಂದ ಶತಕಕ್ಕೆ ವಸ್ತು ಸ್ಥಿತಿ ಬದಲಾಗಿ ವ್ಯಾಖ್ಯಾನ ವಿಶ್ಲೇಷಣೆಗಳೂ ಬದಲಾಗಿ ಸ್ತ್ರೀಯರಿಗೆ ಅನ್ಯಾಯವಾಗಿದ್ದರೆ, ಅದು ಸ್ಮೃತಿಕಾರರ ತಪ್ಪಲ್ಲ!

ಹಿಂದಿನ ಯಾವುದೇ ಸ್ಮೃತಿಕಾರರಿಗಿಂತ ಸ್ತ್ರೀಧನದ ವಿಚಾರದಲ್ಲಿ ವಿಜ್ಞಾನೇಶ್ವರ ಉದಾರ ನಿಲುವನ್ನು ತಳೆದಿದ್ದ. ಆದರೂ ಸ್ತ್ರೀಧನದ ಮೊತ್ತ ಕಡಿಮೆ ಆಗುತ್ತ ಬಂದಿತು. ಒಂದು ದೃಷ್ಟಿಯಲ್ಲಿ ಇದು ಒಳ್ಳೆಯದೇ! ಜೀಮೂತವಾಹನನ ದಾಯಭಾಗ ಪದ್ಧತಿ ಪ್ರಚಲಿತವಿದ್ದ ಬಂಗಾಲದಲ್ಲಿ ಅವಿಭಕ್ತ ಕುಟುಂಬದ ವಿಧವೆಗೆ ನಿಧನ ಹೊಂದಿದ ಪತಿಯ ಪಾಲಿನ ಹಕ್ಕನ್ನು ಕೊಡಮಾಡಿ ತೋರಿಸಿದ ಔದಾರ್ಯವೇ ಆಕೆಯ ಪಾಲಿಗೆ ಉರುಳು ಅಲ್ಲ. ದಹಿಸುವ ಅಗ್ನಿಯಾಗಿ ಪರಿಣಮಿಸಿತು! ಸತಿ ಹೋಗಲು ಒತ್ತಾಯ ನಾಲ್ಕೂ ಕಡೆಯಿಂದ ಬರಲಾರಂಭಿಸಿತು. ಅಲ್ಲಿ ಕಂಡು ಬಂದಷ್ಟು ಸಹಗಮನ ಪ್ರಕರಣಗಳು ಭಾರತದ ಬೇರೆ ಪ್ರದೇಶಗಳಲ್ಲಿ ಇರಲಿಲ್ಲ. ಆಸ್ತಿ ಮತ್ತು ಬಂಗಾರಗಳೇ ಇದಕ್ಕೆ ಕಾರಣವೆಂದು ಬೇರೆ ಹೇಳಬೇಕೆ ?ಬಲವಂತವಾಗಿ ಸ್ತ್ರೀಯರನ್ನು ಬೆಂಕಿಗೆ ನೂಕಿದ ಉದಾಹರಣೆಗಳು ಬೇಕಾದಷ್ಟು ಇದ್ದವು. ಕಾಲಾಂತರದಲ್ಲಿ ಕನ್ನಡ ಮಹಿಳೆಗೆ ದೊರೆಯುತ್ತಿದ್ದ ಸ್ತ್ರೀಧನ ಅಲ್ಪವಾದದ್ದೇ ಆಕೆಯ ಜೀವ ಉಳಿಯಲು ಸಹಾಯಮಾಡಿತು!

**ವೇಶ್ಯಾವರ್ಗದ ಸ್ಥಾನಮಾನಗಳು :** ವೇಶ್ಯಾವರ್ಗವೆಂಬುದು ಭಾರತೀಯ ಸಮಾಜದ ಅವಿಭಾಜ್ಯ ಅಂಗವೆಂದು ಗುರುತಿಸಲ್ಪಟ್ಟು ಅನೇಕ ಶತಮಾನಗಳು ಗತಿಸಿದ್ದವು. ವಿದ್ಯಾವಂತ ಮತ್ತು ಹಲವಾರು ಕಲೆಗಳನ್ನು ರೂಢಿಸಿಕೊಂಡ ಗಣಿಕೆಯರು, ಸಂಗೀತಗೋಷ್ಠಿ ಮತ್ತು ಕಾವ್ಯಗೋಷ್ಠಿಗಳನ್ನು ರಸಿಕರಿಗಾಗಿ ತಮ್ಮ ಮನೆಗಳಲ್ಲಿ ನಡೆಸುವಷ್ಟು ಸಮರ್ಥರಿದ್ದರು. ವಾತ್ಸ್ಯಾಯನನಿಂದ, ಕವಿ ರಾಜಶೇಖರನ ಕೃತಿಗಳಿಂದ ದೊರೆಯುವ ಚಿತ್ರ ಇದು. ಸಮಾಜದ ಶ್ರೀಮಂತ ವರ್ಗ, ಅವರಿಗೆ ಪೋಷಕವಾಗಿತ್ತು. ಆದರೆ ಸಾಮಾನ್ಯವರ್ಗಕ್ಕೆ ಕಟ್ಟುಪಾಡುಗಳನ್ನು ವಿಧಿಸುವ ಸ್ಮೃತಿಗಳೇನೂ ಈ ವರ್ಗದ ಬಗ್ಗೆ ಹೆಚ್ಚಿನ ಗೌರವ ತಳೆದಂತಿಲ್ಲ. ಪಂಚ ಚೂಡಾ ಎಂಬ ಅಪ್ಸರೆಯರಿಂದ ಹುಟ್ಟಿದ ಕುಲದ ಇವರಿಗೆ ಲೈಂಗಿಕ ಸ್ವಾತಂತ್ರ್ಯವಿತ್ತು. ಆದರೆ ವೇಶ್ಯಾಗಮನ ಅಪರಾಧವೆನಿಸಿಕೊಳ್ಳುತ್ತಿತ್ತು. ಗಂಡಸರಿಗೂ ಕಟ್ಟುನಿಟ್ಟಿನ ಸಂಯಮದ ಜೀವನ ಬೋಧಿಸುವ ಧರ್ಮಶಾಸ್ತ್ರಗಳು, ಕೌಟುಂಬಿಕ ಜೀವನಕ್ಕೆ ಹೆಚ್ಚಿನ ಮಹತ್ವ ನೀಡಿದ್ದವು.

ಆದರೆ, ಸಮಾಜದ ಅಂಗವಾಗಿ ಬೆಳೆದ, ಬೆಳೆಯುತ್ತಲೇ ಇದ್ದ ವರ್ಗವನ್ನು ಅಲಕ್ಷಿಸುವಂತೆ ಇರಲಿಲ್ಲ. ಸವರ್ಣ ಸ್ತ್ರೀಯರೂ ದಾರಿತಪ್ಪಿ, ಮನೆಯಿಂದ ಹೊರಹಾಕಲ್ಪಡುವ ಸಾಧ್ಯತೆಯನ್ನು ಸ್ಮೃತಿಕಾರರು ಗಮನಿಸಿದ್ದರು. ಸ್ವೈರಿಣಿ, ಅಬ್ರಾಹ್ಮಣಿ, ವೇಶ್ಯಾ, ದಾಸೀ, ನಿಷ್ಕಾಸಿನಿ (ಹೊರಹಾಕಲ್ಪಟ್ಟವಳು) ಎಂಬ ಈ ವರ್ಗದ ದುರದೃಷ್ಟೆಯರ ವಿಭಜನೆ ಮನುವಿನ ಕಾಲದಿಂದಲೂ ನಡೆದು ಬಂದಿತ್ತು. ಆಯಾ ವರ್ಣದ ಕಟ್ಟುಪಾಡುಗಳು, ಅಂಥವರಿಗೆ ಸಲ್ಲುತ್ತಿದ್ದ ಸೂಚನೆ ಮಿತಾಕ್ಷರದಲ್ಲಿದೆ. ಅಂದರೆ ಕಾಮಿಸುವ ಪುರುಷರಿಗೆ ಲಭ್ಯರಲ್ಲ!ಎಂದು ವಿಜ್ಞಾನೇಶ್ವರನು ಎಚ್ಚರಿಸಿದ್ದಾನೆ. ಹೆಣ್ಣು ಒಬ್ಬನೇ ಗಂಡಸಿನ ರಕ್ಷಣೆಯಲ್ಲಿದ್ದು ಇತರರು ತಡವಿದರೆ ಶಿಕ್ಷೆಯಿತ್ತು.

ಹೊಟ್ಟೆಪಾಡಿಗೆ ವೇಶ್ಯಾವೃತ್ತಿ ಕೈಕೊಳ್ಳಬೇಕಾಗಿ ಬಂದ ಸ್ತ್ರೀಯರಿಗೆ ನಿರ್ದಿಷ್ಟವಾಗಿದ್ದ ಶುಲ್ಕಕೊಡದೇ ಮೋಸ ಮಾಡಿದರೆ ದಂಡವಿತ್ತು. ಹಣಕ್ಕೆ ಲಭ್ಯವಿದ್ದವರನ್ನೂ ಬಲಾತ್ಕಾರಿಸಿದರೆ ಶಿಕ್ಷೆಯಿತ್ತು. ಹಲ್ಲು-ಉಗುರುಗಳಿಂದ ಹಿಂಸೆ ಮಾಡುವವನಿಗೆ, ವಿಕೃತ ಕಾಮಿಗಳಿಗೆ ಶಿಕ್ಷೆಯಿದ್ದು ಮಾನವ ಸ್ವಭಾವದ ವಿಕೃತಿಗಳನ್ನು ಅಂದಿನವರು ಗುರುತಿಸಿದ್ದು ವಿಶೇಷ!

ಪರಸ್ತ್ರೀಯನ್ನು ಉಪಭೋಗಿಸಿದ ನಂತರ ಹಣಕೊಡದವನಿಂದ, ಆಕೆಗೆ ನಿರ್ದಿಷ್ಟಪಡಿಸಿದ ಎಂಟು ಪಟ್ಟು ಹಣವನ್ನು ಕೊಡಿಸಬೇಕು ಮತ್ತು ಅಷ್ಟೇ ಮೊತ್ತದ ದಂಡವನ್ನು ರಾಜನು ವಿಧಿಸಬೇಕು, ಎಂದು ಹೇಳಲಾಗಿದೆ. ದಣಿದವರು, ವ್ಯಾಧಿಗ್ರಸ್ತರು ರಾಜಕಾರ್ಯದಲ್ಲಿ ತೊಡಗಿದವರು ಹಣ ಪಡೆದೂ ಭೋಗಕ್ಕೆ ಒಪ್ಪದಿದ್ದರೆ ಶಿಕ್ಷೆಯಿರಲಿಲ್ಲ.

ಉಪಪತ್ನಿಯರ ಬಗ್ಗೆ ಒಂದು ಮಾತು. ಗೃಹಸ್ಥನಾದವನು ಸಮಾಜಸಾಕ್ಷಿಯಾಗಿ ಕೈಹಿಡಿದಾಕೆಯ ಹೊಟ್ಟೆ ಬಟ್ಟೆಯ ವ್ಯವಸ್ಥೆ ಮಾಡಬೇಕಿತ್ತು. ಇವರಲ್ಲಿ ಅವರುದ್ಧಾ ಮತ್ತು ಭುಜಿಷ್ಯಾ ಎಂಬ ವರ್ಗಭೇದವಿತ್ತು. ಅವರುದ್ಧೆಯರು ಶ್ರೀಮಂತರ ವಾಡೆಯಲ್ಲಿದ್ದರೆ. ಭುಜಿಷ್ಯೆಯರು ಹೊರಗಿದ್ದು ಕೃಪಾಪಾತ್ರರು. ಅವರನ್ನು ಇತರರು ತಡವಿದರೆ ಶಿಕ್ಷೆಯಾಗಿತ್ತಿತ್ತು. ವಿವಾಹಿತ ಪತ್ನಿಯರಂತೆ, ಇವರಿಗೆ ಆಸ್ತಿ ಅಶನಾರ್ಥದ ಹಕ್ಕನ್ನು ಮಿತಾಕ್ಷರಾದ ಆಧಾರದ ಮೇಲೆ ಕೊಡಮಾಡಿದ ಕೆಲ ಉದಾಹರಣೆಗಳನ್ನು ಕಾಣೆಯವರ ಧರ್ಮಶಾಸ್ತ್ರದ ಚರಿತ್ರೆಯಲ್ಲಿ ಕಾಣಬಹುದು.

ಈ ಕಾಲಕ್ಕೆ ದೇವಸ್ಥಾನಗಳನ್ನು ಕಟ್ಟಿಸಿ ಪಾತ್ರದ ಹೆಂಗಳೆಯರನ್ನು, ಸೂಳೆಯರನ್ನು ದೇವರಸೇವೆಗೆ ಬಿಡುವದು ಕರ್ನಾಟಕದಲ್ಲಿ ಸಾಮಾನ್ಯವಾಗಿತ್ತು. ಅನೇಕ ಶಾಸನಗಳು ಈ ವಿಚಾರದ ಕುರಿತು ವಿವರಗಳನ್ನು ಕೊಡುತ್ತವೆ. ಆದರೆ ಈ ಪದ್ಧತಿ, ಸ್ಮೃತಿ ಸಮ್ಮತವಿದ್ದಿರಲಿಲ್ಲ. ಮಿತಾಕ್ಷರದಲ್ಲಿ ಅದರ ಉಲ್ಲೇಖವಿಲ್ಲ. ದಾಸಿಯರನ್ನು ಹೆಸರಿಸುತ್ತದೆಯೇ ಹೊರತು ದೇವದಾಸಿಯರನ್ನಲ್ಲ.

ಉಪಸಂಹಾರ : ಒಟ್ಟಿನಲ್ಲಿ ಮಿತಾಕ್ಷರ ಸಂಹಿತೆ, ಯಾಜ್ಞವಲ್ಕ್ಯ ಸ್ಮೃತಿಯ ಚೌಕಟ್ಟನ್ನು ತನ್ನ ಬದಲಾದ ಕಾಲಕ್ಕೆ ಅನುಗುಣವಾಗಿ ಸರ್ವಜನಕ್ಕೂ ಉಪಯೋಗವಾಗುವಂತೆ ವಿಶ್ಲೇಷಿಸಲು ಪ್ರಯತ್ನಿಸಿದೆ. ತನ್ನ ಕಾಲದ ಸಾಮಾಜಿಕ ವ್ಯವಹಾರ ಮತ್ತು ನಂಬಿಕೆಗಳನ್ನು ಗುರುತಿಸಿ ಅವಕ್ಕೆ ಶಾಸ್ತ್ರ-ಸಮ್ಮತಿನ್ನು ಕೊಡಮಾಡಲು ವಿಜ್ಞಾನೇಶ್ವರ ಯಥಾಶಕ್ತಿ ಪ್ರಯತ್ನಿಸಿದ. ಹೊಸದನ್ನು ಹುಟ್ಟು ಹಾಕುವುದು ವ್ಯಾಖ್ಯಾನಕಾರನ ಕೆಲಸವಲ್ಲ. ಹಳೆಯದು ಹೊಸರೂಪದಲ್ಲಿ ಮುಂದುವರಿಯುವಂತೆ ನೋಡಿಕೊಳ್ಳುವುದು ಮುಖ್ಯವಾಗಿತ್ತು. ಸುರಾಪಾನ, ಜೂಜು ಮುಂತಾದವಕ್ಕೆ ಕೊಡಮಾಡಿದ ಶಿಕ್ಷೆ ಪ್ರಾಯಶ್ಚಿತ್ತಗಳನ್ನು ಗಮನಿಸಿದರೆ ಇವು ಹಿಂದೆ. ಇಂದು, ಎಂದೆಂದಿಗೂ ಸಾಮಾಜಿಕ ದೌರ್ಬಲ್ಯಗಳಾಗಿದ್ದವು ಎಂದು ತೋರುತ್ತದೆ! ಶಾಸ್ತ್ರಾದ್ ರೂಢಿರ್ಬಲೀಯಸೀ ಎಂಬ ಸತ್ಯವನ್ನು ಸ್ಮೃತಿಕಾರರೂ ಸಾಮಾನ್ಯರು ಒಟ್ಟಿಗೆ ನಂಬಿದ್ದರು ಎಂಬ ಮಾತನ್ನು ಮರೆಯುವಂತಿಲ್ಲ! "ಆದರ್ಶ ಗೃಹಸ್ಥ ಧರ್ಮ, ಗೃಹಿಣಿ ಧರ್ಮವೆಂಬುದು ಹೀಗೆ ಇರುತ್ತದೆ. ಅದನ್ನು ಪಾಲಿಸಲು ಯತ್ನಿಸಿರಿ!" ಎಂಬ ಮಾತನ್ನು ಪದೇ ಪದೇ ನೆನಪಿಸಲು

ಸನಾತನ ಧರ್ಮವು ಸ್ಮೃತಿಕಾರರ ಮೂಲಕ ಜನತೆಯನ್ನು ಎಚ್ಚರಿಸಿತು, ಎಂಬುದನ್ನು ಗ್ರಹಿಸಿದರೆ. ಮುಸ್ಲಿಂ ದಾಳಿಗಳು, ಇಸ್ಲಾಂ ಮತ ಪ್ರಸಾರ, ಮೊಗಲರ ಆಡಳಿತ, ಈ ಪ್ರದೇಶದಲ್ಲಿ ನಾಲ್ಕು ಶಾಹೀ ಆಡಳಿತಗಳ ಪ್ರಭಾವ, ಒಂದೇ ಸವನೇ ಮುಂದುವರಿದರೂ ಮೂಲ ಭಾರತೀಯ ಸಂಸ್ಕೃತಿ ಪೂರಾಮಣ್ಣುಗೂಡಿ ಹೋಗದಿರುವುದಕ್ಕೆ ಕೆಲಮಟ್ಟಿಗೆ ಮಿತಾಕ್ಷರದ ಪ್ರಭಾವ ಕಾರಣವಾಗಿದೆಯೆಂದು ಅನಿಸುತ್ತದೆ. ಸಾಮಾಜಿಕ ನ್ಯಾಯದ ಮಟ್ಟಿಗೆ ಹೋದ ಶತಮಾನದ ೪ನೇ ದಶಕದವರೆಗೂ ಮಿತಾಕ್ಷರಾ ಪ್ರಮಾಣ ಗ್ರಂಥವಾಗಿದ್ದರೆ, ಅದರಲ್ಲಿರುವ ಸರ್ವಸಮ್ಮತವಾದ ಕೆಲವು ಅಂಶಗಳು ಕಾರಣವಾಗಿವೆ.

ಒಳ್ಳೆಯ ಶಾಸ್ತ್ರ ಪಂಡಿತರು, ಧರ್ಮಸಿಂಧುವನ್ನು ಅನುಕೂಲ ಸಿಂಧುವಾಗಿಸಲು ಸಹಾಯಮಾಡುತ್ತಿದ್ದರು. ಪ್ರಾಯಶ್ಚಿತ್ತಾದಿಗಳನ್ನು ವಿಧಿಸಿ ತಪ್ಪಿತಸ್ಥರಿಗೆ ತಿರುಗಿ ಸನ್ಮಾರ್ಗಕ್ಕೆ ತರುವ ಪ್ರಯತ್ನ ಮಾಡುತ್ತಿದ್ದರು. ಕೆಲವು ಅಜ್ಞಾನಿಗಳು, ಮುಗ್ಧರಿಗೆ ದಾರಿಯನ್ನು ತಪ್ಪಿಸುತ್ತಿದ್ದರು. ಶಿಕ್ಷಣ, ಸಾಕ್ಷರತಾಪ್ರಸಾರ, ಕಾಗದ ಮುದ್ರಣಗಳ ಸೌಲಭ್ಯ, ಸಮೂಹ ಮಾಧ್ಯಮಗಳ ಸಂಪರ್ಕ ಜಾಲಗಳ ಮೂಲಕ ಸಾರ್ವಜನಿಕರ ಅರಿವು ಬೆಳೆಸುವ ಎಲ್ಲಾ ಅನುಕೂಲಗಳು ಇದ್ದ ಇಂದಿನ ದಿವಸಗಳಲ್ಲಿ ಕೂಡ, ಬಾಲಕಾರ್ಮಿಕರು, ಜೀತ, ದೇವದಾಸಿ ಪದ್ಧತಿ, ಬಾಲವಿವಾಹ, ಹೆಣ್ಣುಮಕ್ಕಳ ಮಾರಾಟ ಮುಂತಾದ ದುಷ್ಟ ಪದ್ಧತಿಗಳಿಂದ ನಮ್ಮ ಸಮಾಜ ಮುಕ್ತವಾಗಿಲ್ಲ! ಇವು ಯಾವವನ್ನೂ ವ್ಯಾಖ್ಯಾನಕಾರ ವಿಜ್ಞಾನೇಶ್ವರ, ಉಲ್ಲೇಖಿಸಿಲ್ಲ, ಪ್ರೋತ್ಸಾಹಿಸಿಲ್ಲ, ವಿಜ್ಞಾನೇಶ್ವರ ಕಂಡ, ವ್ಯಾಖ್ಯಾನಿಸಿದ, ಸಮಾಜಕ್ಕಿಂತ ನಾವು ಬದುಕುತ್ತಿರುವ ಸಮಾಜ, ಎಷ್ಟರಮಟ್ಟಿಗೆ, ಯಾವ ವಿಧದಲ್ಲಿ ಭಿನ್ನವಾಗಿದೆ? ಎಂದು ನಮಗೆ ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ.





**ಡಾ. ಜ್ಯೋತ್ಸ್ನಾ ಕಾಮತ್**

ಡಾ. ಜ್ಯೋತ್ಸ್ನಾ ಕಾಮತ್ ಎಂ. ಎ., ಡಿ.ಎಡ್. ಪಿಎಚ್.ಡಿ. ಇವರು ಕಳೆದ ನಲವತ್ತು ವರ್ಷಗಳಿಂದ ಇತಿಹಾಸ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇಂಗ್ಲೀಷ್, ಕನ್ನಡ, ಕೊಂಕಣಿ ಭಾಷೆಗಳಲ್ಲಿ ಜ್ಯೋತ್ಸ್ನಾ ಕಾಮತ್ ಅವರ ೨೫೦ ಕ್ಕೂ ಹೆಚ್ಚು ಲೇಖನಗಳು, ಹತ್ತು ಪುಸ್ತಕಗಳು ಪ್ರಕಟವಾಗಿವೆ. ಮಗ ವಿಕಾಸ ಕಾಮತರೊಂದಿಗೆ www.kamat.com ಎಂಬ ವೆಬ್ಸೈಟ್ ನಡೆಸುತ್ತಿದ್ದು ಜಗತ್ತಿನಾದ್ಯಂತ ೪೦ ಲಕ್ಷ ಜನ ಪ್ರತಿ ತಿಂಗಳು ವೀಕ್ಷಿಸುತ್ತಾರೆ. ಭಾರತ ಮತ್ತು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದ ಲೇಖನಗಳನ್ನು ಬರೆಯುವದು ಇವರ ಹವ್ಯಾಸ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕಿಟೆಲ್ ಹಾಗೂ ಶಾಶ್ವತೀ ಟ್ರಸ್ಟಿನ ಸಂಶೋಧನೆಗೆ ಮೀಸಲಾದ ಪ್ರಶಸ್ತಿಗಳು ಇವರಿಗೆ ಸಂದಿವೆ. ಇವರು ೨೦೦೧ ನೇ ವರ್ಷ ಉಡುಪಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾಡೆಮಿಯ ೧೫ ನೇ ವಾರ್ಷಿಕ ಅಧಿವೇಶನದ ಸರ್ವಾಧ್ಯಕ್ಷರಾಗಿದ್ದರು.

ಇವರ ಸಂಶೋಧನೆಯ ಕೆಲವು ಹೊರಳು ನೋಟಗಳು ಇಲ್ಲಿವೆ. ಇತಿಹಾಸದ ಅಭ್ಯಾಸವೆಂಬುದು ಹಿಂದಿನ ಶಾಲಾ- ಕಾಲೇಜುಗಳಲ್ಲಿ ಕೇವಲ ರಾಜಮನೆತನಗಳ ಚರಿತ್ರೆ, ಯುದ್ಧಗಳು, ಒಡಂಬಡಿಕೆಗಳು, ಇಸ್ವಿಗಳ ಸರಮಾಲೆಗೆ ಒತ್ತುಕೊಡಲ್ಪಟ್ಟ ವಿಷಯವಾಗಿತ್ತು. ಆ ದಿನಗಳಲ್ಲಿ ಕರ್ನಾಟಕದ ಜನಸಾಮಾನ್ಯರ ಕುರಿತು ಅವರ ದೈನಂದಿನ ಜೀವನಕ್ರಮದ ಕುರಿತು, ಅಧ್ಯಯನವನ್ನು ಡಾ. ಜ್ಯೋತ್ಸ್ನಾ ಅವರು ಕೇಂದ್ರೀಕರಿಸಿದರು. ಸಂಸ್ಕೃತ, ಕನ್ನಡ ಶಾಸನಗಳು, ಶಾಸ್ತ್ರಗ್ರಂಥಗಳು, ಕಾವ್ಯಗಳು, ಶಿಲ್ಪಗಳು, ವಿದೇಶಿಯರ ವೃತ್ತಾಂತಗಳನ್ನೆಲ್ಲ ಪುರಾವೆಗಾಗಿ ಬಳಸಿದರು.

ಹಿಂದಿನವರ ಸಾಧನೆ, ಕೇವಲ ಆಧ್ಯಾತ್ಮಿಕ ಅಥವಾ ಯುದ್ಧ ಕ್ಷೇತ್ರಗಳಿಗೆ ಸೀಮಿತವಾಗಿರಲಿಲ್ಲ. ಸುಖಜೀವನ ಸಾಧ್ಯವಾಗಿಸುವ ಹತ್ತು ಹಲವು ಪ್ರಕಾರಗಳಲ್ಲಿಯೂ ಮಿಗಿಲಾಗಿತ್ತು ಎಂಬುದನ್ನು ಇಲ್ಲಿಯ ೧೭ ಪ್ರಬಂಧಗಳಲ್ಲಿ ಕಾಣಬಹುದಾಗಿದೆ. ಕನ್ನಡಿಗರ ಜೀವನೋತ್ಸಾಹದ, ಉಲ್ಲಾಸದ ಕ್ಷಣಗಳನ್ನು ಲೇಖಕಿ, ಸ್ನಾನ-ಅನುಪಾನ, ಆಹಾರ-ವಿಹಾರ, ಆಟೋಟಗಳು, ಅಲಂಕರಣ ವಿಧಾನಗಳು, ಪೀಠೋಪಕರಣಗಳು, ಉಡಿಗೆಯ ವೈವಿಧ್ಯಾದಿಗಳನ್ನು ಸಂಶೋಧನಾಧಾರಿತವಾಗಿ ವಿಶ್ಲೇಷಿಸಿದ್ದಾರೆ.